# ಹೊಸತು

## ಒಳಗೇನಿದೆ.....




*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಹರಿಣಿ*
*ಮುಖಪುಟ - ಕುಮಾರಧಾರೆ. ಚಿತ್ರ : ಕೆ. ಪಿ. ಸ್ವಾಮಿ*
*ಗಾಂಧೀಜಿ ವರ್ಣಚಿತ್ರ : ಜಾಮಿನಿ ರಾಯ್*
*ವಿನ್ಯಾಸ : ನವಕರ್ನಾಟಕ ವಿನ್ಯಾಸ ಕಚೇರಿ ಸಹಕಾರ : ಜಿ. ವಿ. ತೇಜೋವತಿ*


**ವೀ**ರಪ್ಪನ ಅಡಗುದಾಣಕ್ಕೆ ಗೋಪಾಲ್ ಮುಖಾಂತರ ಏನೇನು ಸಂದೇಶಗಳನ್ನು ರವಾನಿಸಲಾಗಿದೆ ಮತ್ತು ಅಲ್ಲಿಂದ ಏನೇನು ಸಂದೇಶಗಳು ಬಂದಿವೆ ಎಂಬುದೆಲ್ಲಾ ಸಾರ್ವಜನಿಕರಿಗೆ ತಿಳಿದಿಲ್ಲ, ಸದ್ಯಕ್ಕೆ ತಿಳಿಯುವಂತೆಯೂ ಇಲ್ಲ. ಲೆಕ್ಕವಿಲ್ಲದಷ್ಟು ಊಹಾಪೋಹಗಳು ಪ್ರಚಾರದಲ್ಲಿವೆ. ಅವನ್ನು ಪೂರ್ಣವಾಗಿ ನಂಬುವ ಮಾತೇ ಇಲ್ಲ; ಏಕೆಂದರೆ, ಅವುಗಳಲ್ಲಿ ಎಷ್ಟೋ ಪರಸ್ಪರ ವಿರುದ್ಧವಾಗಿವೆ. ಖಚಿತವಾಗಿ ತಿಳಿದಿರುವುದು ಮುಖ್ಯಮಂತ್ರಿಗಳು ಹಾಗೂ ರಾಜಕುಮಾರ್ ಅವರ ಕುಟುಂಬದವರು ಬಹಿರಂಗವಾಗಿ ನೀಡಿರುವ ಹೇಳಿಕೆಗಳ ಸಾರ ಮಾತ್ರ. ಆಕಾಶವಾಣಿಯ ಮೂಲಕ ಆಗಿಂದಾಗ್ಗೆ ರಾಜ್ ಕುಟುಂಬದವರ ಸಂದೇಶಗಳು ಪ್ರಸಾರವಾಗುತ್ತವೆ. ಅವನ್ನು ಕಾಡಿನ ಕಳ್ಳ ವೀರಪ್ಪ ಕೇಳುತ್ತಾನೋ ಇಲ್ಲವೋ ತಿಳಿಯದು. ಅಂತೆಯೇ, ಅವನ್ನು ಕೇಳಲು ಡಾ|| ರಾಜಕುಮಾರ್ ಅವರಿಗೆ ಅವಕಾಶ ಕಲ್ಪಿಸಿಕೊಡುತ್ತಾನೋ ಇಲ್ಲವೋ ಎಂಬುದೂ ತಿಳಿಯುವಂತಿಲ್ಲ. ಅಪಹೃತರು ವಾಪಸ್ಸಾದ ನಂತರ ಅದು ತಿಳಿಯಬಹುದೇನೋ ಅಷ್ಟೆ. ರಾಜ್ ಕುಟುಂಬದ ಹತ್ತಾರು ಮಂದಿ ಸಂದೇಶ ಕಳಿಸುತ್ತಿರುತ್ತಾರೆ. ಅವರಲ್ಲಿ ಒಂದು ಪುಟ್ಟ ಪಾಪುವೂ ಸೇರಿದೆ. ಎಲ್ಲರದೂ ಒಂದೇ ರಾಗ : ''ಅಪ್ಪಾಜಿ, ನೀವು ಬೇಗ ಬಂದುಬಿಡಿ, ನೀವಿಲ್ಲದೆ ನಾವು ಇರುವುದಕ್ಕೆ ಆಗುವುದಿಲ್ಲ. ನಾವು ಚೆನ್ನಾಗಿದ್ದೇವೆ, ನೀವೇನೂ ಯೋಚನೆ ಮಾಡಬೇಡಿ. ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ. ಎಲ್ಲರನ್ನೂ ಕೇಳಿದೆವೆಂದು ಹೇಳಿ.'' ಈ ಮಾತುಗಳು ಎಲ್ಲರ ಭಾವನೆಗಳನ್ನೂ ಪ್ರಕಟಿಸುತ್ತವೆ. ಆದರೆ 'ಬಂದುಬಿಡುವುದು' ರಾಜ್ ಅವರ ಇಚ್ಛೆಯಂತೆ ಅಷ್ಟು ಸುಲಭವಾಗಿ ಆಗುವುದಿಲ್ಲವೆಂಬುದೇ ಪೇಚಿನ ಸಂಗತಿ. ಅದು ವೀರಪ್ಪನ್ ಇಚ್ಛೆಯೂ ಆಗಬೇಕಾಗಿದೆ. ಅದಕ್ಕೆ ಯತ್ನ ಮುಂದುವರಿದಿದೆ.

ಕಾಡಿನ ಈಚೆಗೆ ನಾಡಿನಲ್ಲೂ ವೀರಪ್ಪನ್ ಸಂತತಿ ಇದೆ. ಅದಕ್ಕೆ ಸೇರಿದ ಕೆಲವರು ಭಾರತದ ಪ್ರಜಾಪ್ರಭುತ್ವ ಪದ್ಧತಿಯನ್ನು ಒತ್ತೆಯಾಳನ್ನಾಗಿ ಮಾಡಿಕೊಂಡು ರಾಷ್ಟ್ರದ ಜನತೆಯನ್ನು ಬೆದರಿಸುತ್ತಾರೆ. ತಮ್ಮ ಹಾಗೂ ತಮ್ಮವರ ಆಳ್ವಿಕೆಯ ಸ್ಥಾಪನೆ ಮತ್ತು ಭದ್ರಗೊಳಿಸಿಕೊಳ್ಳುವಿಕೆಗೆ ಏನೇನು ಕುತಂತ್ರ ನಡೆಸಿದರೂ ಅದು ನ್ಯಾಯಯುತ, ಮಾನ್ಯ ಹಾಗೂ ಜನಪರ ಎಂಬ ಧೂರ್ತತೆ ಮತ್ತು ಅವಿವೇಕ ಅವರದು. ಜಾರ್ಜ್ ಫರ್ನಾಂಡಿಸ್ ಪಶ್ಚಿಮ ಬಂಗಾಳಕ್ಕೆ ಸಂಬಂಧಿಸಿದಂತೆ ಮಾಡುತ್ತಿರುವುದು ಇದನ್ನೇ. ಮಮತಾದೇವಿಯನ್ನು ಸಂಪ್ರೀತಗೊಳಿಸಲು ಈ ರಕ್ಷಣಾ ಸಚಿವರು ಬಂಗಾಳಕ್ಕೆ ಒಂದು ದಿನದ ಭೇಟಿ ನೀಡಿ ಒಟ್ಟು ಮೂರು ಹಳ್ಳಿಗಳಿಗೆ ಹೋಗಿಬಂದರು. ಎರಡು ಗಂಟೆಗಳ ಸಮಯ ಅದಕ್ಕೆ ವ್ಯಯ ಮಾಡಿ, ಪಶ್ಚಿಮ ಬಂಗಾಳದಲ್ಲಿ ಕಾನೂನು ಪರಿಪಾಲನೆ ಬಿಹಾರದಲ್ಲಿರುವುದಕ್ಕಿಂತ ಕಳಪೆಯದೆಂದು ಕೇಂದ್ರ ಗೃಹಮಂತ್ರಿಗೆ ವರದಿ ನೀಡಿದ್ದಾರೆ. ಪಾದರಸದಂತಹ ಚಟುವಟಿಕೆ ಎಂದರೆ ಇದಲ್ಲವೆ ?

ಮಮತಾ ಅವರಿಗೆ ತಿಳಿಯಹೇಳಲು ಫರ್ನಾಂಡಿಸ್ ಯತ್ನಿಸಬಹುದಿತ್ತು : ''ನೀವೇ ನಿಮ್ಮ ಅನುಯಾಯಿಗಳನ್ನು ಹಿಂಸಾಚಾರಕ್ಕೆ ಪ್ರಚೋದಿಸಿ ಆಮೇಲೆ ಇಲ್ಲೆಲ್ಲಾ ಹಿಂಸೆ ತಾಂಡವವಾಡುತ್ತಿದೆಯೆಂದು ಬೊಬ್ಬೆ ಹಾಕುವುದು ಸರಿಯಲ್ಲ. ಮುಂದಿನ ಚುನಾವಣೆಯಲ್ಲಿ ಜ್ಯೋತಿಬಾಬು ಅವರನ್ನು ಸಾಧ್ಯವಾದರೆ ಸೋಲಿಸೋಣ. ಆವರೆಗೆ ಜನರ ಸಂಕಷ್ಟಗಳ ಪರಿಹಾರಕ್ಕೆ ಕ್ರಿಯಾತ್ಮಕವಾಗಿ ಅವರ ಮಧ್ಯೆ ಕೆಲಸ ಮಾಡೋಣ.'' ಹೀಗೆ ಹೇಳಿದರೆ ಬಾಳ ಠಾಕ್ರೆಗಿಂತ ತಾನು ಭಿನ್ನವಾಗಿಬಿಡಬಹುದೆಂಬ ಅಂಜಿಕೆ ಫರ್ನಾಂಡಿಸ್‌ರದು. ಚುನಾವಣೆ ಪ್ರಕ್ರಿಯೆಯಲ್ಲಿ ಠಾಕ್ರೆಯ ಮೊದಲ ಹೆಜ್ಜೆ ಏನಾಗಿತ್ತು ? ಪರೇಲ್‌ನ ಕಮ್ಯುನಿಸ್ಟ್ ಶಾಸಕನ ಹತ್ಯೆ ಮಾಡಿಸಿ ಅಲ್ಲಿಂದ ಶಿವಸೇನೆಯ ಅಭ್ಯರ್ಥಿಯನ್ನು ಗೆಲ್ಲಿಸಿದ್ದು ! ಜಾರ್ಜ್-ಮಮತಾ ಬಂಗಾಳದಲ್ಲಿ ಮಾಡಹೊರಟಿರುವುದು ಇದನ್ನೇ. ಡೈನಮೈಟ್ ಖ್ಯಾತಿಯ ವೀರನಿಗೆ ತಾನು ಮಾಡಿದ್ದೆಲ್ಲಾ ಪ್ರಜಾಪ್ರಭುತ್ವದಲ್ಲಿ ಮಾನ್ಯವೆಂಬ ಅಹಂಕಾರವಿದೆ.

ಅವರಿಬ್ಬರಿಗೂ ಜನಗಳ ಸಮ್ಮತಿ ಮತ್ತು ಬೆಂಬಲಗಳಿಗಾಗಿ ಕಾಯುವಷ್ಟು ಸಹನೆಯಿಲ್ಲ. ಅವನ್ನು ದೊರಕಿಸಿಕೊಳ್ಳಲು ಸಾಮಾಜಿಕ-ಆರ್ಥಿಕ ಕಾರ್ಯಕ್ರಮಗಳೂ ಬೇಡ ; ಏಕೆಂದರೆ ಅದು ದೀರ್ಘಕಾಲದ ಶ್ರಮವಾಗುತ್ತದೆ. ಹೈ-ಟೆಕ್ ಯುಗದಲ್ಲಿ ಅಷ್ಟು ವಿರಾಮ ಎಲ್ಲಿದೆ ? ಅದನ್ನು ಬೇಕಾದರೆ ಜ್ಯೋತಿ ಬಸು ವೃಂದದವರು ಮಾಡಿಕೊಳ್ಳಲಿ ! ರೈತ ಕಾರ್ಮಿಕರು ಬೇಕಾದ್ದು ಅವರಿಗೇ ತಾನೆ ?ಜಾರ್ಜ್ ಮಮತಾ ಜಂಟಿಯಾಗಿ ಭೂಮಾಲಿಕರ ರಕ್ಷಕರಾಗುತ್ತಾರೆ.

ಪರಮಾಣು ಬಾಂಬ್ ಮಾಡಿದಾಗ ಚೀಣಾ ನಮ್ಮ ಶತ್ರುವೆಂದ ಜಾರ್ಜ್ ಈಗ ವೈಜ್ಞಾನಿಕ ವಿಸ್ಮಯದ ಕಾದಂಬರಿಯೊಂದನ್ನು ಚಾರಿತ್ರಿಕ ದಾಖಲೆಯೆಂಬಂತೆ ವ್ಯವಹರಿಸಿದ್ದಾರೆ. ಚೀಣಾ ಮತ್ತು ಪಾಕಿಸ್ತಾನ ಒಂದಾಗಿ ೨೦೦೮ರ ವೇಳೆಗೆ ಭಾರತದ ಮೇಲೆ ಅಣ್ವಸ್ತ್ರ ಧಾಳಿ ಮಾಡುತ್ತವೆಂದು ಆ ಕಾದಂಬರಿ ಹೇಳುತ್ತದಂತೆ. ಹೌದು, ಅದು ಊಹೆಯಲ್ಲ, ಹಾಗಾಗುವ ಸಾಧ್ಯತೆ ಇದೆ, ಎಂದು ಜಾರ್ಜ್ ಹೇಳಿದ್ದಾರೆ. ಬೇಜವಾಬ್ದಾರಿತನದ ಪರಮಾವಧಿ ಎಂದರೆ ಇದೇ. ಇಂತಹ ರಕ್ಷಣಾ ಸಚಿವರಿರುವಾಗ ನಮಗೆ ಹೊರಗಿನ ಶತ್ರುಗಳ ಅವಶ್ಯಕತೆಯೇ ಇಲ್ಲ. ಉನ್ಮಾದದಿಂದ ತುಂಬಿದ ವ್ಯಕ್ತಿ ಪ್ರಜಾಪ್ರಭುತ್ವಕ್ಕೆ ಸೊಪ್ಪು ಹಾಕುತ್ತಾನೆಂಬ ಭ್ರಾಂತಿ ಸರ್ವಥಾ ಸಲ್ಲದು.

-ಜಿ. ಆರ್.



ತಿಂಗಳ ಪತ್ರಿಕೆ

**ಹೊಸತು**

ನಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೩ ಅಕ್ಟೋಬರ್ ೨೦೦೦

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೮೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**


# ಸಹಜ ಮೈತ್ರಿಕೂಟ ?

೧೯೮೦ರ ದಶಕದಲ್ಲಿ ಕ್ಯೂಬಾದ ಅಧ್ಯಕ್ಷ ಡಾ॥ ಫಿಡೆಲ್ ಕ್ಯಾಸ್ಟ್ರೋ ಅಂದಿನ ಸಮಾಜವಾದಿ ರಾಷ್ಟ್ರಗಳನ್ನು, ಅಂದರೆ ಸೋವಿಯೆತ್ ಒಕ್ಕೂಟ, ಚೀಣಾ, ಜಿ.ಡಿ.ಆರ್. ಮುಂತಾದುವನ್ನು, ಅಲಿಪ್ತ ರಾಷ್ಟ್ರಗಳ ಸಹಜ ಮಿತ್ರರೆಂದು ಆಗಾಗ್ಗೆ ಹೇಳುತ್ತಿದ್ದರು. ಭಾರತವು ಅನುಸರಿಸುತ್ತಿದ್ದ ಅಲಿಪ್ತ ನೀತಿಯನ್ನು ಖೋಟಾ ಅಲಿಪ್ತ ನೀತಿಯೆಂದು ಜರಿಯುತ್ತಿದ್ದ ಅಟಲ್ ಬಿಹಾರಿ ವಾಜಪೇಯಿಯವರು 'ಸಾಚಾ ಅಲಿಪ್ತ ನೀತಿ' ಬೇಕೆಂದು ವಾದಿಸುತ್ತಿದ್ದರು. ಈಚಿನ ಒಂದು ತಿಂಗಳಲ್ಲಿ ಅಂತಹ ನೀತಿಯನ್ನು ಅವರು ಗುರುತಿಸಿದ್ದಾರೆ ಮತ್ತು ಅದನ್ನು ಅನುಸರಿಸುವುದಾಗಿ ಹೇಳುತ್ತಿದ್ದಾರೆ. ಆ ನೀತಿಯು ಅಲಿಪ್ತ ನೀತಿಯನ್ನು ಕೈಬಿಡುವಂತಹ ನೀತಿ. ಎರಡು ಪ್ರಬಲ ಬಣಗಳಿದ್ದಾಗ ಮಾತ್ರ ಅಲಿಪ್ತ ನೀತಿಯ ಮಾತು ಪ್ರಸ್ತುತವಾಗಬಹುದೆಂದು ಅವರು ಭಾವಿಸಿದಂತಿದೆ. ಹಿಂದಿನ ಸೋವಿಯೆತ್ ಒಕ್ಕೂಟವು ಛಿದ್ರವಾಗಿ ಹಿಂಜರಿತ ಅನುಭವಿಸಿರುವ ಸಂದರ್ಭದಲ್ಲಿ, ಉಳಿದಿರುವ ಒಂದೇ ಬಣದ ಪ್ರಾಥಮ್ಯವನ್ನು ಸ್ವೀಕರಿಸುವುದು ಭಾರತದಂತಹ ದೇಶಗಳಿಗಿರುವ ಏಕೈಕ ಮಾರ್ಗವೆಂದು ವಾಜಪೇಯಿ ಭಾವಿಸಿದಂತಿದೆ. ರಷ್ಯದೊಡನೆ ಸ್ನೇಹ ಮುಂದುವರೆಯಬಹುದು. ಆದರೆ ಭಾರತವು ಅಮೆರಿಕದ ನೆಚ್ಚಿನ ಮಿತ್ರನಾಗಬೇಕು. ಇಷ್ಟೇ ಆಶಯವಾಗಿದ್ದರೆ ಅದನ್ನು ಸ್ವಾಗತಿಸಬೇಕು ; ಏಕೆಂದರೆ, ನೆರೆ ರಾಷ್ಟ್ರಗಳೂ ಸೇರಿದಂತೆ ಎಲ್ಲ ದೇಶಗಳೊಡನೆ ಮೈತ್ರಿಯನ್ನು ವೃದ್ಧಿಸಿಕೊಳ್ಳುವುದು, ಸದ್ಭಾವನೆಯನ್ನು ಪಾರಸ್ಪರಿಕವಾಗಿ ಹೆಚ್ಚಿಸಿಕೊಳ್ಳುವುದು ಭಾರತದ ನೀತಿಯಾಗಿರಬೇಕು. ಸಮಾನಸ್ಕಂಧರ ನಡುವಿನ ಸ್ನೇಹವಾಗುವುದರ ಬದಲು ಯಜಮಾನ - ಕಿಂಕರನ ಸಂಬಂಧ ಗಟ್ಟಿಯಾಗಬಹುದೋ ಎಂಬುದೇ ಅಳುಕಿಗೆ ಕಾರಣ.

ವಾಜಪೇಯಿಯವರು ಭಾರತ ಮತ್ತು ಅಮೆರಿಕಾ ''ಸಹಜ ಮೈತ್ರಿಕೂಟ''ದ ಸದಸ್ಯ ರಾಷ್ಟ್ರಗಳಾಗಲು ಎಲ್ಲ ಅರ್ಹತೆಗಳನ್ನೂ ಹೊಂದಿವೆ ಎಂದಿದ್ದಾರೆ. ಅವರ ''ನೈಜ ಅಲಿಪ್ತ ನೀತಿ'' ನಮ್ಮನ್ನಿಲ್ಲಿಗೆ ತಂದಿದೆ. ಮಿತ್ರರಾಗಿರುವುದೇ ಬೇರೆ, ಮೈತ್ರಿಕೂಟವನ್ನು ಸೇರುವುದೇ ಬೇರೆ. ಕ್ಯಾಸ್ಟ್ರೋ ಹೇಳಿಕೆಗಳಲ್ಲಿ ಹಿಂದೆ ಎಂದೂ ಅಲಿಪ್ತ ರಾಷ್ಟ್ರಗಳು ಸೋವಿಯೆತ್ ಒಕ್ಕೂಟದ ನೇತೃತ್ವದಲ್ಲಿ ಮೈತ್ರಿಕೂಟವೊಂದಕ್ಕೆ ಸೇರಿಕೊಳ್ಳಬೇಕೆಂಬ ಇಂಗಿತವಿರಲಿಲ್ಲ. ಆದರೂ ಅದನ್ನು ತೀವ್ರವಾಗಿ ವಿರೋಧಿಸುತ್ತಿದ್ದ ವಾಜಪೇಯಿಯವರು ಇಂದು ಅಮೆರಿಕದೊಡನೆ ಮೈತ್ರಿಕೂಟದಲ್ಲಿ ಭಾಗಿಯಾಗುವ ಮಾತನ್ನಾಡುತ್ತಿದ್ದಾರೆ. ಇದು ಅಸಹನೀಯವಾದ, ಆಗಬಾರದ, ಆಗಗೊಡಕೂಡದ ಒಂದು ಅನಿಷ್ಟ ಬೆಳವಣಿಗೆ. ಐವತ್ತು ವರ್ಷ ಪಾಕಿಸ್ತಾನವನ್ನು ತನ್ನ ''ಮೈತ್ರಿಕೂಟ''ದಲ್ಲಿರಿಸಿಕೊಂಡಿದ್ದ ಅಮೆರಿಕಾ ಈಗ ಇದ್ದಕ್ಕಿದ್ದಂತೆ ಭಾರತಕ್ಕೆ ಆ ಸ್ಥಾನ ಕೊಡಲು ಮುಂದಾಗಿದೆ. ಅದೊಂದು ಕಾರಣದಿಂದಾದರೂ ತೀರ್ಮಾನ ಕೈಗೊಳ್ಳುವ ಮುನ್ನ ಎಚ್ಚರಿಕೆ ವಹಿಸಬೇಕಾಗಿದೆ. ಅಮೆರಿಕಕ್ಕೆ ಈಗಿನ ಆಸಕ್ತಿಗಳೇನು, ಅವುಗಳ ಪೂರೈಕೆಗೆ ಭಾರತ ಹೇಗೆ ಅನುವು ಮಾಡಿಕೊಡುವ ನಿರೀಕ್ಷೆ ಅವರಿಗಿದೆ ಎಂಬುದನ್ನು ಮೊದಲು ನಾವು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ವಾಜಪೇಯಿಯವರ ಅಮೆರಿಕಾದ ಅಧಿಕೃತ ಭೇಟಿಯನ್ನು ಸುಗಮಗೊಳಿಸಲು ಅವರ ಪ್ರವಾಸದ ಮುನ್ನ ಅಮೆರಿಕಾದ ಉದ್ಯಮಪತಿಗಳನ್ನೂ ಅಧ್ಯಕ್ಷ ಕ್ಲಿಂಟನ್ನರನ್ನೂ ಸುಪ್ರೀತರನ್ನಾಗಿಸಲು ಅಮೆರಿಕಾ ನಮಗೆ ಧಣಿ ಎಂಬಂತೆ ಕೇಂದ್ರ ಸರ್ಕಾರವು ನಡೆದುಕೊಂಡಿತು. ಭಾರತದ ವ್ಯಾಪಾರ ಸಂಬಂಧಗಳನ್ನು ಹಾಳುಗೆಡಹುವ ರೀತಿಯಲ್ಲಿ ಅಮೆರಿಕಾವು ವಿಶ್ವವ್ಯಾಪಾರ ಸಂಸ್ಥೆಯ ನಿಯಮಗಳನ್ನು ಉಲ್ಲಂಘಿಸಿದೆಯೆಂದು ಕೇಂದ್ರ ಸಚಿವಾಲಯ ಒಂದು ಟಿಪ್ಪಣಿ ತಯಾರಿಸಿ ಅದರಂತೆ ಆ ಸಂಸ್ಥೆಗೆ ದೂರು ಒಯ್ಯಬೇಕೆಂದು ಜುಲೈನಲ್ಲಿ ಸಲಹೆ ನೀಡಿತ್ತು. ಸಚಿವ ಸಂಪುಟದ ಸಭೆಯಲ್ಲಿ ಚರ್ಚೆಗೆ ಬರಬೇಕಿದ್ದ ಮುನ್ನಾದಿನ ಆ ಟಿಪ್ಪಣಿಯನ್ನು ಹಿಂದೆಗೆದುಕೊಳ್ಳಲಾಯಿತು. ಅಂತೆಯೇ ದೂರಸಂಪರ್ಕ ಇಲಾಖೆಗೆ ಸಂಬಂಧಿಸಿದ ಪ್ರಮುಖ ಧೋರಣೆಗಳನ್ನು ತ್ವರೆಯಿಂದ ಬದಲಿಸಲಾಯಿತು. ಅಮೆರಿಕಾದೊಡನೆ ಸಮಾನತೆಯ ನೆಲೆಯಲ್ಲಿ ಸಖ್ಯ ಬೆಳೆಸುವ ಸೂಚನೆಗಳಾಗಿ ಇವು ತೋರುವುದಿಲ್ಲ. ಈಗಲೇ ಹೀಗಾದರೆ ''ಸಹಜ ಮೈತ್ರಿಕೂಟ''ದಲ್ಲಿ ಸೇರ್ಪಡೆ ಹೊಂದಿದ ನಂತರ ಹೇಗಿರಬಹುದು ?

ಅಮೆರಿಕಾದೊಡನೆ ವಾಣಿಜ್ಯ ಸಂಬಂಧ ಹಾಗೂ ವಿದೇಶಿ ಬಂಡವಾಳ ಹೂಡಿಕೆಯಿಂದಾಗಿ ಭಾರತದ ಆರ್ಥಿಕ ಪ್ರಗತಿಗೆ ಅನುಕೂಲವಾಗಲಿದೆಯೆಂದು ಹೇಳಿ ಶೇಕಡ ೯ರಷ್ಟು ವಾರ್ಷಿಕ ಅಭಿವೃದ್ಧಿ ಸಾಧಿಸಲಾಗುತ್ತದೆಯೆಂದು ವಾಜಪೇಯಿಯವರು ಅಮೆರಿಕಾದ ಕಾಂಗ್ರೆಸ್ಸನ್ನುದ್ದೇಶಿಸಿ ಮಾತನಾಡುವಾಗ ತಮ್ಮ ಸಂತೃಪ್ತಿ ವ್ಯಕ್ತಪಡಿಸಿದರು. ನಮ್ಮ ಉದ್ಯಮಗಳ ಪಾಡನ್ನು ನೋಡಿದರೆ, ಅಭಿವೃದ್ಧಿ ಹಾಗಿರಲಿ, ಮುಚ್ಚುತ್ತಿರುವ ಕಾರ್ಖಾನೆಗಳ ಸಂಖ್ಯೆಯನ್ನು ಎಣಿಸಲು ಆಗದಷ್ಟು ವೇಗವಾಗಿ ಅವು ಮುಚ್ಚಿಕೊಳ್ಳುತ್ತಿವೆ. ಕೃಷಿ ಉತ್ಪಾದಕರ ಪರಿಸ್ಥಿತಿಯೂ ಹದಗೆಟ್ಟಿದೆ. ಅಮೆರಿಕಾ ಮತ್ತು ಭಾರತ ಜಂಟಿಯಾಗಿ ಆತಂಕಕಾರಿಗಳನ್ನು ಹಿಮ್ಮೆಟ್ಟಿಸಲು ಬದ್ಧವಾಗಿವೆಯೆಂದು ಸಹ ವಾಜಪೇಯಿ ಕಾಂಗ್ರೆಸ್ಸನ್ನುದ್ದೇಶಿಸಿ ವಾಷಿಂಗ್‌ಟನ್ನಿನಲ್ಲಿ ಹೇಳಿದರು. ವಿಶ್ವದ ಅತ್ಯಂತ ಪ್ರಬಲ ಮತ್ತು ದೊಡ್ಡ ಆತಂಕಕಾರಿಯೆಂದರೆ ಅಮೆರಿಕಾ ಸರ್ಕಾರ ಎನ್ನುವುದನ್ನು ನಾವು ಮರೆತಂತಿದೆ. ಅದು ನಾಳೆ ನಮಗೆ ಪ್ರತಿಕೂಲವಾಗಿ ಪರಿಣಮಿಸುತ್ತದೆಂಬ ಎಚ್ಚರಿಕೆ ಇರಲಿ. ಇತಿಹಾಸವಿರುವುದು ಅದರಿಂದ ಪಾಠ ಕಲಿಯುವುದಕ್ಕಾಗಿ ಅಲ್ಲವೆ ?

ವಾಜಪೇಯಿಯವರ ದೇಹಾರೋಗ್ಯ ಸಾಕಷ್ಟು ಚೆನ್ನಾಗಿಲ್ಲದಿರುವುದು ದುರದೃಷ್ಟಕರ. ಅದು ವ್ಯಸನದ ಸಂಗತಿ. ಕಾಂಗ್ರೆಸ್ಸನ್ನು ಉದ್ದೇಶಿಸಿ ಮಾತನಾಡುವಾಗ ಕುಳಿತೇ ಇದ್ದ ನಮ್ಮ ಪ್ರಧಾನಿಯವರಿಗೆ ಒಂದು ಪುಟದಲ್ಲಿ ಒಂದೇ ವಾಕ್ಯವನ್ನು ದಪ್ಪಕ್ಷರಗಳಲ್ಲಿ ಬರೆದಿಟ್ಟಿದ್ದರು. ಆದ್ದರಿಂದ ಪದೇ ಪದೇ ಪುಟಗಳನ್ನು ತಿರುವಿಹಾಕಬೇಕಾದ ಪ್ರಸಂಗ. ಅವರ ಬಲಗೈ ಅದಕ್ಕೆ ಒಳ್ಳೆಯ ಸಹಕಾರ ನೀಡದಿದ್ದಾಗ ಅವರು ಪಡುತ್ತಿದ್ದ ಕಷ್ಟ ದಯನೀಯವಾಗಿತ್ತು. ಕಾಂಗ್ರೆಸ್ ಸದಸ್ಯರು ಅಂತಹ ಸಂದರ್ಭಗಳಲ್ಲಿ ಚಪ್ಪಾಳೆಯನ್ನು ಲಂಬಿಸಿ ಪ್ರಧಾನಿಯವರಿಗೆ ಸ್ವಾಗತಾರ್ಹ ಸಹಕಾರ ನೀಡಬೇಕಾಯಿತು. ದೇಹಾರೋಗ್ಯವು ದೇಶದ ಮನಸ್ಸನ್ನು ಕಲಕಿರುವಾಗ ವಾಜಪೇಯಿಯವರು ತಮ್ಮ ಮನಸ್ಸಿನ ಅನಾರೋಗ್ಯವನ್ನೂ ಪ್ರಚುರಪಡಿಸಿದ್ದು ಸರ್ವಥಾ ಮಾರಕವಾದ್ದು. ಪಕ್ಷದ ಖಜಾನೆಗೆ ಹಣ ತುಂಬುವ ಅನಿವಾಸಿ ಭಾರತೀಯರ ನಡುವೆ ನ್ಯೂಯಾರ್ಕಿನಲ್ಲಿ ಪ್ರಧಾನಿಯವರು ತಮ್ಮ ಸ್ವಯಂ ಸೇವಕ ಲಕ್ಷಣಗಳನ್ನು

ಹೆಮ್ಮೆಯಿಂದ ಬಹಿರಂಗಗೊಳಿಸಿದರು. ವಿಶ್ವ ಹಿಂದೂ ಪರಿಷತ್ತಿನ ೧೦೮ ಮುನಿಗಳು, ಮಹಾಂತರು ಉಪಸ್ಥಿತರಿದ್ದುದು ವಾಜಪೇಯಿಯವರಿಗೆ ವಿಶೇಷ ಹುಮ್ಮಸ್ಸು ನೀಡಿರಬೇಕು. ಕಾಂಗ್ರೆಸ್ಸಿನಲ್ಲಿ ''ಮೈತ್ರಿಕೂಟ''ದ ಪ್ರಸ್ತಾಪ ಮಾಡುವುದಕ್ಕೆ ತಯಾರಿ ಎಂಬಂತೆ ಈ ಸಭೆಯಲ್ಲಿ ಅವರು ''ಸ್ವದೇಶಿ'' ಮಾತುಗಳನ್ನಾಡಿದರೋ ಎಂಬ ಗುಮಾನಿ ಉಂಟಾಯಿತು. ಆಮೇಲೆ ''ಸ್ವಯಂ ಸೇವಕ'' ಎಂಬ ಪದದ ವ್ಯುತ್ಪತ್ತಿಯ ಬಗ್ಗೆ ಮಹಾಭಾಷ್ಯಕಾರನಂತೆ ಒಂದು ವ್ಯಾಖ್ಯಾನ ನೀಡಬೇಕಾದ ಅನೌಚಿತ್ಯ ಒದಗಿಬಂತು.

ಅದೆಲ್ಲಾ ಒತ್ತಟ್ಟಿಗಿರಲಿ, ಅದು ವಾಜಪೇಯಿಯವರ ಸ್ವಂತ ವಿಷಯ. ಆದರೆ ದೇಶವನ್ನು ವಿದೇಶಾಂಗ ನೀತಿಯ ಒಂದು ಹೊಸ ಪಥದಲ್ಲಿ ಮುನ್ನುಗ್ಗಿಸುವ ಮೊದಲು ಕಡೇ ಪಕ್ಷ ಕಳೆದ ಐವತ್ತು ವರ್ಷದ ವಿಶ್ವದ ಇತಿಹಾಸವನ್ನು ಮೆಲುಕುಹಾಕುವುದು ಆರೋಗ್ಯಕರವಾಗಿರುತ್ತಿತ್ತು. ೧೯೬೭ರಷ್ಟು ಹಿಂದೆ ''ನ್ಯೂಯಾರ್ಕ್ ರಿವ್ಯೂ''ನಲ್ಲಿ ಫಿಲಿಪ್ ರಾವ್ ಬರೆದಿದ್ದ ಮಾತುಗಳನ್ನು ಅಮೆರಿಕಾ ಈವರೆಗೆ ಸುಳ್ಳು ಮಾಡಿಲ್ಲ. ಬದಲಾಗಿ, ಅಂಥದೇ ಪ್ರಸಂಗಗಳನ್ನು ಹೆಚ್ಚು ಹೆಚ್ಚು ಮಾಡುತ್ತಾ ಬಂದಿದೆ. ಆತ ಬರೆದಿದ್ದ: ''ನಾವು (ಅಂದರೆ, ಅಮೆರಿಕಾ ಸರ್ಕಾರ) ಬಹಿರಂಗವಾಗಿ ಹಾಗೂ ಗುಟ್ಟಾಗಿ ದಕ್ಷಿಣ ಅಮೆರಿಕಾ ಮತ್ತು ಬೇರೆಡೆಗಳ ಅನೇಕ ರಾಷ್ಟ್ರಗಳಲ್ಲಿ ಕೈ ಹಾಕಿದ್ದೇವೆ. ವಿಯೆಟ್ನಾಂ ಜನರನ್ನು ಕಗ್ಗೊಲೆ ಮಾಡಿದೆವು. ಗ್ರೀಸಿನಲ್ಲಿ ಪ್ರಜಾಪ್ರಭುತ್ವದ ಹತ್ಯೆ ನಡೆದಾಗ ನಾವು ಕೇವಲ ಪ್ರೇಕ್ಷಕರಾಗಿರಲಿಲ್ಲ. ಅದನ್ನು ಮಾಡಿಸಿದ್ದೇ ನಾವು. ಎಲ್ಲೆಲ್ಲಿ ಹಣ ಮತ್ತು ಆಯುಧಗಳಿಗೆ ನಮ್ಮ ಮೇಲೆ ಅವಲಂಬನೆ ಮಾಡಿರುವವರಿದ್ದಾರೋ ಅಲ್ಲೆಲ್ಲಾ ನಾವು ಕೈ ಹಾಕಿ ನಮ್ಮ ಬೇಳೆ ಬೇಯಿಸಿಕೊಂಡಿದ್ದೇವೆ. ಹಾಗೆ ಮಾಡಿದ್ದಾದ ಮೇಲೆ ಅದು ಅಪಘಾತವೆಂದೋ ತಪ್ಪೆಂದೋ ವಿಮರ್ಶೆ ಮಾಡಿಕೊಂಡಿದ್ದೇವೆ.'' ನಾಳಿನ ಮೈತ್ರಿಕೂಟದಲ್ಲಿ ಭಾರತದ ಸನ್ನಿವೇಶ ಇಂತಹುದೇ ಆದೀತೆಂಬುದು ನಮ್ಮ ಸ್ವಯಂಸೇವಕ ಪ್ರಧಾನಿಯವರ ತಲೆಗೆ ಬಂದಿಲ್ಲದಿರುವುದು ಶೋಚನೀಯ.

ರಾಷ್ಟ್ರೀಯತೆಯು ತಮ್ಮ ವಿಶಿಷ್ಟ ಗುಣವೆಂದು ವಾಜಪೇಯಿಯವರು ಘೋಷಿಸಿಕೊಳ್ಳುತ್ತಿರುತ್ತಾರೆ. ಅದಕ್ಕೆ ಕಾರ್ಯತಃ ಈವರೆಗೆ ಅವರು ಯಾವ ಪುರಾವೆಯನ್ನೂ ಒದಗಿಸಿಲ್ಲವೆಂಬುದು ಬೇರೆ ವಿಷಯ. ಆರ್ಥಿಕ ಸ್ವಾವಲಂಬನೆ ಎಂಬರ್ಥದಲ್ಲಿ ಅವರು ರಾಷ್ಟ್ರೀಯತೆಯನ್ನು ಪ್ರಕಟಿಸಹೊರಟರೆ ಅಮೆರಿಕಾ ಏನು ಮಾಡುತ್ತದೆಂಬುದಕ್ಕೆ ಈಚಿನ ದಶಕಗಳ ಚರಿತ್ರೆ ಸ್ಪಷ್ಟ ಉತ್ತರ ನೀಡುತ್ತದೆ. ಇರಾನಿನಲ್ಲಿ ದೊರೆಯನ್ನು ಸಿಂಹಾಸನಕ್ಕೇರಿಸುವ ಮೊದಲು ಪ್ರಜಾಪ್ರಭುತ್ವ ರೀತ್ಯಾ ಆಯ್ಕೆಗೊಂಡಿದ್ದ ಮೊಸ್ಸಾದೆಕ್‌ನನ್ನು ಹತ್ಯೆ ಮಾಡಿಸಿದ್ದು ಅಮೆರಿಕಾ. ಅದು ೫೦ರ ದಶಕದ ಘಟನೆ. ಎಪ್ಪತ್ತರ ದಶಕದಲ್ಲಿ ಚಿಲಿಯ ಚುನಾಯಿತ ಅಧ್ಯಕ್ಷ ಅಲೆಂಡೆಯನ್ನೂ ಅಮೆರಿಕಾ ಸರ್ಕಾರ ಹತ್ಯೆ ಮಾಡಿತು. ಅವರಿಬ್ಬರೂ ಆರ್ಥಿಕ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದುದಷ್ಟೇ ಅವರ ''ಅಪರಾಧ.'' ಭಾರತವನ್ನು ಅಂತಹ ದುಷ್ಟ ಚಾರಿತ್ರ್ಯವುಳ್ಳ ಅಮೆರಿಕಾದ ತೆಕ್ಕೆಗೆ ಸೇರಿಸಲು ಮೈತ್ರಿಕೂಟದ ಮಾತನ್ನು ವಾಜಪೇಯಿ ಆಡುತ್ತಿರುವುದು ಈ ಶತಮಾನದ ಮೊದಲ ವರ್ಷದಲ್ಲಿ ನಾವು ಎದುರಿಸಬೇಕಾದ ಅತ್ಯಂತ ದೊಡ್ಡ ದುರಂತ.

ಇಪ್ಪತ್ತು ವರ್ಷಗಳ ಕಾಲ ಅಮೆರಿಕಾದೊಡನೆ ಮೈತ್ರಿಕೂಟದಲ್ಲಿ ಪಾಲ್ಗೊಂಡಿದ್ದ ಪಾಕಿಸ್ತಾನದಲ್ಲಿ ೧೯೭೦ರ ದಶಕದ ವೇಳೆಗೆ ಏನೇನು ಅಭಿವೃದ್ಧಿಯಾಗಿದ್ದಿತೆಂದು ವಾಜಪೇಯಿಯವರಿಗೆ ತಮ್ಮ ಸ್ವಂತ ಮೂಲಗಳಿಂದ ತಿಳಿಯಲಾಗದಿದ್ದರೆ ಅಮೆರಿಕಾದ ಖ್ಯಾತ ಭಾಷಾಶಾಸ್ತ್ರಜ್ಞ ನೋಮ್ ಚೋಮ್‌ಸ್ಕಿಯಿಂದ ಸುಲಭವಾಗಿ ತಿಳಿಯಬಹುದು. ತನ್ನೊಂದು ಗ್ರಂಥದಲ್ಲಿ ಇದನ್ನು ಚರ್ಚಿಸುತ್ತಾ ಮುಕ್ತ ಮಾರುಕಟ್ಟೆಯು ಪಾಕಿಸ್ತಾನಕ್ಕೆ ಎಂತಹ ಗಂಡಾಂತರ ತಂದಿತ್ತಿತೆಂಬುದನ್ನು ಚೋಮ್‌ಸ್ಕಿ ವಿವರಿಸಿದ್ದಾರೆ: ''ಇಪ್ಪತ್ತು ವರ್ಷಗಳ ಹಿಂದೆ ಇದ್ದುದಕ್ಕಿಂತ ಹೆಚ್ಚು ಹೀನಾಯ ಸ್ಥಿತಿಯಲ್ಲಿದ್ದಾರೆ ಪಾಕಿಸ್ತಾನದ ಶೇ. ೭೫ರಷ್ಟು ಜನ. ಸುಮಾರು ಶೇ. ೨೦ರಷ್ಟು ಜನರ ಸ್ಥಿತಿಯಂತೂ ಹೇಳಲಸಾಧ್ಯ. ಆದರೂ ಶೇ. ೨೫ರಷ್ಟು ತಲಾ ಆದಾಯ ಹೆಚ್ಚಿದೆಯೆಂದು ಆ ದೇಶ ಹೇಳಿಕೊಳ್ಳುತ್ತದೆ. ಕರಾಚಿಯಲ್ಲಿ ಸುರಿದಿರುವ ಹಣದಿಂದ ಅಲ್ಲಿ ಅಮೆರಿಕಾದಲ್ಲಿ ದೊರೆಯುವ ಎಲ್ಲ ಪೇಯಗಳೂ ಸಿಗುತ್ತವೆ. ಆದರೆ ಮಗುವಿಗೆ ಒಂದು ಬಟ್ಟಲು ಹಾಲು ಮಾತ್ರ ಸಿಗುವುದಿಲ್ಲ.'' ೧೯೭೦ರಲ್ಲಿದ್ದ ಸನ್ನಿವೇಶಕ್ಕಿಂತಲೂ ಕೆಟ್ಟ ಸನ್ನಿವೇಶ ೨೦೦೦ದಲ್ಲಿ ಪಾಕಿಸ್ತಾನದಲ್ಲಿ ವ್ಯಾಪಕವಾಗಿದೆ. ಅಮೆರಿಕಾದೊಂದಿಗೆ ಮೈತ್ರಿಕೂಟದಲ್ಲಿ ಐವತ್ತು ವರ್ಷಗಳಿದ್ದ ಪಾಕಿಸ್ತಾನ ಈಗೇಕೆ ಅಮೆರಿಕಾಕ್ಕೆ ಬೇಡ ? ಏಕೆಂದರೆ, ಆ ಮಾರುಕಟ್ಟೆಯಿಂದ ಸುಲಿಗೆ ಮಾಡಲು ಏನೂ ಉಳಿದಿಲ್ಲ. ದಪ್ಪ ಕೋಳಿ ಭಾರತ ಅವರ ಕಣ್ಣಿಗೆ ಬಿದ್ದಿದೆ. ವಾಜಪೇಯಿಯವರು ಈ ಕೋಳಿಯನ್ನು ಅಮೆರಿಕಾಕ್ಕೆ ಉಣಬಡಿಸಲು ಹಾತೊರೆಯುತ್ತಿದ್ದಾರೆ. ಅತಿಥಿ ಸತ್ಕಾರ ನಮ್ಮ ಸತ್ಸಂಪ್ರದಾಯವಾಗಿರಲಿ, ಆದರೆ ಮನೆಯ ಕೋಳಿಯನ್ನು ಕೊಂದು ಅದರ ಸಂತತಿ ನಾಶ ಮಾಡುವುದು ವಂಚನೆ ಎನಿಸಿಕೊಳ್ಳುತ್ತದೆ. ಅಮೆರಿಕಾದೊಡನೆ ಭವ್ಯವಾದ ಸಖ್ಯ ಬೆಳೆಸೋಣ, ಸಮಾನ ನೆಲೆಯಲ್ಲಿ ನಿಲ್ಲೋಣ, ಆದರೆ ಮೈತ್ರಿಕೂಟದ ದುಸ್ಸಾಹಸದಿಂದ ಪ್ರಪಾತಕ್ಕೆ ಬೀಳುವುದು ಖಂಡಿತ ಬೇಡ. ಇಷ್ಟಕ್ಕೂ ಈ ಚರ್ಚೆಯನ್ನೆಲ್ಲಾ ವಾಜಪೇಯಿ ನಡೆಸಿದ್ದು ಯಾರೊಡನೆ ? ಅಮೆರಿಕಾದ ಕುಂಟು ಬಾತುಕೋಳಿ ಅಧ್ಯಕ್ಷ ಕ್ಲಿಂಟನ್ ಜೊತೆ! ಆತ ಇನ್ನು ನಾಲ್ಕು ತಿಂಗಳಲ್ಲಿ ಗಂಟುಮೂಟೆ ಕಟ್ಟಿಕೊಂಡು ಶ್ವೇತಭವನದಿಂದ ನಿರ್ಗಮಿಸುತ್ತಾನೆ. ಆಗಲೂ ಆ ಭವನದ ಕಪ್ಪು ಚುಕ್ಕೆಯೇನೂ ಮಾಯವಾಗುವುದಿಲ್ಲ. ಈ ದೃಷ್ಟಿಯಿಂದ ವಾಜಪೇಯಿಯವರ ಪ್ರಯಾಸದ ಅಮೆರಿಕಾ ಭೇಟಿ ನಿರರ್ಥಕವೆಂದೇ ಹೇಳಬೇಕು. ಅವರ ಭೇಟಿಯ ಕಾಲದಲ್ಲಿ ಉಂಡವನೇ ಜಾಣ ಎಂಬಂತೆ ಶ್ವೇತಭವನದ ಹುಲ್ಲುಹಾಸಿನ ಮೇಲೆ ಸಾವಿರಾರು ಮಂದಿ ಭರ್ಜರಿ ಭೋಜನ ಹೊಡೆದರು. ಭಾರತಕ್ಕೆ ಅದರಿಂದ ಯಾವ ಪುರುಷಾರ್ಥವೂ ನೆರವೇರಲಿಕ್ಕಿಲ್ಲ. ವಾಜಪೇಯಿಯವರ ಆರೋಗ್ಯ ತಪಾಸಣೆಯಿಂದ ಅವರಿಗೇನಾದರೂ ಪ್ರಯೋಜನವಾದರೆ ಅದಷ್ಟೇ ನಮಗೆ ಪ್ರಯೋಜನ. ಅಮೆರಿಕಾ ನಮ್ಮ ಕೈ ತಿರುಚಲು ಯತ್ನಿಸಲಿಲ್ಲ, ನಾವೂ ಅದನ್ನು ಮಾಡಗೊಡೆವು, ಎಂದು ಸಿ.ಟಿ.ಬಿ.ಟಿ.ಗೆ ಸಂಬಂಧಿಸಿದಂತೆ ತಮ್ಮ ಪ್ರವಾಸದ ಕೊನೆಯಲ್ಲಿ ವಾಜಪೇಯಿಯವರು ಹೇಳಿದ್ದಾರೆ. ಆದರೆ ಅದಕ್ಕೆ ಸಹಿ ಹಾಕಲು ದೇಶದಲ್ಲಿ ಒಮ್ಮತ ಮೂಡಿಬರುತ್ತದೆಯೆಂಬ ಭರವಸೆ ತಮಗಿದೆಯೆಂದೂ ಹೇಳಿದ್ದಾರೆ. ಶ್ವೇತಭವನದ ಮಿರುಗುವ ಪರದೆಗಳ ಹಿಂದೆ ಏನು ನಡೆಯಿತೆಂದು ಇದರಿಂದ ತಿಳಿಯುವುದಿಲ್ಲವೆ ?

(ಸಹಿ)




ತಿಂಗಳ ಪತ್ರಿಕೆ

**ಹೊಸತು**

ನಿಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೭
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ದಾರಿ ದೀಪ

'ಬದುಕಿಗೊಂದು ಸವಾಲು' 'ಹೊಸತು' ಆಗಸ್ಟ್ ಓದಿ ಹೃದಯ ತುಂಬಿಬಂತು. ಹಳ್ಳಿಯ ಅನಕ್ಷರಸ್ಥ ಕುಮುದಾವತಿ ಕತ್ತಲ ಕೂಪದಲ್ಲಿ ಕರಗಬೇಕಾದವಳು ಬೆಳಕಿನ ಪ್ರಪಂಚದಲ್ಲಿ ಸುದ್ದಿಯಾಗಿದ್ದಾಳೆ. ಬುದ್ಧಿ ಕೌಶಲ್ಯ ಮೆರೆದು ಸಾರ್ಥಕ ಬೆಳಕು ಕಂಡ ಕುಮುದಾವತಿ ಅಭಿನಂದನಾರ್ಹರು. ಛಲಗಾತಿ ಕುಮುದಾವತಿಯ ಬದುಕು ಇಂದಿನ ಹೆಣ್ಣು ಮಕ್ಕಳಿಗೆ 'ದಾರಿದೀಪ'ವಾಗಲಿ.

*ಜೋಗನಹಳ್ಳಿ* — ***ಗುರುಮೂರ್ತಿ***

ಸೆಪ್ಟೆಂಬರ್ ೨೦೦೦ದ 'ಹೊಸತು'ವಿನ ಮುಖಪುಟ ಮನಮೋಹಕವಾಗಿ ಮೂಡಿಬಂದಿದ್ದು ಕನ್ನಡ ಚಿತ್ರರಂಗದ ಮೇರುನಟ ಡಾ|| ರಾಜ್ ಅಪಹರಣ ಕುರಿತ ಸಂಪಾದಕೀಯವು ಡಾ|| ರಾಜ್‌ರವರ ಸಹೃದಯತೆ ಮತ್ತು ಸಮಸ್ತ ಕನ್ನಡಿಗರ ಶಾಂತಿಪ್ರಿಯತೆಯನ್ನು ಪ್ರತಿಬಿಂಬಿಸುತ್ತದೆ. ಉತ್ತಮ ಸಂಪಾದಕೀಯ ನೀಡಿದ 'ಹೊಸತು'ವಿಗೆ ಹೃತ್ಪೂರ್ವಕ ಅಭಿನಂದನೆಗಳು.

*ಮಂಡ್ಯ* — ***ಎನ್. ಶ್ರೀನಿವಾಸ್***

ಆಗಸ್ಟ್ ಸಂಚಿಕೆಯ "ಬದುಕು ಬಲಿಗೊಟ್ಟ ಗಿಯೋರ್ದನೊ ಬ್ರೂನೋ" ಓದಿ ಯಾಕೋ ಎಲ್ಲಿ ನಿಲ್ಲಲಾಗದ ಕಸಿವಿಸಿಯಾಯಿತು. ಸತ್ಯವನ್ನು ನುಡಿದಿದ್ದಕ್ಕಾಗಿ ಪುರೋಹಿತಶಾಹಿ ಎಷ್ಟು ದೌರ್ಜನ್ಯವೆಸಗುತ್ತದೆ. ಈ ಪುರೋಹಿತಶಾಹಿಗಳ ಮುಷ್ಟಿ ಹೇಗಿರುತ್ತದೆಂದು ಅರ್ಥವಾಯಿತು. ಲೇಖನ ಬರೆದ ರವಿಕುಮಾರ್ ಕೆ. ಎಸ್.ರವರಿಗೆ ನನ್ನ ವಂದನೆಗಳು. 'ದೇಗುಲ ಸಂಸ್ಕೃತಿ' ವೈಚಾರಿಕ ಲೇಖನದಲ್ಲಿ ರಾಮಲಿಂಗಪ್ಪ ಟಿ. ಬೇಗೂರುರವರು, ಪುರೋಹಿತಶಾಹಿ ಈ ನತದೃಷ್ಟ ಬಡಜನರನ್ನು ಹೇಗೆ ಶೋಷಣೆ ಮಾಡುತ್ತಾ ತಮ್ಮ ಬದುಕುಗಳನ್ನು ಅದ್ದೂರಿಯಾಗಿ ಬದುಕುತ್ತಿದ್ದಾರೆ ಎಂದು ನೆನೆದರೆ ಈ ದೇಶದ ದುರ್ಗತಿ ಇನ್ನೂ ಯಾವ ಮಟ್ಟಕ್ಕೆ ಹೋಗುತ್ತದೊ ಎಂದು ಭಯವಾಗುತ್ತಿದೆ. ವೈಚಾರಿಕ ಲೇಖನಗಳು ಇನ್ನೂ ಹೆಚ್ಚಾಗಿ ಬರುತ್ತವೆ ಎಂದು ಆಶಿಸುತ್ತೇನೆ.

*ಮುದುವತ್ತಿ* — ***ಬಿ. ಎನ್. ವೆಂಕಟೇಶ್***

ಸೆಪ್ಟೆಂಬರ್ ತಿಂಗಳ 'ಹೊಸತು'ವಿನಲ್ಲಿ ಪ್ರಕಟವಾದ ವಸುಮತಿ ಉಡುಪರ ಲಲಿತ ಪ್ರಬಂಧ 'ಹುಲುಮನುಜರೂ ಹಿತೋಕ್ತಿಗಳೂ' ಅತ್ಯಂತ ಸಹಜವಾಗಿ ಮೂಡಿಬಂದಿದೆ. ಓದುತ್ತಾ ಹೋದಂತೆ ನನ್ನ ಮನಸ್ಸಿನ ಭಾವನೆಗಳಿಗೆ ಹಿಡಿದ ಕೈಗನ್ನಡಿಯಂತಿತ್ತು. ಡಾ|| ರಹಮತ್ ತರೀಕೆರೆ ಅವರ ಪ್ರವಾಸ ಲೇಖನ ಓದುಗರನ್ನೂ ಪ್ರವಾಸಕ್ಕೆ ಕೊಂಡೊಯ್ಯುತ್ತದೆ.

*ಮೈಸೂರು* — ***ಜಿ. ವೈದೇಹಿ***

*ಪ್ರತಿಕ್ರಿಯೆ*

### ಕಮ್ಯುನಿಸ್ಟರೂ "ಜನತಾ ಯುದ್ಧವೂ"

ಆಗಸ್ಟ್ ತಿಂಗಳ ಪತ್ರಿಕೆಯಲ್ಲಿ ಪ್ರೊ|| ಎಂ. ಎ. ಸೇತುರಾವ್ ಅವರ ಲೇಖನದ ಬಗ್ಗೆ:

ಸಾಮ್ರಾಜ್ಯಶಾಹಿಗಳಿಗಿಂತ ಫ್ಯಾಸಿಸ್ಟ್ ಶಕ್ತಿ ಮೇಲುಗೈ ಸಾಧಿಸಿ ಇಡೀ ವಿಶ್ವವನ್ನೇ ತನ್ನ ಸ್ವಾಧೀನಪಡಿಸಿಕೊಳ್ಳಲಿಕ್ಕೆ ಸೋವಿಯೆತ್ ಯೂನಿಯನ್ನಿನ ಮೇಲೆ ಆಕ್ರಮಣ ನಡೆಸಿದಾಗ ಅದರ ಅಪಾಯವನ್ನು ಮನಗಂಡ ಕಮ್ಯುನಿಸ್ಟ್ ಪಾರ್ಟಿ ಹಿಟ್ಲರನ ಸೋಲಿಗೆ ನೆರವಾಗುವ ಎಲ್ಲಾ ಶಕ್ತಿಗಳ ಜೊತೆಯಲ್ಲಿ ಕೈಜೋಡಿಸುವ, ನಾಝಿಗಳನ್ನು ನಾಶಮಾಡಿ ಸೋವಿಯೆತ್ ದೇಶ ಹಾಗೂ ವಿಶ್ವವನ್ನು ರಕ್ಷಿಸುವ ಚರಿತ್ರಾರ್ಹ ನಿರ್ಣಯ ಕೈಕೊಂಡು ಹಿಟ್ಲರಶಾಹಿಯನ್ನು ಸೋಲಿಸಲು ಸಹಾಯ ಮಾಡಿದ್ದು ತಪ್ಪೆ? ಮಲೇಶಿಯಾ, ಸಿಂಗಾಪೂರಗಳೆಲ್ಲ ಜಪಾನಿ ಸೈನಿಕರ ವಶವಾಗಿ ಭಾರತ ದೇಶದ ಮೇಲೆ ಆಕ್ರಮಣದ ಸಿದ್ಧತೆ ನಡೆಸಿದಾಗ, ಜೈಲಿನಿಂದ ಬಿಡುಗಡೆಯಾದ ನಮ್ಮಂಥವರಿಗೆ "ಗೊರಿಲ್ಲಾ ಯುದ್ಧದ" ಟ್ರೈನಿಂಗ್ ಕೊಡಿಸಿ ಹಿಟ್ಲರ್ ಸೈನಿಕರ ವಿರುದ್ಧ ಹೋರಾಡಲು ಸಿದ್ಧಗೊಳಿಸಿದ್ದು ದೇಶದ್ರೋಹವೇ? ನಾಝಿ ಶಕ್ತಿಯ ಬೆಂಬಲದ ಸ್ವಾತಂತ್ರ್ಯ ಬೇಕೋ ಅಥವಾ ನಮ್ಮ ಬಲದಿಂದ ಹಿಟ್ಲರನನ್ನು ಸೋಲಿಸಿ ಪಡೆಯುವ ಸ್ವಾತಂತ್ರ್ಯ ಬೇಕೋ? ನಾವು ಕಮ್ಯುನಿಸ್ಟರು ಎರಡನೆಯ ದಾರಿಯಲ್ಲಿ ನಡೆದೆವು. ವಿಶ್ವದ ನಾಝಿ ವಿರೋಧಿ ಶಕ್ತಿಗಳು ಧೀರ ಕೆಂಪು ಸೈನ್ಯದ ಬೆಂಬಲದಿಂದ ಹಿಟ್ಲರನನ್ನು ಸೋಲಿಸಿ, ವಸಾಹತು ದೇಶಗಳ ಸ್ವಾತಂತ್ರ್ಯಕ್ಕೆ, ಅದೇ ರೀತಿ ಭಾರತ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಜನಶಕ್ತಿ ನಿರ್ಮಿಸಿ ಬ್ರಿಟಿಷರು ದೇಶಬಿಟ್ಟು ತೊಲಗುವಂತೆ ವಾತಾವರಣ ನಿರ್ಮಿಸಲು ಸಾಧ್ಯವಾಯಿತು.

ಹಾಗೆಯೇ ಕ್ವಿಟ್ ಇಂಡಿಯಾ ಚಳುವಳಿಯ ೫೦ನೆಯ ವಾರ್ಷಿಕೋತ್ಸವದ ಅಂಗವಾಗಿ ಆಗಸ್ಟ್ ೯, ೧೯೯೨ರಂದು ಮಧ್ಯರಾತ್ರಿಯಲ್ಲಿ ವಿಶೇಷ ಪಾರ್ಲಿಮೆಂಟ್ ಸಭೆ ನಡೆದಾಗ ಅಂದಿನ ರಾಷ್ಟ್ರಾಧ್ಯಕ್ಷ ಶಂಕರ ದಯಾಲ್ ಶರ್ಮ ಹೇಳಿರುವುದನ್ನು ನೆನಪಿಸಿಕೊಳ್ಳಬೇಕು: "ಖಾನಾಪುರ, ಜಮ್‌ಶೆಡ್‌ಪುರ, ಅಹಮದಾಬಾದ್‌ಗಳಲ್ಲಿ ಪ್ರಬಲವಾಗಿ ನಡೆದ ಮುಷ್ಕರದ ನಂತರ ಲಂಡನ್ನಿನಲ್ಲಿರುವ ಸೆಕ್ರೆಟರಿ ಆಫ್ ಸ್ಟೇಟ್ ಅವರಿಗೆ ಸೆಪ್ಟೆಂಬರ್ ೨, ೧೯೪೨ರಂದು ಒಂದು ಸಂದೇಶ ಕಳುಹಿಸಲಾಗಿತ್ತು. ಅದು ಭಾರತದಲ್ಲಿಯ ಕಮ್ಯುನಿಸ್ಟರ ಕುರಿತಾಗಿತ್ತು. ಆ ಪಕ್ಷದ ಹೆಚ್ಚಿನ ಸದಸ್ಯರ ಸ್ವಭಾವ ಯಾವಾಗಲೂ ಸ್ಪಷ್ಟವಾಗಿ ತಿಳಿಯುವಂತೆಯೇ ಬ್ರಿಟಿಷ್ ವಿರೋಧಿ ಕ್ರಾಂತಿಕಾರಿಗಳದಾಗಿತ್ತು."

*ಬಿಜಾಪುರ* — ***ಎನ್. ಕೆ. ಉಪಾಧ್ಯಾಯ***

### ಸ್ಪಷ್ಟನೆ

ದಿನೇಶ್‌ಕುಮಾರ್ ಅವರ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಶೀರ್ಷಿಕೆಯ ಲೇಖನದಲ್ಲಿ 'ಎಂ. ವೈ. ಘೋರ್ಪಡೆಯವರು ಕನ್ನಡದಲ್ಲಿ ಮಾತಾಡಲು ಕಲಿತಿದ್ದಾರೆಯೇ' ಎಂದು ವ್ಯಂಗ್ಯವಾಗಿ ಉಲ್ಲೇಖಿಸಿದ್ದಾರೆ. ಘೋರ್ಪಡೆಯವರನ್ನು ನಾನು ಸುಮಾರು ೨೫ ವರ್ಷಗಳಿಂದ ಬಲ್ಲೆ. ಅವರು ಶಾಸನ ಸಭೆಗಳಲ್ಲಿ ಮತ್ತಿತರ ಸಭೆಗಳಲ್ಲಿ ಕನ್ನಡದಲ್ಲೇ ಮಾತಾಡಿದ್ದಾರೆ! ಅವರಿಗೆ ಸಾಕಷ್ಟು ಕನ್ನಡ ಭಾಷೆಯ ಪರಿಚಯವಿದೆ. ಸೂಕ್ಷ್ಮ ವಿಷಯಗಳನ್ನು ಕುರಿತು ಬರೆಯುವಾಗ ಎಚ್ಚರದಿಂದಿರುವುದು ಅಗತ್ಯ.

*ಬೆಂಗಳೂರು* — ***ಎಂ. ಎ. ಸೇತುರಾವ್***




ವೈವಿಧ್ಯಮಯ ಲೇಖನಗಳೊಂದಿಗೆ ಓದುಗರ ಹಸಿವನ್ನು ಹೆಚ್ಚಿಸುತ್ತಿರುವ 'ಹೊಸತು' ಪತ್ರಿಕೆ ಕನ್ನಡದಲ್ಲಿ ತನ್ನದೆ ಆದ ರೀತಿಯಲ್ಲಿ ಸಾಮಾಜಿಕ ಚಿಂತನೆಯನ್ನು ಮೂಡಿಸುತ್ತಿದೆ ಎಂದರೆ ತಪ್ಪಾಗಲಾರದು. ಸೆಪ್ಟೆಂಬರ್ ಸಂಪಾದಕೀಯ ಅದಕ್ಕೊಂದು ಉದಾಹರಣೆ. ವೈಚಾರಿಕ, ವಿಜ್ಞಾನ-ತಂತ್ರಜ್ಞಾನ, ಪ್ರಸ್ತುತ, ಸೈದ್ಧಾಂತಿಕ, ಅರ್ಥಲೋಕ, ಕಾನೂನು, ಪ್ರವಾಸ, ಪ್ರಬಂಧ, ಕತೆ, ಕಾವ್ಯಧಾರೆ ಹೀಗೆ ಎಲ್ಲವನ್ನೂ ಹೊಸಹೊಸದಾಗಿ ಒಡಲು ತುಂಬಿಕೊಂಡು ಬರುವ ಪತ್ರಿಕೆ ಕನ್ನಡಿಗರಲ್ಲಿ ಹೊಸ ಪ್ರಜ್ಞೆಯನ್ನು ಹೀಗೆ ನಿರಂತರವಾಗಿ ಮೂಡಿಸುತ್ತಿರಲಿ.

*ಬೆಂಗಳೂರು* — ***ಎಂ. ವೆಂಕಟಸ್ವಾಮಿ***

ಸೆಪ್ಟೆಂಬರ್ ತಿಂಗಳ 'ಹೊಸತು'ವಿನ ವಿಶ್ವವೀಕ್ಷಣೆಯಲ್ಲಿ ಪ್ರಸ್ತುತವಾದ ಶ್ರೀ ಮುರಳಿ ಕುಂಬ್ಳೆ ಇವರ 'ಸುಧಾರಣೆಗಳ ಹಾದಿಯಲ್ಲಿ ವೆನಿಜುವೇಲ' ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದ ಶ್ರೀ ಸೀಯಾರ್ಕೆಯವರಿಗೆ ಅಭಿನಂದನೆಗಳು ಹಾಗೂ ವೆನಿಜುವೇಲವನ್ನು ಆರ್ಥಿಕ ಬಿಕ್ಕಟ್ಟಿನಿಂದ ಬಿಡುಗಡೆ ಮಾಡುವ ಚಾವೆಜ್‌ರವರ ಭರವಸೆ ಖಂಡಿತ ಫಲಿಸಲಿ.

*ಬಳ್ಳಾಲ್‌ಬಾಗ್* — ***ಶೈಲ ಆರ್. ಶೆಟ್ಟಿ***

ಸೆಪ್ಟೆಂಬರ್ 'ಕಾವ್ಯಧಾರೆ'ಯಲ್ಲಿ ಪ್ರಕಟವಾದ 'ಸತ್ತದಕ ಅತ್ತಾಂಗ' ಕಾವ್ಯ ಚೆನ್ನಾಗಿ ಬಂದಿತ್ತು. ಮಕ್ಕಳು ಒಂದುತರ, ಗಂಡ ಒಂದುತರ, ಇವರ ನಡುವಲ್ಲಿ ಕೊರಗಿ ಸತ್ತ ಅಕ್ಕನ ಹೆಣ ನೋಡಿ ತಂಗಿ ವರ್ಣಿಸಿದ ರೀತಿ ತುಂಬಾ ಚೆನ್ನಾಗಿತ್ತು.

*ಕೊಡಿಯಾಲ್‌ಬೈಲ್* — ***ಮಣಮಾಲ ಶೆಟ್ಟಿ***

ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿ ಶ್ರೀನಿವಾಸ ಜೋಕಟ್ಟೆಯವರ ಚಿತ್ರ ಮತ್ತು ಸಂದರ್ಶನ ಚೆನ್ನಾಗಿ ಮೂಡಿಬಂದಿದೆ. ಇಂದಿನ ವಿಜ್ಞಾನ ಯುಗದಲ್ಲಿ ಮೂಢನಂಬಿಕೆಗಳ ಬಗ್ಗೆ ಜನರಿಗೆ ಅರಿವು ಉಂಟಾಗಬೇಕು. ಡಾ|| ನರೇಂದ್ರ ನಾಯಕ ಇವರ ಸಾಧನೆ ಮೆಚ್ಚುವಂಥದ್ದು.

*ಬನಹಟ್ಟಿ* — ***ಮಧು 'ಮಬೆ'***

ಸೆಪ್ಟೆಂಬರ್ ೨೦೦೦ದ ಗಣೇಶನ ಮುಖಪುಟ ಹೊತ್ತು ಬಂದ ಚಿತ್ರ ಆಕರ್ಷಕವಾಗಿತ್ತು. ಪರಸ್ಪರದ ಚೆನ್ನಬಸಪ್ಪರ 'ಸಂಸಾರಿ ಎಸ್. ಎನ್.' ಎಂಬ ಲೇಖನ ಓದಿ ಸಂತೋಷವಾಯಿತು.

*ರಬಕವಿ* — ***ಚಿದಾನಂದ ಹೋ. ಪಾಗಾದ***

# ಸಮಗ್ರತೆ ಹೇಗೆ ಮತ್ತು ಯಾವಾಗ?

''ಹೊಸತು'' ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ''ಅಖಂಡ ಕರ್ನಾಟಕದ ಸಮಗ್ರತೆ ಪ್ರಶ್ನಾತೀತ'' ಎಂಬ ಲೇಖನದಲ್ಲಿ ಶ್ರೀ ರಾ. ನಂ. ಚಂದ್ರಶೇಖರ ಅವರು ಪ್ರಾದೇಶಿಕ, ಸಾಮಾಜಿಕ ಅಸಮಾನತೆಗೆ ಕಳೆದ ೪೫ ವರ್ಷಗಳಿಂದ ಆಡಳಿತ ನಡೆಸಿರುವ ಸರ್ಕಾರಗಳು ಕಾರಣವಲ್ಲ ಎಂಬುದನ್ನು ತಮಗೆ ಅನುಕೂಲಕರವಾದ ಅಂಕಿ-ಅಂಶಗಳಿಂದ ರುಜುವಾತುಪಡಿಸಲು ಪ್ರಯತ್ನಿಸಿದ್ದಾರೆ.

''ನಾಡು - ನುಡಿಯ ಪ್ರೇಮಿಗಳಿಗೆ ದೇಹ ಬೇರೆ ಅಲ್ಲ ನಾಡು ಬೇರೆ ಅಲ್ಲ'' ಎಂದು ಬರೆಯುತ್ತ, ನಮ್ಮ ದೇಹದ ಒಂದು ಅಂಗವಾದ ಬೆರಳುಗಳು ಸಮಾನವಾಗಿರುವುದಿಲ್ಲ, ಹೆಚ್ಚು - ಕಡಿಮೆ ಇರುವಂತೆ ನಾಡಿನ ಅಭಿವೃದ್ಧಿಯು ಹೆಚ್ಚು ಕಡಿಮೆಯಾದರೂ ಸಹಿಸಿ ಸುಮ್ಮನಿರಬೇಕು. ಕೈ ಬೆರಳು ತುಂಡರಿಸಿ ಸಮಾನತೆ ಹೇಗೆ ಸಾಧಿಸಲಾರೆವೊ ಹಾಗೆಯೇ ಅಸಮಾನತೆಯನ್ನು ಸಹಿಸಿಕೊಂಡಿರಬೇಕೆಂಬುದನ್ನು ಪರೋಕ್ಷವಾಗಿ ಹೇಳಿದ್ದಾರೆ.

ಅಖಂಡ ಕರ್ನಾಟಕದ ಕನಸು ಕಂಡು ಅದಕ್ಕಾಗಿ ಹೋರಾಡಿದವರು ಉತ್ತರ ಕರ್ನಾಟಕದವರು. ''ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್''ನ್ನು ಹುಟ್ಟುಹಾಕಿ ಆ ಸಂಘಟನೆ ಅಡಿಯಲ್ಲಿ ಹೋರಾಡುತ್ತಿರುವಾಗ ಮೈಸೂರು ಮಹಾರಾಜರ ಆಡಳಿತಕ್ಕೆ ಒಳಪಟ್ಟ ಪ್ರದೇಶವೇ ತಮ್ಮ ರಾಜ್ಯ ಹೊರತು ಅಖಂಡ ಕರ್ನಾಟಕ ಅಲ್ಲ ಎಂಬ ಕೂಪಮಂಡೂಕ ಪ್ರವೃತ್ತಿಯನ್ನು ದಕ್ಷಿಣದವರು ತೋರಿಸಿದರು. ಒಂದು ವೇಳೆ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣವಾದರೆ ಒಂದು ಬಲಿಷ್ಠ ಜಾತಿಯ ರಾಜ್ಯವಾಗುತ್ತದೆ ಎಂಬ ಶಂಕೆಯಿಂದ ಅಖಂಡ ಕರ್ನಾಟಕದ ನಿರ್ಮಾಣಕ್ಕೆ ಅಡ್ಡಿಯಾಗಿದ್ದರು ದಕ್ಷಿಣದವರು. ಆದರೆ ಇತಿಹಾಸ ಆ ಶಂಕೆ ಸುಳ್ಳೆಂದು ಸಾಬೀತುಪಡಿಸಿದೆ.

ಅಖಂಡ ಕರ್ನಾಟಕ ರಾಜ್ಯ ನಿರ್ಮಾಣದಲ್ಲಿ ಕಾಂಗ್ರೆಸ್ಸೇತರ ನಾಯಕರಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕರಾದ ಕಾಂ. ಬಿ. ವಿ. ಕಕ್ಕಿಲ್ಲಾಯ, ಸಮಾಜವಾದಿ ಪಕ್ಷದ ನಾಯಕರಾದ ಶಾಂತವೇರಿ ಗೋಪಾಲಗೌಡರ ಪಾತ್ರ ಮರೆಯುವಂತಿಲ್ಲ. ಅಖಂಡ ಕರ್ನಾಟಕದ ಅಗತ್ಯತೆ ಕುರಿತು ಮೈಸೂರು ರಾಜ್ಯದ ವಿಧಾನ ಸಭೆಯಲ್ಲಿ ದಿ. ಶಾಂತವೇರಿ ಗೋಪಾಲಗೌಡರು ಮಾಡಿದ ಐತಿಹಾಸಿಕ ಭಾಷಣ ಈ ನಾಡು ಮರೆಯುವಂತಿಲ್ಲ. ದಿ. ಎಸ್. ನಿಜಲಿಂಗಪ್ಪ, ಪಾಟೀಲ ಪುಟ್ಟಪ್ಪ ಮುಂತಾದ ವರುಗಳು ಅಖಂಡ ಕರ್ನಾಟಕಕ್ಕಾಗಿ ತಮ್ಮನ್ನು ಸಮರ್ಪಿಸಿ ಕೊಂಡಿದ್ದರು.

ಕಳೆದ ೪೫ ವರ್ಷಗಳಲ್ಲಿ ರಾಜ್ಯದ ಉತ್ತರ ಭಾಗ ಅಭಿವೃದ್ಧಿ ಹೊಂದದೆ ವಂಚನೆಗೆ ಈಡಾಗಿದೆ ಎಂಬುದು ಸೂರ್ಯ ಪ್ರಕಾಶದಷ್ಟೇ ಸತ್ಯ. ರಾ. ನಂ. ಚಂದ್ರಶೇಖರ ಅವರು ಬರೆದಂತೆ - ''ಅಸಮಾನತೆ ಎಂಬುದು ಇಂದು ವಿಶ್ವವ್ಯಾಪಿ ಪಿಡುಗು'' ಎಂದು ಸರಳೀಕರಿಸಿರುವುದು ವಿಷಾದನೀಯ. ಸರ್ಕಾರಗಳ ನಿರ್ಲಕ್ಷ್ಯ ಶಾಸಕರ ಬೇಜವಾಬ್ದಾರಿತನ, ಕೆಲವೊಂದು ನಾಯಕರ ದುರುದ್ದೇಶದಿಂದ ಉತ್ತರ ಭಾಗ ಅಸಮಾನತೆಯಿಂದ ತೊಳಲಾಡುತ್ತಿದೆ. ಪ್ರಾದೇಶಿಕ ಅಸಮಾನತೆ ಮುಂದುವರೆದರೆ ಏನಾಗಬಹುದೆಂಬುದಕ್ಕೆ ದೇಶದ ಪೂರ್ವೋತ್ತರ ಭಾಗದ ಘಟನೆಗಳೇ ಸಾಕ್ಷಿ. ಪ್ರಾದೇಶಿಕ ಅಸಮಾನತೆಗೆ ಬಹುದೊಡ್ಡ ಬೆಲೆ ತೆತ್ತಿದೆ ನಮ್ಮ ದೇಶ.

ಪ್ರಾದೇಶಿಕ ಅಸಮಾನತೆಯ ನಿವಾರಣೆಯ ಮೊದಲ ಹೆಜ್ಜೆಯಾಗಿ ಹುಬ್ಬಳ್ಳಿಯಲ್ಲಿ ನೈರುತ್ಯ ರೇಲ್ವೆ ವಲಯ ಸ್ಥಾಪನೆಗೆ ಅಡ್ಡಿಪಡಿಸಿದವರು ಯಾರು ? ಮಾಜಿ ಪ್ರಧಾನಿ ಜಾತ್ಯಾತೀತ ಜನತಾ ದಳದ ನಾಯಕ ಎಚ್. ಡಿ. ದೇವೇಗೌಡರ ಸಹಚರರಲ್ಲವೆ ? ಅದರಂತೆ ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಸ್ಥಾಪಿಸದಂತೆ ಸುಪ್ರೀಮ್ ಕೋರ್ಟ್ ಕಟ್ಟೆ ಹತ್ತಿ ಅಡ್ಡಿಪಡಿಸಿದವರು ಬೆಂಗಳೂರಿನ ಬಿಜೆಪಿ ಶಾಸಕ ಕೆ. ಎನ್. ಸುಬ್ಬಾರೆಡ್ಡಿಯವರಲ್ಲವೇ ?

ರಾ. ನಂ. ಚಂದ್ರಶೇಖರ ಅವರು ತಮ್ಮ ಲೇಖನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಉತ್ತರ ಕರ್ನಾಟಕಕ್ಕಿಂತಲೂ ಉತ್ತಮ ರಸ್ತೆಗಳಿವೆ ಎಂದು ಬರೆದಿದ್ದಾರೆ. ಆದರೆ ಬೆಂಗಳೂರು ಮೈಸೂರು ನಡುವಿನ ಹೆದ್ದಾರಿ ನಿರ್ಮಾಣಕ್ಕಾಗಿ ಸಾವಿರಾರು ಕೋಟಿ ರೂ. ಯೋಜನೆ ಸಿದ್ಧಪಡಿಸಲಾಗಿದೆ. ಅದರಂತೆ ಉತ್ತರ ಕರ್ನಾಟಕದ ರಸ್ತೆ ಅಭಿವೃದ್ಧಿಗಾಗಿ ಯಾವುದೇ ಯೋಜನೆ ಇಲ್ಲವೇ ಇಲ್ಲ. ಹೆದ್ದಾರಿ ಬಳಿ ಉಪನಗರಗಳು, ರೆಸಾರ್ಟ್ ಸಂಸ್ಕೃತಿಗೆ ಮಾರುಹೋದ ಸರ್ಕಾರಕ್ಕೆ ಸಾಮಾನ್ಯ ಜನರು ನಡೆದಾಡುವ ಉತ್ತರ ಕರ್ನಾಟಕದ ರಸ್ತೆಗಳು ಕಣ್ಣಿಗೆ ಕಾಣುವುದಿಲ್ಲ. ಇದು ಸರ್ಕಾರದ ದುರುದ್ದೇಶವಲ್ಲದೆ ಮತ್ತೇನು? ಸರ್ಕಾರದ ನಿರ್ಲಕ್ಷ್ಯಕ್ಕೆ ಪ್ರಾಜ್ಞರು ಕೂಡ ವೈಚಾರಿಕ ಲೇಪ ಕೊಟ್ಟು ''ಅಸಮಾನತೆ ಎಂಬುದು ವಿಶ್ವ ವ್ಯಾಪಿ ಪಿಡುಗು'' ಎಂದು ಹಗುರಾಗಿ ಕಂಡು ತೇಲಿಸಿ ಬಿಡುವುದು ಶೋಚನೀಯ.

ಕರ್ನಾಟಕ ರಾಜ್ಯ ರೇಲ್ವೆಯಲ್ಲಿ ಅಗಾಧ ಅಭಿವೃದ್ಧಿ ಕಂಡರೂ ಗದಗ ವಿಜಾಪುರ ನಡುವಿನ ಗೇಜ್ ಪರಿವರ್ತನೆಯಾಗಿಲ್ಲ. ಅಂದಾಜು ೩೦೦ ಕೋಟಿ ರೂ. ಬೇಕಾಗುವ ಈ ಕೆಲಸಕ್ಕೆ ಈ ವರ್ಷ ಕೇವಲ ೧೦ ಕೋಟಿ ರೂ. ಒದಗಿಸಲಾಗಿದೆ. ಆದರೆ ಬೆಂಗಳೂರು ನಗರದ ವರ್ತುಲ ರೇಲ್ವೆಗೆ ಕರ್ನಾಟಕ ಸರಕಾರ ಬಂಡವಾಳ ಹೂಡುವುದಾಗಿ ಹೇಳುತ್ತದೆ. ಉತ್ತರ ಕರ್ನಾಟಕದ ಸಮಸ್ಯೆ ಬಂದಾಗ ಕೇಂದ್ರ ಸರಕಾರದ ಕಡೆಗೆ ಬೆರಳು ಮಾಡುತ್ತದೆ. ಬೆಂಗಳೂರನ್ನು ಸಿಂಗಾಪುರ ಮಾಡಬೇಕಾಗಿದೆ. ಅದಕ್ಕಾಗಿ ಏನೆಲ್ಲ ಕಸರತ್ತು. ಹಳೆಯ ಮೈಸೂರಿನ ಗತವೈಭವದ ಗುಂಗಿನಿಂದ ಹೊರಬರದ ನಾಯಕರಿಗೆ ಬೆಂಗಳೂರು ನಗರವೇ ಇಡೀ ಕರ್ನಾಟಕ, ಹೆಚ್ಚೆಂದರೆ ಹಳೆ ಮೈಸೂರು ಪ್ರದೇಶ.

ಸೂರ್ಯೋದಯವಾಗಿ ಮುಂಜಾನೆ ೧೦ ಗಂಟೆಯಾಗಿ ಪ್ರಖರ ಬಿಸಿಲು ಬಿದ್ದರೂ ಸೂರ್ಯೋ ದಯವಾಗಿದೆಯೋ ಇಲ್ಲವೋ ಎಂದು ಕಂಡುಕೊಳ್ಳಲು ವಿಚಾರಣಾ ಆಯೋಗ ನೇಮಿಸಿದಂತೆ ಉತ್ತರ ಕರ್ನಾಟಕ ಎಲ್ಲ ರಂಗದಲ್ಲಿ ಅಸಮಾನತೆಯಿಂದ ತೊಳಲಾಡುತ್ತಿದ್ದರೂ ಅದು ಹಾಗೆ, ಇದು ಹೀಗೆ ಎಂದು ಮೊಂಡುವಾದ ಮಾಡುತ್ತಿರುವುದು ವಿಷಾದನೀಯ. ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಪ್ರಜ್ಞಾಪೂರ್ವಕ ಪ್ರಯತ್ನ ಮಾಡಬೇಕಾಗಿರುವುದು ಇಂದಿನ ಅವಶ್ಯಕತೆ. - ''ಅಖಂಡ ಕರ್ನಾಟಕದ ಸಮಗ್ರತೆ ಪ್ರಶ್ನಾತೀತ'' ಎಂಬುದು ಹಸಿದವನಿಗೆ ಧರ್ಮಬೋಧನೆ ಮಾಡಿದಂತಾಗುತ್ತದೆ.

ಹರಿದು ಹಂಚಿಹೋಗಿದ್ದ ನಾಡು ಒಂದಾಗಿ ಅಖಂಡ ಕರ್ನಾಟಕ ನಿರ್ಮಾಣವಾಗಿದೆ. ಸಹಸ್ರ ಸಹಸ್ರ ಜನತೆ ತ್ಯಾಗ ಬಲಿದಾನ ಮಾಡಿ ಕಟ್ಟಿದ ನಾಡು ಚೂರು ಚೂರಾಗುವುದು ಯಾರಿಗೂ ಬೇಕಾಗಿಲ್ಲ. ''ಉತ್ತರ ಕರ್ನಾಟಕ'' ಪ್ರತ್ಯೇಕ ರಾಜ್ಯ ರಚನೆ ಸರಿಯಲ್ಲವಾದರೂ ಆ ಅಪಸ್ವರದ ಹಿಂದಿರುವ ನೋವಿನ ಧ್ವನಿಯನ್ನು ಅರ್ಥಮಾಡಿಕೊಳ್ಳಬೇಕು. ಗಾಯದ ಮೇಲೆ ಉಪ್ಪು ಎರಚಿದಂತೆ ಹೈಕೋರ್ಟ್ ಪೀಠ, ರೇಲ್ವೆ ವಲಯದ ವಿಷಯದಲ್ಲಿ ಮಾಡಿದ್ದು ಕಿಡಿಗೇಡಿಗಳಿಗೆ ಅವಕಾಶ ಒದಗಿಸಿಕೊಟ್ಟಂತಾಗಿದೆ.

ಇಂದೂ ಅಖಂಡ ಕರ್ನಾಟಕ, ಮುಂದೆಯೂ ಅಖಂಡ ಕರ್ನಾಟಕ, ಬೇರೊಂದಿಲ್ಲ. ಅಖಂಡ ಕರ್ನಾಟಕಕ್ಕಾಗಿ ಅದರಗುಂಚಿ ಶಂಕರಗೌಡರು ನಡೆಸಿದ ಐತಿಹಾಸಿಕ ಉಪವಾಸ ಸತ್ಯಾಗ್ರಹ ವಿಫಲವಾಗಲು ಬಿಡುವುದಿಲ್ಲ. ಅದೇ ಸಮಯದಲ್ಲಿ ಪ್ರಾದೇಶಿಕ ಅಸಮಾನತೆ ನಿವಾರಣೆಗಾಗಿ ಹೋರಾಟ ಮುಂದುವರೆ ಯುವುದು ಅನಿವಾರ್ಯ. ಸಾಮಾಜಿಕ ಹಿಂದುಳಿ ಯುವಿಕೆಯ ನಿವಾರಣೆಗಾಗಿ 'ಮೀಸಲಾತಿ' ತಂದಂತೆ ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ ''ಬಜೆಟ್ ಮೀಸಲಾತಿ'' ಅವಶ್ಯ ಅಲ್ಲವೆ ? ಗಾಯಕ್ಕೆ ಮುಲಾಮು ಹಚ್ಚಬೇಕು, ಉಪ್ಪು ಹಾಕಬಾರದಲ್ಲವೆ ?

ಎಚ್. ಬಿ. ಚಂಚೋಳಿ
ಪೊ॥ ಸಾಸಾಬಾಳ, ತಾ: ಸಿಂದಗಿ, ಜಿ: ವಿಜಾಪುರ



# ಗಾಂಧೀಜಿ: ಸಾಮೂಹಿಕ ಕ್ರಿಯಾಶೀಲತೆಯ ಶಕ್ತಿ

ಬರಗೂರು ರಾಮಚಂದ್ರಪ್ಪ

''ಗಾಂಧೀಜಿ'' ಎಂಬುದು ಕೇವಲ ಒಂದು ಹೆಸರಾಗಿ ಉಳಿದಿಲ್ಲ. ಅದು ನಮ್ಮ ನೆಲದ ಒಂದು ಮುಖ್ಯ ಮಾದರಿ. ಜನಮಾನಸದ ಸ್ಥಿರ ವಿನ್ಯಾಸಗಳ ಒಳಗಿಂದಲೇ ಹೊರ ಬಂದು ವಿಭಿನ್ನವಾಗಿ ನಿಲ್ಲುವ, ಮತ್ತೆ ಒಳ ಹೋಗುತ್ತ ಮಾತಾಡುವ, ವಿಶಿಷ್ಟ ಚಲನಶೀಲ ಗುಣ ಗಾಂಧೀಜಿಯವರನ್ನು 'ನಿಮ್ಮೊಳಗಿದ್ದು ನಿಮ್ಮಂತಾಗದ' ನೆಲೆಯಲ್ಲಿ ನಿಲ್ಲಿಸಿದೆ. ಹಿಂದೂ ಸಾಂಪ್ರದಾಯಿಕತೆಯಲ್ಲಿ ಹೂತು ಹೋಗಲಿಚ್ಛಿಸದೆ ಹೊರ ಬಂದು ವಿಶ್ಲೇಷಿಸಬಲ್ಲ ನಿಷ್ಠುರತೆಯಿದ್ದ ಗಾಂಧೀಜಿ ಹಿಂದೂ ಧರ್ಮವನ್ನು ಪೂರ್ಣ ನಿರಾಕರಿಸಲಿಲ್ಲ. ಹಾಗೆಂದು ಹಿಂದೂ ಮೂಲಭೂತವಾದಿಯಾಗಲಿಲ್ಲ. ಸಾಮಾಜಿಕ ಕಳಂಕಗಳನ್ನು ಕಾರುಣ್ಯದ ನೆಲೆಯಲ್ಲಿ ನೋಡುತ್ತ, ಅವುಗಳ ವಿರುದ್ಧ ಕಠಿಣ ನಿಲುವು ತಳೆದರೂ 'ಸಾಮಾಜಿಕ ಕ್ರಾಂತಿ' ಅವರ ಆದ್ಯತೆಯಾಗಲಿಲ್ಲ. ಹಾಗೆಂದು ಸಾಮಾಜಿಕ ಬದಲಾವಣೆಯನ್ನು ಬಯಸದೆ ಇರಲಿಲ್ಲ. ಹೀಗೆ ಹೇಳುತ್ತಾ ಹೋದರೆ ಗಾಂಧೀಜಿಯವರದು ವಿಘಟಿತ ಅಥವಾ ದ್ವಂದ್ವ ಮೂಲ ವ್ಯಕ್ತಿತ್ವ ಎಂದು ತೀರ್ಮಾನಿಸುವ ಸಾಧ್ಯತೆಯುಂಟು. ಆದರೆ ನನಗನ್ನಿಸುವುದು ಹೀಗೆ : ಯಾವುದೇ ಕ್ರಿಯಾಶೀಲ ವ್ಯಕ್ತಿತ್ವ ರೂಪುಗೊಳ್ಳುವುದು ಒಂದು ನಿರ್ದಿಷ್ಟ ಸಂದರ್ಭದಲ್ಲಿ ಮತ್ತು ಆ ಸಂದರ್ಭ ಒದಗಿಸುವ ಸವಾಲುಗಳೊಂದಿಗೆ ನಡೆಸುವ ಮುಖಾಮುಖಿಯಲ್ಲಿ. ಗಾಂಧೀಜಿಯವರ ಸ್ವಾಭಿಮಾನ ಕೆರಳಿದ್ದು, ಸ್ವದೇಶ ಮೂಲಭಾವ ಸ್ಫೋಟದಲ್ಲಿ; ವೈಚಾರಿಕ ವಿಧಾನ ರೂಪಗೊಂಡದ್ದು ಬ್ರಿಟಿಷ್ ವಸಾಹತುಶಾಹಿಯ ಸವಾಲುಗಳ ಮುಖಾಮುಖಿಯಲ್ಲಿ. ಆದ್ದರಿಂದ ಗಾಂಧೀಜಿಯವರ ಚಿಂತನೆ ಮತ್ತು ಕ್ರಿಯೆಗಳಲ್ಲಿ ಸಾಮಾಜಿಕ - ಆರ್ಥಿಕ ಸಂಗತಿಗಳಿಗೆ ಮುಖ್ಯ ಸ್ಥಾನವಿದ್ದರೂ ಕೇಂದ್ರ ಪ್ರಜ್ಞೆಯಲ್ಲಿದ್ದದ್ದು ಬ್ರಿಟಿಷ್ ವಸಾಹತುಶಾಹಿಗೆ ಎದುರಾದ ಹೋರಾಟದ ನೆಲೆ. ಅವರ ಆರ್ಥಿಕ ಚಿಂತನೆಗಳಲ್ಲಿ ಕಾಣುವ ದೇಶೀಯ ನೆಲೆಗಳಿಗೂ ಬ್ರಿಟಿಷ್ ವಸಾಹತುಶಾಹಿಗೆ ಎದುರಾಗಿ ಪರ್ಯಾಯವನ್ನು ಕಂಡುಕೊಳ್ಳುವ ಕ್ರಿಯೆಗೂ ಸಂಬಂಧವಿದೆ. ಗಾಂಧೀಜಿಯವರ ಚಿಂತನೆಗಳು ಬೆಳೆಯುವುದು ವಸಾಹತುಶಾಹಿಗೆ ಪರ್ಯಾಯವಾದ ಪ್ರಜ್ಞೆಯ ಮೂಲಕ ಎಂಬುದನ್ನು ನಾವಿಲ್ಲಿ ಗಮನಿಸಬೇಕು.

ಗಾಂಧೀಜಿಯವರ ಕಾಲದಲ್ಲಿ ಅಥವಾ ಬ್ರಿಟಿಷ್ ವಿರೋಧಿ ಚಳವಳಿಯ ಸಂದರ್ಭದಲ್ಲಿ ಮೂರು ಮುಖ್ಯ ಮಾದರಿಗಳು ಕಂಡುಬರುತ್ತವೆ: ೧. ಗಾಂಧೀಜಿ ನೇತೃತ್ವದ ವಸಾಹತುಶಾಹಿ ವಿರೋಧಿ ಸ್ವಾತಂತ್ರ್ಯ ಚಳವಳಿ. ೨. ಅಂಬೇಡ್ಕರ್ ನೇತೃತ್ವದ ಸಾಮಾಜಿಕ ಚಳವಳಿ. ೩. ಕಮ್ಯುನಿಸ್ಟರ ಸಮತಾವಾದಿ ಚಳವಳಿ.

ಈ ಮೂರು ಮಾದರಿಗಳಲ್ಲಿ ಅವರವರ ಆದ್ಯತೆಗಳು ಸ್ಪಷ್ಟವಾಗಿದೆ. ಇದರರ್ಥ ಉಳಿದ ವಿಷಯಗಳನ್ನು ಇವರು ನಿರಾಕರಿಸಿದರು ಎಂದಲ್ಲ. ವಸಾಹತುಶಾಹಿ ವಿರೋಧಿ ಸ್ವಾತಂತ್ರ್ಯ ಚಳವಳಿ ಗಾಂಧೀಜಿಯವರ ಮುಖ್ಯ ಆದ್ಯತೆಯಾದರೆ ಅಸ್ಪೃಶ್ಯತೆ ವಿರೋಧಿ ಚಳವಳಿ ಡಾ॥ ಅಂಬೇಡ್ಕರ್ ಅವರ ಆದ್ಯತೆ. ಸಮತಾವಾದಿ ಚಳವಳಿಗೆ ಸ್ವಾತಂತ್ರ್ಯವೆಂದರೆ ವಸಾಹತುಶಾಹಿ ಶಕ್ತಿಗಳ ವಿರೋಧವಷ್ಟೇ ಅಲ್ಲ, ಭೂಮಾಲಿಕ ವರ್ಗ ಮತ್ತು ಬಂಡವಾಳಶಾಹಿಗಳ ವಿರೋಧವೂ ಹೌದು. ಈ ಮೂರು ಮಾದರಿಗಳಲ್ಲೂ ಸ್ವಾತಂತ್ರ್ಯದ ಕಲ್ಪನೆಯಿದೆ. ಆದರೆ ಅದರ ಅರ್ಥ ಗ್ರಹಿಕೆ ಮತ್ತು ಆದ್ಯತೆಗಳಲ್ಲಿ ಸ್ವಲ್ಪಮಟ್ಟಿನ ವ್ಯತ್ಯಾಸವಿದೆ. ಹೀಗೆಂದು ಮೇಲಿನ ಮೂರು ಮಾದರಿಗಳನ್ನು ಪರಸ್ಪರ ವಿರೋಧಿ ನೆಲೆಗಳೆಂದು ಭಾವಿಸಬೇಕಾಗಿಲ್ಲ. ಇವು ನಿರ್ದಿಷ್ಟ ಚಾರಿತ್ರಿಕ ಸನ್ನಿವೇಶದಲ್ಲಿ ರೂಪುಗೊಂಡ ವಿಭಿನ್ನ ಹಾಗೂ ವಿಶಿಷ್ಟ ಚಿಂತನಾ ವಿನ್ಯಾಸಗಳು, ಚರಿತ್ರೆಯ ಅನಿವಾರ್ಯ ಆಯಾಮಗಳು.

ಹೀಗೆ ನಾವು ನಿರ್ದಿಷ್ಟ ಚಾರಿತ್ರಿಕ ಸಂದರ್ಭವನ್ನು ಅರ್ಥೈಸಿಕೊಳ್ಳದೆ ಒಬ್ಬರನ್ನು ನಾಯಕ, ಇನ್ನೊಬ್ಬರನ್ನು ಖಳನಾಯಕ ಎಂದು ವಿಂಗಡಿಸುವ ಪ್ರವೃತ್ತಿ ಆರೋಗ್ಯಕರವಲ್ಲ. ಅದು ಸಾಧುವೂ ಅಲ್ಲ.

ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ಚಿತ್ರಗಳನ್ನು ನೋಡಿದಾಗ ನನಗೆ ನಮ್ಮ ಚರಿತ್ರೆಯ ವ್ಯಾಖ್ಯಾನವೊಂದು ಅನಾವರಣಗೊಳ್ಳುತ್ತದೆ. ಗಾಂಧೀಜಿ ಅರೆಬೆತ್ತಲೆಯಾಗಿದ್ದಾರೆ ; ಅಂಬೇಡ್ಕರ್ ಪೂರ್ಣ ಸೂಟುಧಾರಿಯಾಗಿದ್ದಾರೆ. ಪೂರ್ಣ ಸೂಟುಧಾರಿಯಾಗಿದ್ದ ಗಾಂಧೀಜಿ ಅರೆಬೆತ್ತಲೆಯಾದದ್ದು, ಅರೆಬೆತ್ತಲಾಗಿ ಬೆಳೆದ ಅಂಬೇಡ್ಕರ್ ಪೂರ್ಣ ಸೂಟುಧಾರಿಯಾಗಿದ್ದು ನಮ್ಮ ಚರಿತ್ರೆ ಚಲನಶೀಲತೆಗೆ ಒದಗಿಸಿದ ಒಂದು ವ್ಯಾಖ್ಯಾನವೆಂದೇ ನಾನು ಭಾವಿಸುತ್ತೇನೆ. ಪೂರ್ಣ ಸೂಟುಧಾರಿಯಾಗಿದ್ದ ಗಾಂಧೀಜಿಗೆ ಬಟ್ಟೆ ಬರೆಯಿಲ್ಲದ ದೀನದಲಿತರನ್ನು ಕಂಡಾಗ ಕಾಡಿದ್ದು ಪಾಪಪ್ರಜ್ಞೆ. ಅವರು ಮೇಲರಿಮೆಯ ಪೊರೆ ಕಳಚುವಂತೆ ಸೂಟನ್ನು ಕಿತ್ತೆಸೆದರು. ಆದರೆ ಅಂಬೇಡ್ಕರ್ ಅವರು ಹುಟ್ಟಿದ್ದು ಅರೆಬೆತ್ತಲೆಯ ಸಾಮಾಜಿಕ ಪರಿಸರದಲ್ಲಿ, ಕೀಳರಿಮೆ ಕಿತ್ತು ತಿನ್ನುವ ಕತ್ತಲಲ್ಲಿ. ಅವರು ಸೂಟುಧಾರಿಯಾಗುವುದರಲ್ಲೇ ಒಂದು ಸಾಮಾಜಿಕ ಸ್ವಾಭಿಮಾನವಿದೆ. ಇರುವುದನ್ನು ಬಿಟ್ಟ ಗಾಂಧೀಜಿ, ಇಲ್ಲದುದನ್ನು ಪಡೆದ ಅಂಬೇಡ್ಕರ್ - ಇಬ್ಬರೂ ನಮ್ಮ ಚರಿತ್ರೆಯ ಸಾರ್ಥಕ ಸಂಕೇತಗಳು. ಪಾಪ ಪ್ರಜ್ಞೆಯಿಂದ ಕೆಳಗಿಳಿಯುವ ಸಾರ್ಥಕತೆ ಮತ್ತು ಜಾಗ್ರತ ಪ್ರಜ್ಞೆಯಿಂದ ಮೇಲೇರುವ ರಚನಾತ್ಮಕತೆ - ಈ ಎರಡೂ ಕ್ರಿಯಾ ಮಾದರಿಗಳಲ್ಲಿ ಕ್ರಮವಾಗಿ ಕಾಣಿಸಿಕೊಂಡ ಗಾಂಧೀಜಿ ಮತ್ತು ಅಂಬೇಡ್ಕರ್‌ರವರು ಕಡೆಗೆ ಮಾಡಿಸಿದ್ದು ಸಾಮಾಜಿಕ ಸತ್ಯದ ದರ್ಶನ. ಇಲ್ಲಿ ಕೆಳಗಿಳಿದವರು ಖಂಡಿತ ಕೆಳಗಿಳಿದು ಸಣ್ಣವರಾಗಲಿಲ್ಲ. ಮೇಲೇರಿದವರು ಖಂಡಿತ ಹುಸಿ ಪ್ರತಿಷ್ಠೆಯ ಮೇಲರಿಮೆ ಪಡೆಯಲಿಲ್ಲ. ಇಬ್ಬರೂ ನಮ್ಮ ಸಾಮಾಜಿಕ ಚಲನಶೀಲತೆಯ ವೈರುಧ್ಯದಲ್ಲಿ ಹುಟ್ಟಿ ಬೆಳೆದ ಚಲನಶೀಲ ಮಾದರಿಗಳಾದರು, ಅಷ್ಟೆ. ಆದ್ದರಿಂದ ನಾನು ಇಲ್ಲಿ ಕೊಟ್ಟಿರುವ ಉಡುಪಿನ ಉದಾಹರಣೆಯನ್ನು ಸಾಂಕೇತಿಕ ಅರ್ಥದ ಹಂತದಲ್ಲಿ ಸ್ವೀಕರಿಸಬೇಕೇ ಹೊರತು ಅದರಾಚೆಗಿನ ಚರ್ಚೆಗಳಿಗಲ್ಲ. ಒಂದು ಸಣ್ಣ ಸಂಗತಿಯೂ ಹೇಗೆ ಸಾಮಾಜಿಕ ಚರಿತ್ರೆಯ ಒಳಸುಳಿಯ ಭಾಗವಾಗಲು ಸಾಧ್ಯವೆಂದು ವಿವರಿಸಲು ಈ ಉಡುಪಿನ ಉದಾಹರಣೆಯನ್ನು ಕೊಟ್ಟಿದ್ದೇನೆ. ಇದು ಗಾಂಧೀಜಿಯವರನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ.

ಗಾಂಧೀಜಿಯವರಿಗೆ ಸೂಟು ಬೂಟುಗಳನ್ನು ವರ್ಜಿಸುವುದರಲ್ಲಿ ಕೆಲಸ ಮಾಡಿದ ಪಾಪಪ್ರಜ್ಞೆಯೇ ಅವರ ಮನೋಧರ್ಮದ ಮುಖ್ಯಭಾಗವಾಗಿದೆ. ಅವರ ಸತ್ಯಾಗ್ರಹದ ಕಲ್ಪನೆಯಲ್ಲಿ ಕೆಲಸ ಮಾಡುವುದು ಇದೇ ಪಾಪಪ್ರಜ್ಞೆ. ತಮಗೆ ತಾವೇ ದಂಡಿಸಿಕೊಳ್ಳುವ ಅವರ ಗುಣ ಒಂದು ಮನೋಮೌಲ್ಯವಾಗಿ ಬೆಳೆದದ್ದು ಈಗ ಇತಿಹಾಸದ ಒಂದು ಭಾಗ. ಗಾಂಧೀಜಿಯವರ ಉಪವಾಸ ಸತ್ಯಾಗ್ರಹಗಳು ಏನನ್ನು ಹೇಳುತ್ತಿದ್ದವೆಂಬುದನ್ನು ನೋಡಿದರೆ ಮತ್ತೊಂದು ಅಂಶ ಗೋಚರಿಸುತ್ತದೆ. ಅವರು ಮತ್ತೊಬ್ಬರ ಮನಃಪರಿವರ್ತನೆಗಾಗಿ ಸತ್ಯಾಗ್ರಹವನ್ನು ಮಾಡುತ್ತಿದ್ದರು. ಅಂದರೆ ಮತ್ತೊಬ್ಬರಲ್ಲಿ ಕಾಡಿಸಬೇಕಾದ ಪಾಪಪ್ರಜ್ಞೆಯನ್ನು ತಮ್ಮೊಳಗೆ ಆಹ್ವಾನಿಸಿಕೊಂಡು ಅನುಭವಿಸುವ ಪರಿಯಿದು. ಈ ಮೂಲಕ ಸಂಬಂಧಪಟ್ಟ ವಿರೋಧಿ ವಲಯದಲ್ಲಿ ಪಾಪಪ್ರಜ್ಞೆಯನ್ನು ಮೂಡಿಸುವುದು ಸತ್ಯಾಗ್ರಹದ ಒಳ ಒತ್ತಾಸೆ. ಅಷ್ಟೇ ಅಲ್ಲ, ಪಾಪಪ್ರಜ್ಞೆ ಮತ್ತು ಜಾಗ್ರತ ಪ್ರಜ್ಞೆಗಳ ನಡುವೆ ಅರ್ಥಪೂರ್ಣ ಸಂಚಾರ ಸೇತುವಾಗುವುದೇ ಗಾಂಧೀಜಿಯವರ ವಿಶಿಷ್ಟ ವಿಧಾನ. ಈ ಸಂಕಟಮಯ ಸಂಚಾರದಲ್ಲಿ 'ಜಾಗ್ರತ ಪಾಪಪ್ರಜ್ಞೆ'ಯಾದದ್ದು ಗಾಂಧಿ ವ್ಯಕ್ತಿತ್ವದ ವಿಸ್ಮಯ ಎನಿಸುತ್ತದೆ. ಅವರ ಬದುಕು ಇದಕ್ಕೊಂದು ಸ್ವಯಂಸಾಕ್ಷಿ.

ಗಾಂಧೀಜಿಯವರು ದಿನಾಂಕ : ೨೫-೧-೧೯೩೫ ರಂದು 'ಹರಿಜನ' ಪತ್ರಿಕೆಯಲ್ಲಿ ಹೀಗೆ ಬರೆದರು : ''ನನ್ನ ಬದುಕು ಒಂದು ತೆರೆದ ಪುಸ್ತಕ. ನಾನು ರಹಸ್ಯವಾಗಿ ಇಡುವುದು ಏನೂ ಇಲ್ಲ.''

ತಾವು ಬರೆದಂತೆ ಬದುಕಿದ, ಆತ್ಮಸಾಕ್ಷಿಗೆ ಸದಾ ಬದ್ಧವಾದ ಮನುಷ್ಯನಾದುದರಿಂದಲೇ ಗಾಂಧೀಜಿಯವರನ್ನು 'ಮಹಾತ್ಮ' ಎಂದು ಕರೆದರು. ಆದರೆ ಗಾಂಧೀಜಿಯವರು ಅದರಿಂದ ಅಹಂಕಾರಪಡಲಿಲ್ಲ. ತಾನು ಮಹಾತ್ಮನಾದೆನೆಂದು ಬೀಗಿದ ಬೆಲೂನಾಗಲಿಲ್ಲ. ಬದಲಾಗಿ ಮತ್ತಷ್ಟು ವಿನಯಶೀಲರಾದರು, ಆತ್ಮಬದ್ಧರಾದರು. ಸೌಜನ್ಯದಲ್ಲೇ ನಿಷ್ಠುರತೆಯನ್ನು ರೂಢಿಸಿಕೊಂಡರು. ತಾವು ಕೇವಲ ಮನುಷ್ಯ ಮಾತ್ರ ಎಂದು ಮತ್ತೆ ಮತ್ತೆ ಹೇಳಿದರು; ತಮಗೆ ತಾವೇ ಹೇಳಿಕೊಂಡರು. ''ನನಗೆ ಯಾರಾದರೂ ಶತ್ರುಗಳಿದ್ದಾರೆಂದು ನಾನು ನಂಬುವುದಿಲ್ಲ. ನಾನು ಯಾರನ್ನೂ ಶತ್ರುವೆಂದು ಭಾವಿಸುವುದಿಲ್ಲ'' (೧೭-೧೧-೧೯೩೩ - ಹರಿಜನ) ಎಂದು ಬಲವಾಗಿ ಪ್ರತಿಪಾದಿಸುತ್ತ ಬಂದ ಗಾಂಧೀಜಿಯವರು 'ಸಂತತನ'ದ ಸಾಕಾರಮೂರ್ತಿಯಂತೆ ಕಂಡದ್ದರಲ್ಲಿ ಆಶ್ಚರ್ಯವಿಲ್ಲ. ಅವರು ಕಟ್ಟಿದ ಸ್ವಾತಂತ್ರ್ಯ ಹೋರಾಟದಲ್ಲೂ ಈ ಸಂತತನದ ಅಂಶ ಕಾಣುತ್ತಿತ್ತು. ಅವರು ಅವಧೂತನಂತೆ, ಹೋರಾಟಗಾರನಂತೆ, ಪ್ರಬುದ್ಧ ರಾಜಕಾರಣಿಯಂತೆ ಏಕಕಾಲದಲ್ಲಿ ಕಾಣುತ್ತಿದ್ದರೂ ಆಳದಲ್ಲಿ ಆತ್ಮನಿಷ್ಠೆಯ ಸಂತತನ ಕೆಲಸ ಮಾಡುತ್ತಿತ್ತು. ಜನರು ಇವರನ್ನು 'ಮಹಾತ್ಮ'ರೆಂದು ಕರೆಯಲು ಪ್ರೇರಣೆ ನೀಡಿದ್ದು ಈ ಸಂತತನದ ಅಂಶವೆಂದು ನನ್ನ ಭಾವನೆ. ಯಾರಿಗೂ ಕೆಡಕನ್ನು ಬಯಸದ, ಸದಾ ಕ್ರಿಯಾಶೀಲವಾದ ಆತ್ಮನಿಷ್ಠೆ ಬದುಕಿನ ಗಾಂಧೀಜಿಯವರು ಯಾವುದೇ ಬಹಿರಾಡಂಬರವನ್ನು ಒಪ್ಪದ ಸರಳ ಶೈಲಿಯಲ್ಲಿ ಪ್ರಕಟಗೊಂಡ 'ಸನ್ಯಾಸಿ'ಯಾಗಿ ಜನರಿಗೆ ಕಂಡರು. ಆದರೆ ಅವರು ಜನ ದೂರವಾದ ಸಾಂಪ್ರದಾಯಿಕ ಸನ್ಯಾಸಿಯಾಗಿರಲಿಲ್ಲ. ಭಜನೆಯಲ್ಲೇ ಬದುಕನ್ನು ಕಳೆದುಕೊಳ್ಳುವ ಭಕ್ತನಾಗಿರಲಿಲ್ಲ. ಕ್ರಿಯೆಯಲ್ಲಿ ಸಾಮಾಜಿಕ ಶಕ್ತಿಯಾಗಿದ್ದರು, ಹೋರಾಟಗಾರರಾಗಿದ್ದರು. ಸ್ವಭಾವದಲ್ಲಿ ಸನ್ಯಾಸಿಯಾಗಿದ್ದರು, ಸಂತನಾಗಿದ್ದರು. ಆದರೆ ತಮ್ಮನ್ನು 'ಸಂತ'ರೆಂದು ಕರೆಯುವ ಪರಿಪಾಠವನ್ನೂ ಅವರು ಒಪ್ಪಲಿಲ್ಲ. ೨೦-೧-೧೯೨೭ರ 'ಯಂಗ್ ಇಂಡಿಯಾ'ದಲ್ಲಿ ಬರೆಯುತ್ತ ''ನನಗೆ ಸಂತತನದ ಬಟ್ಟೆ ತೊಡಿಸುವುದು ತೀರಾ ಆತುರದ್ದು. ನನ್ನಲ್ಲಿ ನಾನು ಯಾವುದೇ ರೂಪದ ಸಂತತನವಿದೆಯೆಂದು ಭಾವಿಸುವುದಿಲ್ಲ'' ಎಂದು ಬರೆದರು. ಗಾಂಧೀಜಿಯವರು ತಮ್ಮ ಬಗೆಗಿನ ಪ್ರಶಂಸನೆಗಳನ್ನು ವಿನಯದಿಂದ ದೂರ ಮಾಡುವ ರೀತಿ ಇದಾಗಿತ್ತು. ಮತ್ತಷ್ಟು ಆತ್ಮನಿಷ್ಠರಾಗಲು, ಆತ್ಮವಿಮರ್ಶಕರಾಗಲು ಇದು ಕಾರಣವಾಗಿತ್ತು.

ಗಾಂಧೀಜಿಯವರಲ್ಲಿ ಸಂತತನ ಮತ್ತು ಧಾರ್ಮಿಕ ಮನೋಧರ್ಮಗಳು ಜನಸಾಮಾನ್ಯರಲ್ಲಿ ಅಪಾರ ಜನಪ್ರಿಯತೆಯನ್ನು ರೂಪಿಸಿದ ಅಂಶಗಳಾಗಿದ್ದವು. ಅವರ ಸ್ವಾತಂತ್ರ್ಯ ಹೋರಾಟವು ರಾಜಕೀಯ ಸ್ವರೂಪದ್ದಾಗಿದ್ದರೂ ವೈಯಕ್ತಿಕ ನಡೆ, ನುಡಿಗಳ ನೆಲೆಯಲ್ಲಿ ಹೆಚ್ಚು ಧಾರ್ಮಿಕವಾಗಿ ಕಾಣುತ್ತಿದ್ದ ಗಾಂಧೀಜಿಯವರು ಈ ದೇಶದ ಮನಸ್ಥಿತಿಗೆ ಒಗ್ಗಿದರು. ಯಥಾಸ್ಥಿತಿಯ ಮನಸ್ಥಿತಿಯಲ್ಲಿ ಮನೆಮಾಡಿ ಮತ್ತೆ ಮೀರುವ ಕ್ರಿಯೆಯಲ್ಲಿ ತೊಡಗುವ ಗಾಂಧೀಜಿಯವರ ವಿಶಿಷ್ಟ ಸ್ವಭಾವ - ಶೈಲಿಗಳು ಬಹುಬೇಗ ಜನಸಾಮಾನ್ಯರಿಗೆ ಹಿಡಿಸಿದವು. ಆದರೆ ಗಾಂಧೀಜಿ ಧಾರ್ಮಿಕತೆಯ ಹೆಸರಿನಲ್ಲಿ ಜಡತೆಯನ್ನು ಎತ್ತಿಹಿಡಿಯಲಿಲ್ಲ. ಅವರ ಅರ್ಥದ 'ಧರ್ಮ'ವು ಹೆಚ್ಚು ಉದಾರವಾಗಿತ್ತು. ಧರ್ಮವೆಂದರೆ ದೇವರು ಮಾತ್ರವಲ್ಲ; ಯಾಂತ್ರಿಕ ಆಚರಣೆಯಲ್ಲ. ಅದೊಂದು ವಿಶಿಷ್ಟ ಮನೋಧರ್ಮವೆಂದು ಅವರು ಭಾವಿಸಿದ್ದರು; ಅದರಂತೆ ಬದುಕಿದರು. ಹಿಂದೂ ಧರ್ಮವನ್ನು ಮೆಚ್ಚಿದ ಗಾಂಧೀಜಿಯವರು ತಮ್ಮ ಕಲ್ಪನೆಯ ಧರ್ಮವೆಂದರೆ ಹಿಂದೂ ಧರ್ಮ ಮಾತ್ರವಲ್ಲ ಎಂದು ಹೇಳಿದರು. ''ಧರ್ಮವೆನ್ನುವುದು ಮನುಷ್ಯ ಸ್ವಭಾವದ ಖಾಯಂ ನೆಲೆ; ತನ್ನೊಳಗಿನ ಸತ್ಯಕ್ಕೆ ಬದ್ಧವಾದ ಅಂಶ; ಶುದ್ಧೀಕರಿಸುವ ಪ್ರಕ್ರಿಯೆ'' (೧೨-೫-೧೯೨೦ - ಯಂಗ್ ಇಂಡಿಯಾ) ಎಂದು ಭಾವಿಸಿದ್ದ ಗಾಂಧೀಜಿ ಧರ್ಮವನ್ನೂ ಒಂದು ಅಂತರಂಗಿಕ ಪ್ರಕ್ರಿಯೆಯಾಗಿ ಸ್ವೀಕರಿಸಿದರು. ಆ ಅರ್ಥದಲ್ಲಿ ಧರ್ಮವಿಲ್ಲದ ರಾಜಕೀಯವನ್ನು ಅವರು ಒಪ್ಪಲಿಲ್ಲ.

''ನನಗೆ ಧರ್ಮವಿಲ್ಲದ ರಾಜಕೀಯ ಒಪ್ಪಿತವಲ್ಲ. ಆದರೆ ನನ್ನ ದೃಷ್ಟಿಯಲ್ಲಿ ಧರ್ಮವೆಂದರೆ ಅಂಧಾನುಸರಣೆಯ, ಮೂಢಭಕ್ತಿಯ, ದ್ವೇಷದ, ಕಚ್ಚಾಟದ ನೆಲೆಯಲ್ಲ. ಸಹನೆ ಸಂಯಮಗಳ ಸಾರ್ವತ್ರಿಕ ಧರ್ಮವನ್ನು ನಾನು ಒಪ್ಪುತ್ತೇನೆ. ಈ ಅರ್ಥದಲ್ಲಿ ನೈತಿಕತೆಯಿಲ್ಲದ ರಾಜಕೀಯ ಯೋಗ್ಯವಲ್ಲವೆಂದು ನಂಬುತ್ತೇನೆ'' (೨೭-೧೧-೧೯೨೪ - ಯಂಗ್ ಇಂಡಿಯಾ).

ಗಾಂಧೀಜಿಯವರ ಧರ್ಮದ ಕಲ್ಪನೆಯಲ್ಲಿ ನೈತಿಕತೆಗೆ ಮೊದಲ ಸ್ಥಾನವೆನ್ನುವುದು ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಧರ್ಮ ಮತ್ತು ನೈತಿಕತೆಗಳನ್ನು ಸಂವಾದಿಯಾಗಿ ಸ್ವೀಕರಿಸಿದ ಆತ್ಮನಿಷ್ಠ ಗಾಂಧೀಜಿಯವರು ಹಿಂದೂ ಧರ್ಮಿಯಾಗಿದ್ದೂ ಮುಸ್ಲಿಮರನ್ನು ಪ್ರೀತಿ ವಿಶ್ವಾಸದಿಂದ ಕಾಣಲು ಸಾಧ್ಯವಾದದ್ದು ಇಂಥ ಉದಾರವಾದಿ ನೆಲೆಯ ನಡೆವಳಿಕೆಯಿಂದ. ಜಡ ಧರ್ಮದ ನೆಲೆಗಳನ್ನು ಮೀರಿದ ಮಾನವೀಯ ಅಂತಃಕರಣದಿಂದ.

ಮೀರುವ ಮನೋಧರ್ಮದಿಂದ ಚಲನಶೀಲತೆಗೆ ಕಾರಣವಾಗುವ ಗಾಂಧೀಜಿ ಕೆಲವು ವಿಷಯಗಳಲ್ಲಿ ಧಾರ್ಮಿಕ ಜಡತೆಗೆ ಜೋತುಬಿದ್ದರೇನೋ ಎಂಬ ಅನುಮಾನಕ್ಕೂ ಅವಕಾಶವಿದೆ. ನಮ್ಮ ದೇಶದ ವರ್ಣಾಶ್ರಮ ಮತ್ತು ಜಾತಿ ವ್ಯವಸ್ಥೆಯ ಬಗ್ಗೆ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಚರ್ಚಾಸ್ಪದವಾಗಿವೆ, ವಿವಾದಕ್ಕೆಡೆಕೊಡುತ್ತವೆ. ''ವಂಶಪಾರಂಪರ್ಯವಾದ ನಿಯಮಗಳು ನಿತ್ಯ ನಿಯಮಗಳೆಂದು ನನ್ನ ಭಾವನೆ. ಅವುಗಳನ್ನು ಬದಲಾಯಿಸಲು ಮಾಡುವ ಪ್ರಯತ್ನದಿಂದ ಗೊಂದಲವುಂಟಾಗುತ್ತದೆ'' ಎಂದು ಅಭಿಪ್ರಾಯಪಡುವ ಗಾಂಧೀಜಿ ವರ್ಣಾಶ್ರಮದ ವಿಷಯಕ್ಕೆ ಬಂದಾಗ ಹಿಂದೂ ಸನಾತನಿಯಾಗಿಬಿಡುತ್ತಾರೆ. ''ವರ್ಣಾಶ್ರಮ ಅಥವಾ ಜಾತಿ ಪದ್ಧತಿಯು ಮನುಷ್ಯ ಸ್ವಭಾವಕ್ಕೆ ಅಂಟಿಕೊಂಡಿದೆ. ಹಿಂದೂ ಧರ್ಮವು ಅದನ್ನು ವಿಜ್ಞಾನದ ಮಟ್ಟಕ್ಕೇರಿಸಿದೆ'' ಎಂದು ಸಾರುತ್ತಾರೆ. ಸ್ವಭಾವಕ್ಕೆ ಅಂಟಿಕೊಂಡು ಬಂದಿರುವುದು ಒಂದು ವಾಸ್ತವವಾದರೂ ವರ್ಣಾಶ್ರಮವನ್ನು, ಜಾತಿಪದ್ಧತಿಯನ್ನು, ಹಿಂದೂ ಧರ್ಮವು ವಿಜ್ಞಾನವನ್ನಾಗಿಸಿದೆಯೆಂಬ ಪ್ರಶಂಸೆಯನ್ನು ಖಂಡಿತ ಒಪ್ಪಲಾಗದು. ಹಿಂದೂ ಧರ್ಮದ ಜಡತೆಯನ್ನು ಮೀರಿದ ಮಾತು ಮತ್ತು ನಡೆವಳಿಕೆಗಳನ್ನು ತೋರಿದ, ಬದುಕಿದ, ಗಾಂಧೀಜಿ ಈ ವಿಷಯದಲ್ಲಿ ವಸ್ತುಸ್ಥಿತಿಯ ಬದಲಾವಣೆಗೆ ಬದಲಾಗಿ ವಸ್ತುಸ್ಥಿತಿಯ ಒಪ್ಪಿಗೆಯಲ್ಲಿ ಸಂತೃಪ್ತರಾದಂತೆ ಕಾಣುತ್ತದೆ. ಆದರೆ ಇದೇ ಗಾಂಧೀಜಿ ಅಸ್ಪೃಶ್ಯತೆಯನ್ನು ಕಟುವಾಗಿ, ದೃಢವಾಗಿ ವಿರೋಧಿಸುತ್ತಾರೆ. ''ಅಸ್ಪೃಶ್ಯತೆಯು ಹಿಂದೂ ಧರ್ಮದ ಒಂದು ಪಾಪಕೃತ್ಯ''ವೆಂದು ಭಾವಿಸಿದ ಗಾಂಧೀಜಿ ''ಅಸ್ಪೃಶ್ಯತೆಯನ್ನು ಹಿಂದೂ ಧರ್ಮದ ಒಂದು ಅಂಗವಾಗಿ ನಾವು ಉಳಿಸಿಕೊಂಡಿರುವವರೆಗೆ ನಮಗೆ ಸ್ವಾತಂತ್ರ್ಯ ದಕ್ಕದು. ನಮ್ಮ ಅಸಹಾಯಕ ಬಂಧುಗಳಿಗೆ ನಾವು ಮಾಡಿರುವ ಕ್ರೌರ್ಯದ ಪೂರ್ಣ ಪಾಪದಿಂದ ನಾವು ವಿಮೋಚಿತರಾಗದಿದ್ದರೆ ನಮಗೂ ಮೃಗಗಳಿಗೂ ಯಾವ ವ್ಯತ್ಯಾಸವೂ ಇಲ್ಲ'' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಹಾಗಾದರೆ ಜಾತಿ ವ್ಯವಸ್ಥೆ ಮತ್ತು ಕ್ರೌರ್ಯದ ಕೆಲವು ಅಂಶಗಳ ನಿವಾರಣೆಯನ್ನು ಮಾತ್ರ ಗಾಂಧೀಜಿಯವರು ಇಷ್ಟಪಟ್ಟರೆ ಎಂಬ ಅನುಮಾನ ಮೂಡುತ್ತದೆ. ಅದೇನೇ ಇದ್ದರೂ ಅಸ್ಪೃಶ್ಯತೆಯ ವಿರೋಧದ ಬಗ್ಗೆ ಸ್ಪಷ್ಟ ನಿಲುವು ತಳೆದದ್ದು ಸಮಾಧಾನ ತರುತ್ತದೆ.

ಒಂದು ಅಂಶವನ್ನು ಈ ಸಂದರ್ಭದಲ್ಲಿ ಮನವರಿಕೆ

## ಹೊಸತು ವಿಮರ್ಶಾ ಲೇಖನಗಳಿಗೆ ಸ್ವಾಗತ

೧೯೯೯ರ ಆಗಸ್ಟ್‌ನಿಂದ ೨೦೦೦ರದ ಜುಲೈವರೆಗಿನ 'ಹೊಸತು' ಸಂಚಿಕೆಗಳ ಕುರಿತು, ವೈಚಾರಿಕ ಮತ್ತು ಸೈದ್ಧಾಂತಿಕ ಲೇಖನಗಳ ಬಗ್ಗೆ ಹೆಚ್ಚು ಒತ್ತು ನೀಡಿ ಬರೆಯಲಾಗುವ ವಸ್ತುನಿಷ್ಠ ವಿಮರ್ಶೆಗಳಿಗೆ ಸ್ವಾಗತವಿದೆ.

ಮೂರು ಅತ್ಯುತ್ತಮ ವಿಮರ್ಶೆಗಳಿಗೆ ಕ್ರಮವಾಗಿ ಒಂದು ಸಾವಿರ, ಏಳುನೂರು ಮತ್ತು ಐನೂರು ರೂಪಾಯಿ ಮೌಲ್ಯದ, ನವಕರ್ನಾಟಕ ಪುಸ್ತಕಗಳ ಬಹುಮಾನಗಳು.

ಲೇಖನಗಳು ಸ್ಫುಟವಾದ ಅಕ್ಷರಗಳಲ್ಲಿ ಫುಲ್‌ಸ್ಕೇಪ್ ನಾಲ್ಕು ಪುಟಗಳಿಗೆ (ಸುಮಾರು ೧೮೦೦ ಪದಗಳಿಗೆ) ಮೀರಿದಂತಿರಲಿ. ವಿಮರ್ಶೆ ನಮಗೆ ತಲುಪಬೇಕಾದ ದಿನಾಂಕ : ೧೫.೧೧.೨೦೦೦. ವಿಜೇತರ ಹೆಸರುಗಳನ್ನು ೨೦೦೧ ಜನವರಿ ಹೊಸತು ವಾರ್ಷಿಕ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಅಂತಿಮ ತೀರ್ಮಾನ ತೀರ್ಪುಗಾರರದು. ಪತ್ರವ್ಯವಹಾರಕ್ಕೆ ಅವಕಾಶವಿಲ್ಲ.

-ಸಂಪಾದಕ

ಮಾಡಿಕೊಳ್ಳಬೇಕು. ಕೆಲವೊಮ್ಮೆ ಗಾಂಧೀಜಿಯವರು ಪರಸ್ಪರ ವಿರುದ್ಧಾತ್ಮಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದುಂಟು. ಸಾಂದರ್ಭಿಕ ಹೇಳಿಕೆಗಳನ್ನು ಒಟ್ಟಿಗೇ ಇಟ್ಟು ನೋಡಿದಾಗ ಅಭಿಪ್ರಾಯಗಳ ಅಸಂಗತ ನೆಲೆ ಎದ್ದು ಕಾಣುತ್ತದೆ. ಈ ಅಂಶ ಗಾಂಧೀಜಿಯವರಿಗೂ ಗೊತ್ತಿತ್ತು. 'ನಾನು ಪರಸ್ಪರ ಅ-ಸಂಗತ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದನ್ನು ಒಪ್ಪುತ್ತೇನೆ' ಎಂದು ಅವರೇ ಹೇಳಿದ್ದಾರೆ. ಇಷ್ಟಾದರೂ ವರ್ಣಾಶ್ರಮ ಪದ್ಧತಿಯ ಬಗೆಗಿನ ಅವರ ಅಭಿಪ್ರಾಯವನ್ನು ಸಾಂದರ್ಭಿಕವೆಂದು ಹೇಳಿ ರಿಯಾಯಿತಿ ಕೊಡಲು ಸಾಧ್ಯವಿಲ್ಲ. ನಮ್ಮ ದೇಶದ ''ಸಾಂಪ್ರದಾಯಿಕ ಮಠಾಧಿಪತಿಯ ಮನಸ್ಸು'' ಈ 'ಮಹಾತ್ಮ'ರಲ್ಲಿ ಕೆಲಸ ಮಾಡಿದ ಪರಿಣಾಮದಿಂದ ವರ್ಣಾಶ್ರಮವನ್ನು ವೈಜ್ಞಾನಿಕವೆಂದೂ ವಾಸ್ತವವೆಂದೂ ಒಪ್ಪಿದ್ದಾರೆಂದು ಹೇಳಬೇಕಾಗುತ್ತದೆ. ಆದರೆ ಗಾಂಧೀಜಿಯವರನ್ನು ಅಪ್ರಸ್ತುತರೆಂದೂ, ಅಪಾಯಕಾರಿಗಳೆಂದೂ ಹೇಳಲು ಈ ಅಭಿಪ್ರಾಯವನ್ನು ಅಸ್ತ್ರವಾಗಿ ಬಳಸುವ ಶಕ್ತಿಗಳು ಅವರ ಒಟ್ಟು ವ್ಯಕ್ತಿತ್ವವನ್ನು ಮರೆಯುತ್ತಿದ್ದಾರೆಂದು ಇದೇ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ನಮಗೆ ಒಪ್ಪದ ಒಂದು ಮುಖ್ಯ ಅಭಿಪ್ರಾಯವನ್ನು ಮುಂದೆ ಮಾಡಿ ಗಾಂಧೀಜಿಯವರನ್ನು ನಿರಾಕರಿಸುವುದು ಚಾರಿತ್ರಿಕ ಹಂತವೊಂದನ್ನು ಅಲಕ್ಷ್ಯ ಮಾಡಿದಂತಾಗುತ್ತದೆ. ವರ್ಣಾಶ್ರಮ ಮತ್ತು ಜಾತಿ ಪದ್ಧತಿಯ ಪರವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗ ಗಾಂಧೀಜಿಯವರಲ್ಲಿ ಕೆಲಸ ಮಾಡಿದ ಹಿಂದೂ ಧರ್ಮೀಯತೆಯು ಅವರ ನಿತ್ಯ ನಡೆವಳಿಕೆಯಲ್ಲಿ ಮನೆಮಾಡಿಕೊಂಡಿತ್ತೇ ಎಂಬ ಪರಿಶೀಲನೆ ತುಂಬಾ ಮುಖ್ಯ. ಗಾಂಧೀಜಿಯವರು ಹಿಂದೂ ಧರ್ಮದ ಬಗ್ಗೆ ಹೆಮ್ಮೆ ಪಡುತ್ತಿದ್ದರಾದರೂ ಅದರ ಜಡತ್ವವನ್ನು ಆರಾಧಿಸಲಿಲ್ಲ; ಜನವಿರೋಧಿ ನೆಲೆಗಳನ್ನು ಪೋಷಿಸಲಿಲ್ಲ. ಸ್ವತಃ ಹಿಂದೂ ಮೂಲಭೂತವಾದಿಗಳ ವಿರೋಧಕ್ಕೆ ಪಾತ್ರರಾದರು; ಅವರಿಂದ ಹತ್ಯೆಗೀಡಾದರು. ಆದ್ದರಿಂದ ಚಾರಿತ್ರಿಕ ಮಹತ್ವದ ಪಾತ್ರ ವಹಿಸಿದ ಗಾಂಧೀಜಿಯವರ ವ್ಯಕ್ತಿತ್ವವನ್ನು ಇಡಿಯಾಗಿ ನಿರಾಕರಿಸುವ ಪ್ರವೃತ್ತಿ ಹಸಿ ಹಸಿ ಆತುರತನದಿಂದ ಕೂಡಿದೆ. ಹೀಗೆಂದ ಕೂಡಲೆ ಗಾಂಧೀಜಿಯವರ ಎಲ್ಲ ಅಭಿಪ್ರಾಯಗಳನ್ನು ನಾವು ಒಪ್ಪಬೇಕಾಗಿಲ್ಲ; ನನ್ನಂಥವರಿಗೆ ಅದು ಸಾಧ್ಯವೂ ಇಲ್ಲ. ಆದರೆ ಅವರ ಚಾರಿತ್ರಿಕ ಪಾತ್ರಗಳನ್ನು ಗೌಣಗೊಳಿಸುವ ಪ್ರಯತ್ನಗಳು ಖಂಡಿತ ಪ್ರಬುದ್ಧ ಮನಸ್ಸಿನಿಂದ ಕೂಡಿರುವುದಿಲ್ಲ.

ಒಟ್ಟಾರೆ ಹೇಳುವುದಾದರೆ ಗಾಂಧೀಜಿಯವರು ವರ್ಣಾಶ್ರಮ ಮತ್ತು ಜಾತಿ ಪದ್ಧತಿಯ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಒಪ್ಪಲು ಸಾಧ್ಯವಾಗದು. ಭಗತ್ ಸಿಂಗ್ ಮುಂತಾದ ಕ್ರಾಂತಿಕಾರಿಗಳನ್ನು ಬ್ರಿಟಿಷರು ಗಲ್ಲಿಗೆ ಏರಿಸುವಾಗ ಗಾಂಧೀಜಿ ವಹಿಸಿದ ದಿವ್ಯಮೌನವನ್ನು ಮನ್ನಿಸಲಾಗದು. ಅಸ್ಪೃಶ್ಯರಿಗೆ ಪ್ರತ್ಯೇಕ ಚುನಾವಣಾ ರಂಗವನ್ನು ಕಲ್ಪಿಸುವ ವಿಚಾರದ ವಿರುದ್ಧ ೧೯೩೨ರಲ್ಲಿ ಗಾಂಧೀಜಿಯವರು ಕೈಗೊಂಡ ಆಮರಣಾಂತ ಉಪವಾಸ ಸತ್ಯಾಗ್ರಹವೂ ಚರ್ಚಾಸ್ಪದವಾದುದು. ಪಾಪ-ಪುಣ್ಯಗಳ ನೆಲೆಯಲ್ಲಿ ಎಲ್ಲವನ್ನೂ ನೋಡುತ್ತ ಹಿಂದೆ ಸಂಭವಿಸಿದ ಬಿಹಾರದ ಭೂಕಂಪವನ್ನು 'ಅಲ್ಲಿಯ ಜನರ ಪಾಪಕ್ಕೆ ದೇವರು ವಿಧಿಸಿದ ಶಿಕ್ಷೆ' ಎಂದು ಅಭಿಪ್ರಾಯಿಸಿದ್ದನ್ನು ಒಪ್ಪಲಾಗದು.

ಹೀಗೆ ನಾವು ಒಪ್ಪದ ಕೆಲವು ಅಭಿಪ್ರಾಯಗಳು ಗಾಂಧೀಜಿಯವರಲ್ಲಿದ್ದರೂ ಅವರ ಪ್ರಾಮಾಣಿಕತೆ ಪ್ರಶ್ನಾತೀತವಾದುದು. ವಸಾಹತುಶಾಹಿ ವಿರೋಧೀ ಚಳುವಳಿಯನ್ನು ಕಟ್ಟಿ ಬೆಳೆಸಿದ ಕ್ರಮ ಮತ್ತು ಕ್ರಿಯೆ ಅನನ್ಯವಾದುದು. ನಮ್ಮ ದೇಶದ ಚರಿತ್ರೆಯಲ್ಲಿ ಸಾಮೂಹಿಕ ಕ್ರಿಯಾಶೀಲತೆಗೆ ಕಾರಣವಾದ ಗಾಂಧೀಜಿ ಮಾದರಿ ಮತ್ತೊಮ್ಮೆ ಸಿಗಲಾರದು ಎಂಬಷ್ಟು ಸ್ವಂತಿಕೆಯದು. ಅವರನ್ನು ಕುರಿತು ಚರ್ಚಿಸುವಾಗ ಈ ಅಂಶಗಳನ್ನು ಖಂಡಿತ ಮರೆಯಲಾಗದು.

ಬರಗೂರು ರಾಮಚಂದ್ರಪ್ಪ
ನಂ. ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮುಖ್ಯ ರಸ್ತೆ
ಜೆ. ಪಿ. ನಗರ, ೨ನೇ ಹಂತ, ಬೆಂಗಳೂರು - ೫೬೦ ೦೭೮

# ಮುಂದಿನ ಸಹಸ್ರಮಾನದ ಆಶಾಕಿರಣ

# ಗಾಂಧೀಜಿ

ಎಂ. ವಿ. ಚಕ್ರಪಾಣಿ

''ಯೋಚಿಸತಕ್ಕ ಜನರ ಮೇಲೆ ಗಾಂಧೀಜಿ ಬೀರಿದ ನೈತಿಕ ಪ್ರಭಾವವು ಇಂದು ಕಂಡುಬರುವುದಕ್ಕಿಂತ ಹೆಚ್ಚು ಕಾಲ ನಿಲ್ಲಬಲ್ಲುದು. ಇಂದಿನ ಯುಗ ಒಂದು ಪ್ರಕಾಶವನ್ನೂ ಮುಂದಿನ ಜನಾಂಗಗಳ ದೀಪಸ್ತಂಭವನ್ನೂ ನಮಗೆ ದಯಪಾಲಿಸಿದ್ದಕ್ಕಾಗಿ ಆ ವಿಧಿಗೆ ನಾವು ಕೃತಜ್ಞರಾಗಿದ್ದೇವೆ. ಅದೃಷ್ಟಶಾಲಿಗಳು ನಾವು.''

- ಇವು ಐನ್‌ಸ್ಟೈನರ ಮಾತುಗಳು. ಒಬ್ಬ ಶಕ ಪುರುಷನು ಇನ್ನೊಬ್ಬ ಶಕಪುರುಷನಿಗೆ ಸಲ್ಲಿಸಿದ ಗೌರವ.

ಮಹಾತ್ಮಾ ಗಾಂಧಿ ಮನುಷ್ಯನಾಗಿರಲಿಲ್ಲ, ಒಂದು ಚಳವಳಿಯಾಗಿದ್ದರು. ಒಬ್ಬ ವ್ಯಕ್ತಿಯಾಗಿರಲಿಲ್ಲ, ಒಂದು ಶಕ್ತಿಯಾಗಿದ್ದರು. ಅವರಷ್ಟು ವೈವಿಧ್ಯಮಯ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದ ಇನ್ನೊಂದು ವ್ಯಕ್ತಿ ಭೂಮಿಯ ಮೇಲೆ ಇನ್ನೊಬ್ಬನಿರಲಿಲ್ಲ. ಅವರು ಒಬ್ಬ ಸ್ವಾತಂತ್ರ್ಯ ಹೋರಾಟಗಾರ, ಜನತಂತ್ರವಾದಿ, ಸಮಾಜ ವಿಜ್ಞಾನಿ, ಬೇಸಾಯಗಾರ, ಆರೋಗ್ಯ ಕಾರ್ಯಕರ್ತ, ಪ್ರಕೃತಿ ಚಿಕಿತ್ಸಾ ತಜ್ಞ, ಅರ್ಥ ಶಾಸ್ತ್ರಜ್ಞ, ತಂತ್ರಜ್ಞ, ಪರಿಸರವಾದಿ, ಮಾನವತಾವಾದಿ, ಸಂತ, ಪ್ರವಾದಿ - ಇವೆಲ್ಲವೂ ಆಗಿದ್ದು ಇನ್ನೂ ಹೆಚ್ಚಿನದಾಗಿದ್ದರು.

**ಮಾನವ ಪರಿಸರವಾದದ ಅಗ್ರದೂತ**

ದೇಶೀಯ ಮತ್ತು ಪ್ರಪಂಚಮಟ್ಟದಲ್ಲಿ ಚರ್ಚೆಯಾಗುತ್ತಿರುವ ಯಾವುದೇ ವಿಚಾರವನ್ನು ತೆಗೆದುಕೊಳ್ಳಿ. ಗಾಂಧೀಜಿಯವರ ನುಡಿಗಳು ನಮಗೆ ಮಾರ್ಗದರ್ಶಕವಾಗುತ್ತವೆ. ಅದು ಶ್ರಮ ಸಮಾನತೆ ಇರಲಿ, ಶಿಶು ವಿಚಾರ, ಸ್ತ್ರೀ ವಿಚಾರವಿರಲಿ, ಜನಸಂಖ್ಯಾ ವಿಚಾರವಿರಲಿ, ಆರೋಗ್ಯ ವಿಚಾರವಿರಲಿ, ಪರಿಸರ ವಿಚಾರವಿರಲಿ - ಗಾಂಧೀಜಿಯವರ ನುಡಿಗಳು ನಮ್ಮ ನೆರವಿಗೆ ಧಾವಿಸುತ್ತವೆ. ಶ್ರೀ ಟಿ. ಎಸ್. ಖೊಶೂರವರು ತಮ್ಮ ಪ್ರಸಿದ್ಧ ಗ್ರಂಥ ''ಮಹಾತ್ಮಾಗಾಂಧಿ - ಮಾನವ ಪರಿಸರವಾದದ ಅಗ್ರದೂತ'' ದಲ್ಲಿ ಹೇಳಿರುವಂತೆ ''ಇಂದು ಗಾಂಧೀಜಿಯವರ ಮೌನವು ಅವರ ನುಡಿಗಳಿಗಿಂತಲೂ ಗಟ್ಟಿಯಾಗಿ ಮಾತನಾಡುತ್ತವೆ.'' ಇತ್ತೀಚೆಗೆ ಸಿಯಾಟಲ್‌ನಲ್ಲಿ ಸಮಾವೇಶಗೊಂಡಿದ್ದ ವಿಶ್ವ ವಾಣಿಜ್ಯ ಸಂಘಟನೆಯ ಸಭೆಯಲ್ಲಿ ಮಾತನಾಡುತ್ತ ಮೆಡಲಿನ್ ಆಲ್‌ಬ್ರೈಟ್ ಗಾಂಧೀಜಿಯವರ ಈ ಮಾತುಗಳನ್ನು ನೆನಪಿಸಿಕೊಂಡರು: ''ಸಮಗ್ರತೆಯಾಗಲಿ, ಸಂಶೋಧನೆಗಳಾಗಲಿ ತಮ್ಮಷ್ಟಕ್ಕೆ ತಾವೇ ಪರ್ಯಾಪ್ತವಲ್ಲ. ಜೀವನಕ್ಕೆ ಇವುಗಳಿಗಿಂತ ಹೆಚ್ಚಿನದೇನೋ ಬೇಕಾಗಿರುತ್ತದೆ.'' ಗಾಂಧೀಜಿಯನ್ನು ಉದ್ಧರಿಸಿದ ಈಕೆ ಮಾಡುವುದಂತೂ ಮಾನವ ಹಾನಿಯೇ ಎಂಬುದೊಂದು ವಿಪರ್ಯಾಸ.

ವರ್ಲ್ಡ್ ವಾಚ್ ಇನ್‌ಸ್ಟಿಟ್ಯೂಟಿನ ಅಲನ್ ಡರ್ನಿಂಗ್ ನುಡಿಗಳು ಹೀಗಿವೆ : ''ಸೂಕ್ಷ್ಮವಾದ ಜೀವಗೋಳದಲ್ಲಿ ಮಾನವನ ಅಂತಿಮ ಲಕ್ಷ್ಯವು ಗಾಢವಾದ ಸ್ವನಿಯಂತ್ರಣ ಪ್ರಜ್ಞೆಯನ್ನು ಆಧರಿಸಿರಬೇಕಾಗುತ್ತದೆ. ಈ ಆಧಾರ ಪ್ರಜ್ಞೆಯು, ಬಳಕೆಯನ್ನು ಮಿತಗೊಳಿಸುವ ಹಾಗೂ ಅಭೌತಿಕವಾದ ಸಂಪತ್ತಿಗಾಗಿ ಅರಸುವಿಕೆಯನ್ನು ಲಕ್ಷಣವಾಗಿ ಹೊಂದಿರಬೇಕಾಗುತ್ತದೆ.'' ಈ ಹೇಳಿಕೆಯಲ್ಲಿ ಬರುವ 'ಸ್ವನಿಯಂತ್ರಣ,' 'ಬಳಕೆಯನ್ನು ಮಿತಗೊಳಿಸುವ', 'ಅಭೌತಿಕವಾದ ಸಂಪತ್ತಿಗಾಗಿ ಅರಸುವ' ಕಲ್ಪನೆಗಳು ಗಾಂಧೀಜಿಯವರ ಸಿದ್ಧಾಂತದಿಂದ ಪ್ರಭಾವಿತವಾಗಿರುವುದು ಸ್ಪಷ್ಟ. ಅದೃಷ್ಟವಶಾತ್ ವರ್ಲ್ಡ್ ವಾಚ್ ಇನ್‌ಸ್ಟಿಟ್ಯೂಟಿನ ವಾರ್ಷಿಕ ವರದಿಯನ್ನು ಪ್ರಪಂಚ ದಲ್ಲೆಡೆ ಸರ್ಕಾರಿ ಕಚೇರಿಗಳು, ಶಿಕ್ಷಣ ತಜ್ಞರು ಮತ್ತು



ಪತ್ರಿಕೋದ್ಯಮಿಗಳು ಆಕರವಾಗಿ ಬಳಸುತ್ತಾ ಬಂದಿದ್ದಾರೆ.

ಆಧುನಿಕ 'ಪ್ರಗತಿ'ಯ ಫಲಶ್ರುತಿಗಳಾದ ಬಡತನ, ಭ್ರಷ್ಟಾಚಾರ, ನಿರುದ್ಯೋಗ, ಹಿಂಸೆ, ಪರಿಸರ ಮಾಲಿನ್ಯ, ಜೀವಜಾತಿಯ ವಿನಾಶ, ಹೆಚ್ಚುತ್ತಿರುವ ಉಷ್ಣತೆಗಳನ್ನು ಗಮನಿಸಿದರೆ ಇವೆಲ್ಲ ಗಾಂಧೀಜಿಯವರ ಸಿದ್ಧಾಂತಗಳನ್ನು ಅಲಕ್ಷಿಸಿದುದರ ಪರಿಣಾಮವೆಂದು ತೋರದೆ ಇರದು. ಗಾಂಧೀಜಿಯವರ ಸಿದ್ಧಾಂತಗಳನ್ನು ಕೃತಿಗಿಳಿಸಲು ಕಾಲವೀಗ ಪಕ್ವವಾಗಿದೆ.

ಬೇಕುಗಳ ಬೆನ್ನು ಹತ್ತಿರುವ ಪಾಶ್ಚಾತ್ಯ ಪ್ರಪಂಚವನ್ನು ಗಾಂಧೀಜಿ ಬಹಳ ಹಿಂದೆಯೇ ಎಚ್ಚರಿಸಿದ್ದುಂಟು. - ಹೀಗೆ ಬೇಕುಗಳ ಬೆನ್ನು ಹತ್ತಿರುವ ಪಾಶ್ಚಾತ್ಯ ಪ್ರಪಂಚವು ತಾನು ನಡೆದು ಬಂದ ದಾರಿಯನ್ನು ಪುನರವಲೋಕಿಸುವ ದಿನ ಬಂದೇ ಬರುತ್ತದೆ ಎಂದಿದ್ದರು ಗಾಂಧಿ. ನಿಜವಾದ ನಾಗರಿಕತೆ ಎಂದರೆ ಬೇಕುಗಳನ್ನು ಮಿತಗೊಳಿಸುವ ಸ್ವನಿಯಂತ್ರಣವೇ ವಿನಾ ಬೇಕುಗಳನ್ನು ಅರಸುವ ಹುಚ್ಚೋಟವಲ್ಲ. ಮನುಷ್ಯನ ನಿಜವಾದ ಆನಂದ ಸಂತೃಪ್ತಿಯಲ್ಲಿ ಅಡಗಿದೆ, 'ಸಾಕು'ವಿನಲ್ಲಿ ಅಡಗಿದೆ - ಎಂದಿದ್ದರು ಗಾಂಧಿ.

ಅವರ ಅಭಿಪ್ರಾಯದಂತೆ, ಪರಿಸರವಾದದ ನೂತನ ಘೋಷಣೆಯು ಬಹುಜನರ ಹಿತದ ಕಲ್ಪನೆಯಲ್ಲಿ ಅಡಗಿದೆ. ಕೆಲವೇ ಜನರ, ಕೆಲವೇ ರಾಷ್ಟ್ರಗಳ, ದುರಾಸೆ ಮತ್ತು ಶ್ರೀಮಂತಿಕೆಯು ಅದನ್ನು ಎಂದೂ ತುಂಬಿಕೊಡಲಾರದು. ವ್ಯಷ್ಟಿ ಹಿತದ ಮೂಲಕ ಸಮಷ್ಟಿ ಹಿತವನ್ನು ಸಾಧಿಸಿ, ಸಮಷ್ಟಿ ಹಿತದಿಂದ ಸೃಷ್ಟಿಯ ಹಿತವನ್ನು ಸಾಧಿಸುವುದೇ ನಿಜವಾದ ಪರಿಸರವಾದ. ಸ್ವಹಿತಕ್ಕಾಗಿ ಸೃಷ್ಟಿಯನ್ನು ವಿರೂಪಗೊಳಿಸುವ ಜೀವರಾಶಿಯನ್ನು ಸಂಹಾರದ ಅಂಚಿಗೆ ಒಯ್ಯುವ 'ಸಂಹಾರ ಸಂಸ್ಕೃತಿ' ಪರಿಸರವಾದವಾಗದು ಎಂದು ಗಾಂಧೀಜಿ ಸಾರಿದ್ದರು. ಇದಕ್ಕಾಗಿ ಅವರು ದ್ವೇಷ - ಕಲಹ - ಯುದ್ಧಗಳ ದಾರಿಯನ್ನು ಬಿಟ್ಟು ಪ್ರೀತಿ - ಸಹಕಾರ ಮತ್ತು ಶಾಂತಿಯ ದಾರಿಯನ್ನು ಹಿಡಿದರು.

''ಮಾನವನಿಂದ ಮಾನವನ ಮೇಲೆ ನಡೆಯುವ ಹಲ್ಲೆಯನ್ನು ತಡೆಗಟ್ಟದ ವಿನಾ ಮಾನವನಿಂದ ನಿಸರ್ಗದ ಮೇಲೆ ನಡೆಯುವ ಹಲ್ಲೆಯನ್ನು ತಡೆಗಟ್ಟಬಹುದೆಂದು ನಾವು ನಿರೀಕ್ಷಿಸಲು ಹೇಗೆ ಸಾಧ್ಯ ?'' ಎಂದು ಅವರು ಬರೆದರು.

**ಗಾಢ ಪರಿಸರವಾದ**

ಪ್ರೇಮ ಸಂದೇಶದ ಮೂಲಕ ಮಾನವನ ಮನಸ್ಸಿನ ಮಲಿನತೆಯನ್ನು ತೊಳೆದ ಬಳಿಕ ಪರಿಸರ ಮಲಿನತೆಯ ಪ್ರಶ್ನೆಯನ್ನು ಸುಲಭವಾಗಿ ಬಗೆಹರಿಸಬಹುದೆಂದು ಅವರು ನಂಬಿದ್ದರು. ಪರಿಸರ ಮಲಿನತೆಯ ಸಮಸ್ಯೆಗೆ ಇದೇ ಸೂಕ್ತವಾದ ಪರಿಹಾರವೆಂಬ ದೃಢ ನಂಬಿಕೆ ಅವರದಾಗಿತ್ತು.

*(೧೨ನೇ ಪುಟ ನೋಡಿ)*

# ಸಾರ್ವಜನಿಕ ಸಂಸ್ಥೆ ಮತ್ತು ಶಾಶ್ವತ ನಿಧಿ



*ಗಾಂಧೀಜಿಯವರ ಒಂದು ಅಪರೂಪದ ಚಿತ್ರ*

ನೇಟಾಲ್ ಇಂಡಿಯನ್ ಕಾಂಗ್ರೆಸ್ ಸಂಸ್ಥೆಗಾಗಿ ಒಂದು ಶಾಶ್ವತ ನಿಧಿಯನ್ನು ಸಂಗ್ರಹಿಸಿ, ಅದರದೇ ಆಸ್ತಿಯೊಂದನ್ನು ಕೊಳ್ಳುವುದು ಮತ್ತು ಈ ಆಸ್ತಿಯ ಬಾಡಿಗೆಯನ್ನು ಸಂಸ್ಥೆಯ ಕೆಲಸ ನಿರ್ವಹಿಸಲು ಬಳಸುವುದು ಎಂದು ನಾನು ಆಶಿಸಿದೆ. ಇದು ಸಾರ್ವಜನಿಕ ಸಂಸ್ಥೆಯೊಂದನ್ನು ನಿರ್ವಹಿಸುವ ನನ್ನ ಪ್ರಪ್ರಥಮ ಅನುಭವವಾಗಿತ್ತು. ನನ್ನ ಸಲಹೆಯನ್ನು ನನ್ನ ಸಹ ಕಾರ್ಯಕರ್ತರ ಮುಂದೆ ಇಟ್ಟೆ. ಅವರು ಇದನ್ನು ಸ್ವಾಗತಿಸಿದರು. ಸಂಗ್ರಹಿಸಿದ ನಿಧಿಯಿಂದ ಆಸ್ತಿಯೊಂದನ್ನು ಕೊಂಡು ಅದನ್ನು ಬಾಡಿಗೆಗೆ ಕೊಡಲಾಯ್ತು. ಕಾಂಗ್ರೆಸಿನ ಅಂದಂದಿನ ವೆಚ್ಚ ತೂಗಿಸಲು ಈ ಆದಾಯ ಸಾಕಾಗಿತ್ತು. ಆಸ್ತಿಯ ಹೊಣೆಗಾರಿಕೆಯನ್ನು ಒಂದು ಪ್ರಬಲವಾದ ವಿಶ್ವಸ್ತ ಮಂಡಲಿಗೆ ವಹಿಸಲಾಯ್ತು. ಇದು ಇಂದೂ ನಡೆಯುತ್ತಿದೆ. ಆದರೆ ಈ ಆಸ್ತಿ ಈಗ ವಿಶ್ವಸ್ತ ಮಂಡಲಿಯಲ್ಲಿ ಮನಸ್ತಾಪ, ಜಗಳಕ್ಕೆ ಕಾರಣವಾಗಿದೆ. ಪರಿಣಾಮ, ವಸೂಲಿ ಆದ ಬಾಡಿಗೆ ಈಗ ಕೋರ್ಟಿನಲ್ಲಿ ಜಮಾ ಆಗುತ್ತಿದೆ.

ಈ ದುಃಖಕರ ಪರಿಸ್ಥಿತಿ ನಾನು ದಕ್ಷಿಣ ಆಫ್ರಿಕಾವನ್ನು ಬಿಟ್ಟ ಮೇಲೆ ಆದ ಬೆಳವಣಿಗೆ. ಆದರೆ ಈ ಬೆಳವಣಿಗೆಗೂ ತುಂಬ ಮುಂಚೆಯೇ ಸಾರ್ವಜನಿಕ ಸಂಸ್ಥೆಗಳಿಗೆ ಶಾಶ್ವತ ನಿಧಿ ಕೂಡಿಸುವ ಬಗ್ಗೆ ನನ್ನ ಅಭಿಪ್ರಾಯ ಸಂಪೂರ್ಣ ಬದಲಾಗಿತ್ತು. ಈಗಂತೂ ಅನೇಕ ಸಾರ್ವಜನಿಕ ಸಂಸ್ಥೆಗಳನ್ನು ನಡೆಸಿದ ಅನುಭವದ ಆಧಾರದ ಮೇಲೆ, ಸಾರ್ವಜನಿಕ ಸಂಸ್ಥೆಗಳನ್ನು ಶಾಶ್ವತ ನಿಧಿ ಸಂಗ್ರಹಿಸಿ ನಿರ್ವಹಿಸುವುದು ಒಳ್ಳೆಯದಲ್ಲ ಎಂಬುದೇ ನನ್ನ ನಿಶ್ಚಿತ ಅಭಿಪ್ರಾಯವಾಗಿದೆ. ಶಾಶ್ವತ ನಿಧಿ ಎಂದರೆ ಆ ಸಂಸ್ಥೆಯ ನೈತಿಕ ಪತನಕ್ಕೆ ಬೀಜ ಬಿತ್ತಿದಂತೆಯೇ. ಜನರ ಸದಾಕಾಲದ ಒಪ್ಪಿಗೆ ಪಡೆದು ಅವರಿಂದ ಆಗಾಗ್ಗೆ ಹಣ ತೆಗೆದುಕೊಂಡು ನಡೆಸಿದಾಗಲೇ ಅದು ಸಾರ್ವಜನಿಕ ಸಂಸ್ಥೆ ಎಂದೆನಿಸಿಕೊಳ್ಳುವುದು. ಸಾರ್ವಜನಿಕರ ಬೆಂಬಲವಿಲ್ಲದಂದು, ಅದು ತನ್ನ ಸಾರ್ವಜನಿಕತೆಯನ್ನು ಕಳೆದುಕೊಳ್ಳುತ್ತದೆ. ಶಾಶ್ವತ ನಿಧಿಯಿಂದ ನಡೆಸುವ ಸಂಸ್ಥೆಗಳು ಹಲವಾರು ಸಂದರ್ಭಗಳಲ್ಲಿ ಜನತೆಯ ಅಭಿಪ್ರಾಯವನ್ನು ಧಿಕ್ಕರಿಸುವುದು ಕಂಡುಬರುತ್ತದೆ. ಆದ್ದರಿಂದಲೇ ಜನವಿರೋಧಿ ಕೆಲಸಗಳನ್ನು ಅವು ಅನೇಕ ಸಲ ಕೈಗೊಳ್ಳುತ್ತವೆ. ನಮ್ಮ ನಾಡಿನಲ್ಲಂತೂ ಈ ಪ್ರವೃತ್ತಿಯನ್ನು ನಾವು ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ. ಧಾರ್ಮಿಕ ಸಂಸ್ಥೆಗಳೆಂದು ಹೇಳಿಕೊಳ್ಳುವ ಕೆಲವು ಸಂಸ್ಥೆಗಳು ಹಣದ ಲೆಕ್ಕದ ವಿವರವನ್ನು ನೀಡುವುದನ್ನೇ ನಿಲ್ಲಿಸಿಬಿಟ್ಟಿವೆ. ಅವುಗಳ ವಿಶ್ವಸ್ತ ಮಂಡಳಿಯ ಸದಸ್ಯರು ಅವುಗಳ ಮಾಲಿಕರೇ ಆಗಿಬಿಟ್ಟಿದ್ದಾರೆ. ಆದರ್ಶ ಮಾರ್ಗವೆಂದರೆ, ಪ್ರಕೃತಿಯಲ್ಲಿರುವಂತೆ, ಇಂಥ ಸಂಸ್ಥೆಗಳು ತಮ್ಮನ್ನು ತಾವು ದಿನದಿಂದ ದಿನಕ್ಕೆ ನಿರ್ವಹಿಸಿಕೊಂಡು ಹೋಗುವುದೇ ಸರಿಯಾದ ಮಾರ್ಗವೆಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ಜನತೆಯ ಬೆಂಬಲವನ್ನು ಕಳೆದುಕೊಂಡ ಸಂಸ್ಥೆಗಳು ಮುಂದುವರೆಯುವ ಹಕ್ಕನ್ನು ಕಳೆದುಕೊಂಡಂತೆಯೇ. ವಾರ್ಷಿಕವಾಗಿ ಸದಸ್ಯರಿಂದ ವಸೂಲು ಮಾಡಿದ ಚಂದಾ ಪ್ರಮಾಣ ಒಂದು ರೀತಿಯಲ್ಲಿ ಕಾರ್ಯಕಾರಿ ಸಮಿತಿಯ ಜನಪ್ರಿಯತೆಯ ಮತ್ತು ಪ್ರಾಮಾಣಿಕತೆಯ ಪರೀಕ್ಷೆಯೇ ಸರಿ. ಪ್ರತಿ ಸಂಸ್ಥೆಯೂ ಈ ಪರೀಕ್ಷೆಗೆ ತನ್ನನ್ನು ತಾನು ಒಡ್ಡಿಕೊಳ್ಳಬೇಕೆಂಬುದೇ ನನ್ನ ಅಭಿಮತ. ಹೀಗೆಂದೆನೆಂದು ನನ್ನನ್ನು ತಪ್ಪು ತಿಳಿಯಬೇಡಿ. ಎಷ್ಟೋ ಸಂಸ್ಥೆಗಳಿಗೆ ತಮ್ಮ ಕಾರ್ಯ ನಿರ್ವಹಿಸಲು ಶಾಶ್ವತ ಕಟ್ಟಡದ ಅಗತ್ಯವಿದೆ ಎಂದು ನನಗೆ ಗೊತ್ತು. ಅಂಥವಕ್ಕಲ್ಲಾ ನನ್ನ ಈ ಹೇಳಿಕೆ. ನಾನು ಹೇಳ ಬಯಸಿದ್ದು ಇಷ್ಟೆ: ಅಂದಂದಿನ ಅಗತ್ಯಗಳಿಗೆ ವರ್ಷವರ್ಷವೂ ಸ್ವಯಂ ಪ್ರೇರಿತರಾಗಿ ಸದಸ್ಯರು ಕೊಡುವ ಚಂದಾ ಹಣವನ್ನೇ ಸಾರ್ವಜನಿಕ ಸಂಸ್ಥೆಗಳು ಅವಲಂಬಿಸಬೇಕು.

ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಕಾಲದಲ್ಲಿನ ನನ್ನ ಅನುಭವ ಈ ಹೇಳಿಕೆಗಳಿಗೆ ಪುಷ್ಟಿಕೊಟ್ಟಿವೆ. ಅಲ್ಲಿಯ ಆ ಭವ್ಯ ಚಳವಳಿ, ಸತತ ಆರು ವರ್ಷಗಳ ಕಾಲ ಶಾಶ್ವತ ನಿಧಿಯ ಆಧಾರವಿಲ್ಲದೆಯೇ ನಡೆಯಿತು. ಲಕ್ಷಾಂತರ ರೂಪಾಯಿಯ ಅಗತ್ಯವಿದ್ದರೂ ಇದು ಸಾಧ್ಯವಾಗಿತ್ತು. ನಾಳೆಯ ವೆಚ್ಚ ಹೇಗೆ ತೂಗಿಸುವುದಪ್ಪಾ ಚಂದಾ ಬರದಿದ್ದರೆ ಎಂಬ ಎಷ್ಟೋ ಆತಂಕದ ದಿನಗಳು ಬಂದದ್ದೂ ನಿಜ.

**ಮೋಹನದಾಸ ಕರಮಚಂದ ಗಾಂಧಿ: 'ಆತ್ಮ ಚರಿತ್ರೆ'ಯಿಂದ**
**ಸಂಗ್ರಹ : ಪಾರ್ಥ**

---

*(೧೧ನೇ ಪುಟದಿಂದ*

ಧಾನ್ಯಗಳನ್ನು, ತರಕಾರಿಯನ್ನು, ಹಣ್ಣುಗಳನ್ನು ಬೆಳೆದರಷ್ಟೇ ಆಗಲಿಲ್ಲ , ಅವುಗಳ ಜತೆಯಲ್ಲಿ ಆಧ್ಯಾತ್ಮಿಕ ಮೌಲ್ಯಗಳನ್ನೂ ಬೆಳೆಸಬೇಕೆಂದು ಅವರು ಹೇಳುತ್ತಿದ್ದರು.

ಸುಮಾರು ೬೦ ವರ್ಷಗಳಿಗೂ ಹಿಂದೆ ಗಾಂಧೀಜಿ ಪ್ರತಿಪಾದಿಸಿದ್ದ ವಿಚಾರಗಳಿಂದ ಪ್ರಭಾವಿತರಾದಂತೆ ಕಾಣುವ ವಿಚಾರವಾದಿಗಳ ಗುಂಪೊಂದು ಪಾಶ್ಚಾತ್ಯ ದೇಶಗಳಲ್ಲಿ ರೂಪುಗೊಂಡಿದೆ. ಗಾಢ ಪರಿಸರವಾದಿಗಳೆಂದು ಅವರು ತಮ್ಮನ್ನು ಕರೆದುಕೊಂಡಿದ್ದಾರೆ. ಗಾಢ ಪರಿಸರವಾದವೆಂದರೆ ಏನು, ಎಂಬುದಕ್ಕೆ ಅವರು ಹೀಗೆ ಹೇಳಿಕೊಳ್ಳುತ್ತಾರೆ : ''ಗಾಢ ಪರಿಸರವಾದವೆಂದರೆ ಇನ್ನಷ್ಟು ನಿಕಟವಾಗಿ, ಇನ್ನಷ್ಟು ಗಾಢವಾಗಿ ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳುವುದು.''

ಗಾಂಧಿಜೀಯವರ ಸಮಕಾಲೀನರೂ, ಕಟ್ಟಾ ಅಭಿಮಾನಿಯೂ ಆಗಿದ್ದ ಆಲ್ಬರ್ಟ್ ಐನ್‌ಸ್ಟೈನರ ಈ ಮಾತುಗಳನ್ನು ಗಮನಿಸಿ : ''ಯಾವ ಒಂದು ಯೋಚನಾ ವಿಧಾನವು ಸಮಸ್ಯೆ ಹುಟ್ಟುವುದಕ್ಕೆ ಕಾರಣವಾಯಿತೋ ಅದೇ ಯೋಚನಾ ವಿಧಾನದಿಂದ ಆ ಸಮಸ್ಯೆಗೆ ಪರಿಹಾರ ಸಿಗಲಾರದು.'' ಮಾನವನ ಸ್ವಹಿತಾಸಕ್ತಿ ಮತ್ತು ದುರಾಸೆಗಳು ಇಂದಿನ ಪರಿಸರ ಸಮಸ್ಯೆಗಳಿಗೆ ಕಾರಣವಾಗಿವೆ. ಅದೇ ಸ್ವಹಿತಾಸಕ್ತಿ ಮತ್ತು ದುರಾಸೆಗಳು ಪರಿಸರ ಸಮಸ್ಯೆಗಳಿಗೆ ಪರಿಹಾರ ಒದಗಿಸಲಾರವು. ಯೋಚನಾ ವಿಧಾನವನ್ನು ಬದಲಾಯಿಸುವುದೇ ಸಮಸ್ಯಾ ಪರಿಹಾರಕ್ಕೆ ದಾರಿ. ಗಾಢ ಪರಿಸರವಾದಿಗಳು ಹೇಳುವ 'ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳುವ ಪ್ರಕ್ರಿಯೆಯು' ಯೋಚನಾ ವಿಧಾನವು ಬದಲಾಯಿಸುತ್ತಿರುವುದನ್ನು ಸೂಚಿಸುತ್ತದೆ. ಇದು ನಮ್ಮನ್ನು ಕರೆದುತರುವುದು ಗಾಂಧೀಜಿ ಸಿದ್ಧಾಂತಗಳ ಕಡೆಗೆ. ಪಾಶ್ಚಾತ್ಯ ಪ್ರಪಂಚವು ತಾನು ನಡೆದು ಬಂದ ದಾರಿಯನ್ನು ಪುನರವಲೋಕಿಸುವ ದಿನ ಸಮೀಪಿಸಿತೆಂದು ಅದು ಸೂಚಿಸುತ್ತದೆ. ಇದು ಗಾಂಧಿ ತತ್ವಕ್ಕೆ ಸಿಕ್ಕ ತಾತ್ವಿಕ ವಿಜಯವೇ ಆಗಿದೆ.

ನವ ನಾಗರಿಕತೆಯ ಹುಚ್ಚೋಟದ ಅಂತರಾಳದಲ್ಲಿ ಮಿಡುಕುವ ಸತ್ಯದ ಪಿಸುದನಿ - ಗಾಂಧಿ ! ದೀರ್ಘಕಾಲೀನ ಪ್ರಗತಿಯ ದ್ವಾರ - ಗಾಂಧಿ ! ಮನುಕುಲವು ತನ್ನ ಉಳಿವಿಗೋಸ್ಕರ ಆಶ್ರಯಿಸಬಹುದಾದ ಏಕಮಾತ್ರ ಆಶಾಕಿರಣ - ಗಾಂಧಿ ! ಈ ಲೇಖನದ ಆರಂಭದಲ್ಲಿ ಉಲ್ಲೇಖಿಸಿದ ಐನ್‌ಸ್ಟೈನರ ಹೇಳಿಕೆಯ ಮುಂದಿನ ಭಾಗದೊಂದಿಗೆ ಈ ಲೇಖನವನ್ನು ಮುಗಿಸಬಹುದು :

''ನೈತಿಕ ಅಧಃಪತನದ ಇಂದಿನ ಯುಗದಲ್ಲಿ ಆತನೊಬ್ಬನೇ ನಿಜವಾದ ಮುತ್ಸದ್ದಿ. ರಾಜಕೀಯ ರಂಗದಲ್ಲಿಯೂ ಮಾನವೀಯ ಸಂಬಂಧದ ಪವಿತ್ರತೆಯನ್ನು ಆತ ಎತ್ತಿ ಹಿಡಿದ. ರಕ್ತ ಮಾಂಸಗಳಿಂದ ಕೂಡಿದ ಗಾಂಧಿ ಎಂಬ ವ್ಯಕ್ತಿ ನಮ್ಮ ಹಾಗೆ ಭೂಮಿಯ ಮೇಲೆ ನಡೆದಾಡುತ್ತಿತ್ತೆಂದು ಮುಂದಿನ ಜನಾಂಗಗಳು ನಂಬುವುದು ಕಷ್ಟ !''

**ಎಂ. ವಿ. ಚಕ್ರಪಾಣಿ**
ನಂ. ೧/೧೬೦, ಕುರುದಗಡ್ಡಿ, ಹೌಸಿಂಗ್ ಬೋರ್ಡ್ ಕಾಲನಿ, ಹ. ಬೊ. ಹಳ್ಳಿ - ೫೮೩ ೨೧೨ ಜಿ.ಬಳ್ಳಾರಿ
(ಕೃಪೆ : ಯುವ ಭಾರತಿ)

# ಸ್ವಾತಂತ್ರ್ಯ ಸಂಗ್ರಾಮದಲ್ಲಿ ನನ್ನ ಅನುಭವ

'ಭಾರತ ಬಿಟ್ಟು ತೊಲಗಿ', 'ಮಾಡು ಅಥವಾ ಮಡಿ' ಎಂಬ ವಾಕ್ಕುಗಳು ೧೯೪೨ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಭಾರತವನ್ನು ದಾಸ್ಯ ಶೃಂಖಲೆಗಳಿಂದ ಮುಕ್ತಗೊಳಿಸಲೇಬೇಕೆಂಬ ದೃಢ ಸಂಕಲ್ಪ ತೊಟ್ಟಿದ್ದ ಪೂಜ್ಯ ಮಹಾತ್ಮಾ ಗಾಂಧಿಯವರದು. ಕಾಯಾ - ವಾಚಾ - ಮನಸಾ ಆ ವಾಕ್ಕುಗಳಿಗೆ ಬೆಲೆಕೊಟ್ಟು ಅದನ್ನು ನೆರವೇರಿಸಲು ದೀಕ್ಷೆ ತೊಟ್ಟವರು ಲಕ್ಷಾಂತರ ಸಾಮಾನ್ಯ ಪ್ರಜೆಗಳು. ಅವರಲ್ಲಿ ಪುರುಷರು ಮಾತ್ರವಲ್ಲದೆ ಮಹಿಳೆಯರೂ, ವಿದ್ಯಾರ್ಥಿ - ವಿದ್ಯಾರ್ಥಿನಿಯರೂ ಇದ್ದರು. ಆಗ ಪ್ರೌಢಶಾಲೆಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿ ವೃಂದದಲ್ಲಿ ಅನೇಕರಿಗೆ ಸ್ವಾತಂತ್ರ್ಯ ಸಂಗ್ರಾಮ ನಡೆಯುತ್ತಿದ್ದುದರ ಬಗ್ಗೆ ಪರಿಪೂರ್ಣ ಕಲ್ಪನೆ ಇತ್ತೋ ಇಲ್ಲವೋ ಅನುಮಾನ.

ನಮ್ಮ ತಂದೆ ದಿ|| ಟಿ. ಎಸ್. ಸಂಪತ್ಕುಮಾರನ್ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದಲ್ಲಿ ವಕೀಲಿ ವೃತ್ತಿ ಮಾಡುತ್ತಿದ್ದರು. ಹಳೆಯ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿ ದಿ|| ಕೆ. ಸಿ. ರೆಡ್ಡಿಯವರು ಕೋಲಾರ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ, ನಮ್ಮ ತಂದೆ ಅವರೊಂದಿಗೆ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದರು. ೧೯೩೮ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾದದ್ದು. ಮೈಸೂರು ರಾಜ್ಯದಲ್ಲಿ ಮೊದಲನೆಯ ಕಾಂಗ್ರೆಸ್ ಚಳವಳಿ ಎಂದರೆ ಧ್ವಜ ಸತ್ಯಾಗ್ರಹ. ಶಿವಪುರದಲ್ಲಿ, ನಂತರ ವಿದುರಾಶ್ವತ್ಥದಲ್ಲಿ, ನಡೆದ ಧ್ವಜ ಸತ್ಯಾಗ್ರಹಗಳಲ್ಲಿ ನಮ್ಮ ತಂದೆಯವರು ಪಾತ್ರವಹಿಸಿದ್ದರು. ಅವರು ೧೯೩೮-೪೦ರ ಅವಧಿಯಲ್ಲಿ ಎರಡು ಬಾರಿ ಸೆರೆಮನೆಯ ವಾಸ ಅನುಭವಿಸಿದ್ದರು. ನಮ್ಮ ಮನೆಯಲ್ಲಿನ ಈ ವಾತಾವರಣದಿಂದಾಗಿ ಹಳೆಯ ಕಾಂಗ್ರೆಸ್ ನಾಯಕರಲ್ಲಿ ಅನೇಕರು ದಿವಂಗತರುಗಳಾದ ಟಿ. ಸಿದ್ದಲಿಂಗಯ್ಯ, ಕೆ. ಸಿ. ರೆಡ್ಡಿ, ಕೆ. ಟಿ. ಭಾಷ್ಯಂ, ಪಟ್ಟಾಭಿರಾಮನ್, ಹೆಚ್. ಸಿ. ದಾಸಪ್ಪ ದಂಪತಿಗಳು, ಮೈಸೂರಿನ ಟಿ. ಆರ್. ನರಸಿಂಹ ಅಯ್ಯಂಗಾರ್, ಅವರ ಪತ್ನಿ ಟಿ. ಸುನಂದಮ್ಮ, ಕೆ. ಆರ್. ಮಾಧವರಾವ್ ದಂಪತಿಗಳು, ಹೀಗೆ ಅನೇಕರು ಕಾಂಗ್ರೆಸ್ ಸಂಸ್ಥೆಯನ್ನು ಬಲಗೊಳಿಸಲು, ಸಂಸ್ಥೆಯ ಧ್ಯೇಯಗಳ ಬಗ್ಗೆ ಸಾಮಾನ್ಯ ಪ್ರಜೆಗಳಲ್ಲಿ ಅರಿವು ಮೂಡಿಸುವ ಸಲುವಾಗಿ ಬಹಿರಂಗ ಸಭೆಗಳನ್ನು ಚಿಕ್ಕಬಳ್ಳಾಪುರದಲ್ಲಿ ನಡೆಸುವ ಸಲುವಾಗಿ ನಮ್ಮ ಮನೆಗೆ ಬಂದು ಬಿಡಾರ ಹೂಡುತ್ತಿದ್ದರು. ಅವರುಗಳು ನಮ್ಮ ಮನೆಯಲ್ಲಿ ಸೇರಿದಾಗ ನಡೆಯುತ್ತಿದ್ದ ಸಂಭಾಷಣೆಗಳು ನನ್ನ ಕಿವಿಗಳ ಮೇಲೆ ಬೀಳುತ್ತಿದ್ದುದರಿಂದ ೧೯೪೨ರಲ್ಲಿ ಪ್ರಾರಂಭವಾದ ಅಂತಿಮ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ನನಗೆ ಅರಿವಾಗಿತ್ತು.



೧೯೪೨ರ ಆಗಸ್ಟ್ ತಿಂಗಳು ೯ನೆಯ ದಿನಾಂಕ 'ಭಾರತ ಬಿಟ್ಟು ತೊಲಗಿ' ಚಳವಳಿ ಪ್ರಾರಂಭವಾಯಿತು. ಮಹಾತ್ಮಾ ಗಾಂಧೀಜಿಯವರು ಮತ್ತಿತರ ಹಿರಿಯ ನಾಯಕರುಗಳು ಬಂಧನಕ್ಕೊಳಗಾದರು. ಸೆರೆಯಾಗದೆ ಉಳಿದ ನಾಯಕರ ಪೈಕಿ ಅನೇಕರು ಭೂಗತರಾಗಿ ಚಳವಳಿ ಮುಂದುವರೆಸಿದರು. ನಮ್ಮ ತಂದೆಯವರು ಆಗಸ್ಟ್ ೩ನೇ ವಾರ ಸೆರೆಹಿಡಿಯಲ್ಪಟ್ಟರು.

ವಿದ್ಯಾರ್ಥಿ ವೃಂದವೂ ತನ್ನದೇ ಆದ ರೀತಿಯಲ್ಲಿ ಚಳುವಳಿ ಮುಂದುವರೆಸಿತು. ನಾನು ಆಗ ಚಿಕ್ಕಬಳ್ಳಾಪುರದ ಪ್ರೌಢಶಾಲೆಯಲ್ಲಿ ೫ನೆಯ ಫಾರಂನಲ್ಲಿ (ಹೈಸ್ಕೂಲ್ ಇಂಟರ್ ಮೀಡಿಯೆಟ್ ಎರಡನೆಯ ವರ್ಷ) ವ್ಯಾಸಂಗ ಮಾಡುತ್ತಿದ್ದೆ. ಬೆಂಗಳೂರಿನಲ್ಲಿ ಇಂಟರ್ ಮೀಡಿಯೆಟ್ ಕಾಲೇಜ್, ಸೆಂಟ್ರಲ್ ಕಾಲೇಜ್, ಮಹಾರಾಣಿ ಕಾಲೇಜುಗಳ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದ್ದಾರೆ, ಅಧ್ಯಾಪಕರಲ್ಲಿ ಕೆಲವರು ತಮ್ಮ ಉದ್ಯೋಗಗಳಿಗೇ ರಾಜಿನಾಮೆ ಇತ್ತಿದ್ದಾರೆ, ಮೈಸೂರಿನ ಪ್ರತಿಷ್ಠಿತ ಮಹಾರಾಜಾ ಕಾಲೇಜ್ ವಿದ್ಯಾರ್ಥಿ ವೃಂದದ ಮುಖಂಡತ್ವವನ್ನು ದಿ|| ಎಂ. ವಿ. ಕೃಷ್ಣಪ್ಪ (ನಂತರ ಅವರು ಕೇಂದ್ರ ಸರಕಾರದಲ್ಲಿ ಮಂತ್ರಿಯೂ ಆಗಿದ್ದರು) ಮತ್ತು ಎಚ್. ವೈ. ಶಾರದಾಪ್ರಸಾದ್ ಅವರುಗಳು ವಹಿಸಿದ್ದಾರೆ ಎಂಬ ಸುದ್ದಿ ಅಂದು ಪ್ರಖ್ಯಾತ ದಿನಪತ್ರಿಕೆ ಎಂದು ಖ್ಯಾತಿ ಗಳಿಸಿದ್ದ 'ವಿಶ್ವ ಕರ್ನಾಟಕ' ಪತ್ರಿಕೆ (ದಿ|| ತಿ. ತಾ. ಶರ್ಮರು ಸಂಪಾದಕರು)ಯಲ್ಲಿ ಪ್ರಕಟವಾದೊಡನೆ, ನಮ್ಮ ಶಾಲೆಯಲ್ಲಿ ಓದುತ್ತಿದ್ದ ವಿದ್ಯಾರ್ಥಿ - ವಿದ್ಯಾರ್ಥಿನಿಯರು (ಆಗ ನಮ್ಮ ಊರಲ್ಲಿ ಇದ್ದ ಪ್ರೌಢಶಾಲೆ ಕೋ - ಎಜುಕೇಷನ್ ಪದ್ಧತಿಯದಾಗಿತ್ತು) ತಾವೂ ತರಗತಿಗಳನ್ನು ಬಹಿಷ್ಕರಿಸಬೇಕೆಂದು ತೀರ್ಮಾನಿಸಿದರು. ಹಾಗೆ ಶಾಲೆಗೆ ಹೋಗುವ ವಿದ್ಯಾರ್ಥಿಗಳು ತರಗತಿಗಳಿಗೆ ಹೋಗದಂತೆ ತಡೆಗಟ್ಟಬೇಕೆಂಬ ಹುಮ್ಮಸ್ಸು ಬಂದು, ಪ್ರಾರಂಭವಾಯಿತು ನಮ್ಮ ಕೆಲಸ. ಶಾಲೆಯ ಎದುರಿಗೆ ಗುಂಪುಕೂಡಿ ನಿಂತು ಸ್ವಾತಂತ್ರ್ಯ ಪರವಾದ ಘೋಷಣೆಗಳನ್ನು ಕೂಗುತ್ತಾ ಶಾಲೆಗೆ ಹೋಗಲು ಪ್ರಯತ್ನಿಸುತ್ತಿದ್ದ ವಿದ್ಯಾರ್ಥಿಗಳನ್ನು ತಡೆಯಲಾರಂಭಿಸಿದೆವು.

ಪ್ರೌಢಶಾಲೆಯ ಪಕ್ಕದಲ್ಲೇ ಇದ್ದ ಮಾಧ್ಯಮಿಕ ಶಾಲೆಯ ಬಳಿ ಹೋಗಿ ವಿದ್ಯಾರ್ಥಿಗಳನ್ನು ತರಗತಿಗಳಿಗೆ ಹೋಗದಂತೆ ತಡೆಯುವ ಗುಂಪಿನ ಮುಖಂಡತ್ವವನ್ನು ನಾನು ವಹಿಸಿದ್ದೆ. ಮಾಧ್ಯಮಿಕ ಶಾಲೆಯಲ್ಲಿನ ಶಿಕ್ಷಕರಲ್ಲಿ ಅನೇಕರ ಪರಿಚಯ ನನಗಿತ್ತು. ಆ ಶಾಲೆಯ ಮುಖ್ಯೋಪಾಧ್ಯಾಯರು ನಮ್ಮ ಮನೆಯಲ್ಲಿ ಬಾಡಿಗೆಗೆ ಇದ್ದುದು ಮಾತ್ರವಲ್ಲದೆ, ನಮ್ಮ ತಂದೆಯ ಬಾಲ್ಯದ ಗೆಳೆಯರೂ ಆಗಿದ್ದರು. ನಾನು ಹೋಗಿ ವಿದ್ಯಾರ್ಥಿಗಳನ್ನು ಹೊರಗೆ ಕಳುಹಿಸಿಬಿಡಿ ಎಂದು ಕೇಳಿದೊಡನೆಯೇ ನನ್ನ ಮೇಲಿನ ಪ್ರೀತಿ - ವಿಶ್ವಾಸದಿಂದ ಒಪ್ಪಿಕೊಂಡು ವಿದ್ಯಾರ್ಥಿಗಳನ್ನು ತರಗತಿಗಳಿಂದ ಕಳುಹಿಸಿಬಿಡುತ್ತಾರೆಂದು ನನ್ನ ಭಾವನೆ. ಹೈಸ್ಕೂಲು ವಿದ್ಯಾರ್ಥಿಗಳ ಗುಂಪು ತಮ್ಮ ಶಾಲೆಯ ಬಳಿಗೆ ಬರುತ್ತಿದೆಯೆಂದು ತಿಳಿದೊಡನೆ ಆ ಶಾಲೆಯ ಮುಖ್ಯೋಪಾಧ್ಯಾಯರು ಶಾಲೆಯ ಬಾಗಿಲ ಬಳಿ ನಿಂತು ಯಾರೂ ನನ್ನ ಶಾಲೆಯಲ್ಲಿ ಕಾಲಿಡಲಾಗದು ಎಂದು ಘರ್ಜಿಸಿದರು. (ಪಾಪ ! ಅವರು ತಮ್ಮ ಕರ್ತವ್ಯ ನೆರವೇರಿಸಲೇಬೇಕೆಂಬ ಅರಿವು ನನಗಿರಲಿಲ್ಲ ಆಗ). ಪ್ರೌಢಶಾಲೆಯ ಹಿರಿಯ ವಿದ್ಯಾರ್ಥಿಗಳು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದ ಸೋದರ ಸೋದರಿಯರಿಗೆ 'ಹೊರಗೆ ಬನ್ನಿ' ಎಂದು ಶಾಲೆಯ ಕಿಟಕಿಗಳ ಮೂಲಕ ಕರೆ ನೀಡಿದರು. ಆ ಕರೆ ಮನ್ನಿಸಿ ಅನೇಕರು ಹೊರಬಂದರು. ಹೀಗೆ ಸಾಗಿತು ನಮ್ಮ ಚಳುವಳಿ.

ಶಾಲೆಯ ಎದುರಿಗೆ ಗುಂಪುಗೂಡಿ ವಿದೇಶಿ ವಸ್ತುಗಳ ಬಹಿಷ್ಕಾರಕ್ಕೆ ಕರೆ ನೀಡಿ, ವಿದೇಶಿ ವಸ್ತುಗಳನ್ನು ಹೊಂದಿದ್ದರಿಂದ ಅವುಗಳನ್ನು ತಂದು ಅಗ್ನಿಗೆ ಆಹುತಿ ನೀಡಿದೆವು. ಕರೆ ಮನ್ನಿಸದಿದ್ದ ವಿದ್ಯಾರ್ಥಿಗಳಿಗೆ ಸಾಮಾಜಿಕ ಬಹಿಷ್ಕಾರ ಹಾಕುವುದಾಗಿ ಬೆದರಿಕೆ. ಹೀಗೆ ಹಲವಾರು ದಿವಸ ತರಗತಿಗಳನ್ನು ಬಹಿಷ್ಕರಿಸುವ ಉದ್ಯಮದಲ್ಲಿ ನಾನು ಸ್ವಾತಂತ್ರ್ಯಯೋಧರ ಪುತ್ರಿಯಾಗಿ ಮುಖ್ಯಪಾತ್ರ ವಹಿಸಿದ್ದೆ.

ಬೆಳಗಿನ ಹೊತ್ತು ದೇಶಭಕ್ತಿ ಗೀತೆಗಳನ್ನು ಹಾಡುತ್ತಾ, ಸ್ವಾತಂತ್ರ್ಯ ಪರವಾದ ಘೋಷಣೆಗಳನ್ನು ಮಾಡುತ್ತಾ, ಸರಕಾರಕ್ಕೆ ಹಾಗೂ ಅದರ ಅಧಿಕಾರಿಗಳಿಗೆ ಧಿಕ್ಕಾರದ ಘೋಷಣೆಗಳನ್ನು ಮಾಡುತ್ತಾ ಊರಿನ ಬೀದಿಗಳಲ್ಲಿ ಪ್ರಭಾತ್ ಭೇರಿ ನಡೆಸುತ್ತಿದ್ದೆವು. ಸಂಜೆಯ ವೇಳೆಯಲ್ಲಿ ಹೆಂಡದಂಗಡಿಗಳ ಮುಂದೆ ನಿಂತು ಕುಡಿಯುತ್ತಿದ್ದವರನ್ನು ''ಹೆಂಡ ಕುಡಿಯುವ ದುರಭ್ಯಾಸ ಬಿಡಿ, ಈ ದುರಭ್ಯಾಸದಿಂದ ಹೆಂಡತಿ ಮಕ್ಕಳನ್ನು ಉಪವಾಸ ಕೆಡವುತ್ತಿದ್ದೀರಿ'' ಎಂದು ಮದ್ಯಪಾನದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಅವರಿಗೆ ತಿಳಿಹೇಳುತ್ತಿದ್ದೆವು.

ಸೆಪ್ಟೆಂಬರ್ ತಿಂಗಳಿನ ಮಧ್ಯಭಾಗದಲ್ಲಿ ಚಿಕ್ಕಬಳ್ಳಾಪುರದಲ್ಲಿ ಪ್ಲೇಗ್ ರೋಗ ಹರಡಿ, ಶಾಲೆಗಳಿಗೆ ಒಂದು ತಿಂಗಳ ಅಧಿಕೃತ ರಜೆ ದೊರೆಯಿತು. ಸರಕಾರದ ವಿರುದ್ಧ ಚಳವಳಿಯಲ್ಲಿ ಭಾಗವಹಿಸಿದ್ದೆನೆಂದು ಆ ವರ್ಷದ ಪರೀಕ್ಷೆಯಲ್ಲಿ ನನ್ನನ್ನು ಅನುತ್ತೀರ್ಣಗೊಳಿಸಿತು ಶಾಲೆ. ಒಂದು ವರ್ಷದ ವಿದ್ಯಾಭ್ಯಾಸ ಹಾಳಾಗಿತ್ತಾದರೂ, ಸ್ವಾತಂತ್ರ್ಯ ಸಂಗ್ರಾಮಕ್ಕೆ ನನ್ನ ಅಳಿಲು ಸೇವೆ ಎಂಬ ತೃಪ್ತಿ ನನಗೆ ದೊರೆತಿತ್ತು.

ಟಿ. ಎಸ್. ರುಕ್ಮಾಯಿ
೫, 'ಕೃಪಾ', ೮ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು - ೫೬೦ ೦೨೦



# ಅಗಲಿದ ನಮ್ಮ ನಾಯಕ ಕಾಮ್ರೇಡ್ ಎಂ. ಎಸ್. ಕೃಷ್ಣನ್ ಹೀಗಿದ್ದರು

ಎತ್ತರದ, ಸಾಧಾರಣ ಉಡುಪಿನ ಸದಾ ನಗುವ ಮುಖದ, ಎದುರಾಳಿಯನ್ನು ಅಧೀರಗೊಳಿಸುವ ನಡೆ ನುಡಿಯ, ಮೃದುಸ್ವಭಾವದ ದೃಢ ನಿಶ್ಚಯದ ಸುಸಂಸ್ಕೃತ ವ್ಯಕ್ತಿ, ನಮ್ಮೆಲ್ಲರಿಗೂ ಪ್ರಿಯರಾದ ಕಾಮ್ರೇಡ್ ಎಂ. ಎಸ್. ಕೃಷ್ಣನ್ ಇನ್ನಿಲ್ಲ. ಕರ್ನಾಟಕದ ಶ್ರಮಜೀವಿ ವರ್ಗದ ಏಳಿಗೆಗಾಗಿ ಜೀವನವಿಡೀ ದುಡಿದ ಪ್ರಮುಖ ಟ್ರೇಡ್ ಯೂನಿಯನ್ ನಾಯಕ, ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕ, ರಾಜ್ಯದ ರಾಜಕೀಯ ರಂಗದಲ್ಲಿ ತನ್ನ ವಿಶಿಷ್ಟ ಛಾಪು ಮೂಡಿಸಿದ ರಾಜಕೀಯ ಮುತ್ಸದ್ದಿ ಕಾಮ್ರೇಡ್ ಎಂ. ಎಸ್. ಕೆ. ಇನ್ನು ನೆನಪು ಮಾತ್ರ. ಅವರ ಅಸಂಖ್ಯಾತ ಅನುಯಾಯಿಗಳಿಗೆ, ಸಂಗಾತಿಗಳಿಗೆ, ಮಿತ್ರವೃಂದಕ್ಕೆ, ಪಕ್ಷದ ಹಿತೈಷಿಗಳಿಗೆ, ಕುಟುಂಬ ವರ್ಗದವರಿಗೆ ಅವರ ನಿಧನದಿಂದ ತುಂಬಲಾರದ ನಷ್ಟವಾಗಿದೆ, ಅಪಾರ ದುಃಖವಾಗಿದೆ. ಕರ್ನಾಟಕದಲ್ಲಿ ಟ್ರೇಡ್ ಯೂನಿಯನ್ ಚಳವಳಿಗೆ, ಕಮ್ಯುನಿಸ್ಟ್ ಚಳವಳಿಗೆ ಇತರ ಜನಪರ, ಪ್ರಗತಿಪರ ಚಳವಳಿಗಳಿಗೆ ಅವರು ಸಲ್ಲಿಸಿರುವ ಕಾಣಿಕೆ ಮಹತ್ವಪೂರ್ಣ. ಎಲ್ಲ ಜನಪರ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುತ್ತಿದ್ದ ಅವರು ಎತ್ತಿಹಿಡಿದ ಮೌಲ್ಯಗಳು, ಆದರ್ಶಗಳು, ತತ್ವನಿಷ್ಠೆ, ಶಿಸ್ತು, ಸಂಯಮ ನಮ್ಮೆಲ್ಲರಿಗೆ ಮಾರ್ಗದರ್ಶಿ. ಸಮಾಜವಾದಿ ಸಮಾಜದ ಸ್ಥಾಪನೆಯ ಗುರಿಗಾಗಿ ಅವರು ಶ್ರಮಿಸಿದ ಮಾರ್ಗದಲ್ಲಿ ಅವರಂತೆಯೇ ಹೋರಾಟವನ್ನು ಮುಂದುವರಿಸಿಕೊಂಡು ಹೋಗಲು ಪಣತೊಡುವುದೇ ನಾವು ಅವರಿಗೆ ಸಲ್ಲಿಸುವ ಶ್ರದ್ಧಾಂಜಲಿ.

ಎಂ. ಎಸ್. ಕೆ. ಎಂದೇ ಆತ್ಮೀಯರಾಗಿದ್ದ ಅವರನ್ನು ನಾನು ಮೊದಲು ಭೆಟ್ಟಿಯಾದ್ದು ೧೯೪೪ರ ಪ್ರಾರಂಭದಲ್ಲಿ, ಅವರು ಭೂಗತರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ. ನಾನು ಇನ್ನೂ ನ್ಯಾಷನಲ್ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ವಿದ್ಯಾರ್ಥಿ ಆಗ. ಮಿತ್ರರೊಬ್ಬರ ಮನೆಯಲ್ಲಿದ್ದ ಅವರು ಬೇರೇ ಹೆಸರಿರಿಸಿಕೊಂಡಿದ್ದರು. ಪೊಲೀಸರ ಕಣ್ಣು ತಪ್ಪಿಸಿ, ತಲೆ ಮರೆಸಿಕೊಂಡಿದ್ದು ತಮ್ಮ ಚಟುವಟಿಕೆ ಮುಂದುವರೆಸಿಕೊಂಡು ಹೋಗುತ್ತಿದ್ದರು. ಕಮ್ಯುನಿಸ್ಟರ ವಿಚಾರ ಸ್ವಲ್ಪಮಟ್ಟಿಗೆ ತಿಳಿದಿದ್ದೆ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಭೂಗತರಾಗಿ ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದ ವೀರರ ಕಥೆಗಳನ್ನು ಓದಿದ್ದೆ. ಹಾಗಾಗಿ ನನ್ನಲ್ಲಿ ಒಂದು ಬಗೆಯ ರೊಮ್ಯಾಂಟಿಕ್ ಕಲ್ಪನೆ ಇತ್ತು. ಕೃಷ್ಣನ್ ಆಗ ಕಮ್ಯುನಿಸ್ಟ್ ಪಕ್ಷದ ಜಿಲ್ಲಾ ಕಾರ್ಯದರ್ಶಿ. ಅವರನ್ನು ಭೇಟಿಯಾಗಲು ಅವಕಾಶ ಸಿಕ್ಕಿದ್ದಕ್ಕೆ ನನಗೆ ಎಲ್ಲಿಲ್ಲದ ಉತ್ಸಾಹ. ಅವರಿಗೆ ಚೀಟಿಯೊಂದನ್ನು ತಲುಪಿಸುವುದು ನನ್ನ ಕೆಲಸ. ಅವರೊಂದಿಗಿನ ಮೊದಲ ಭೇಟಿ ಈಗಲೂ ನನ್ನ ನೆನಪಿನಲ್ಲಿ ಹಸುರಾಗಿದೆ. ಅವರ ಸರಳತೆ, ತೋರಿದ ಆತ್ಮೀಯತೆ, ನಗುಮುಖ, ಮೆಲುದನಿಯ ಮಾತು ನನ್ನನ್ನು ಅವಕ್ಕಾಗಿಸಿತು. ಅವರನ್ನು ಎಷ್ಟೋ ದಿನದಿಂದ ನಾನು ಬಲ್ಲೆ ಎನಿಸಿತು. ಭೆಟ್ಟಿಯಾಗಿ ಬಂದ ಮೇಲೆ ಮುಂದೆ ಐವತ್ತಕ್ಕೂ ಹೆಚ್ಚು ಕಾಲ ಅವರ ಸಂಗಾತಿಯಾಗಿ ಪಾರ್ಟಿ ಕೆಲಸ ಕಾರ್ಯಗಳಲ್ಲಿ ತೊಡಗಿದ್ದಾಗಲೂ ನಾನು ಕೃಷ್ಣನ್‌ರಲ್ಲಿ ಅದೇ ಸರಳತೆ, ಆತ್ಮೀಯತೆಯನ್ನು ಕಂಡಿದ್ದೇನೆ. ಅವರನ್ನು ತೀವ್ರವಾಗಿ ಟೀಕಿಸಿದರೂ, ಅವರೊಂದಿಗೆ ವಾದಿಸಿದರೂ ಅವರು ನಗುತ್ತಲೇ ಉತ್ತರ ಕೊಡುತ್ತಿದ್ದರು. ಅವರೆಂದೂ ಕೋಪಿಸಿಕೊಳ್ಳುತ್ತಿರಲಿಲ್ಲ. ಬಿಸಿ ಚರ್ಚೆಯಾಗಿ, ಸ್ವಲ್ಪ ಹೊತ್ತಾದ ಮೇಲೆ ಒಟ್ಟಾಗಿ ಕಾಫಿ ಕುಡಿದು ಪ್ರಶ್ನೆ ಬಗೆಹರಿಸಲು ಏನು ಮಾಡಬೇಕು ಎಂದು ನಿರ್ಧರಿಸಿ ಕೆಲಸದಲ್ಲಿ ತೊಡಗುತ್ತಿದ್ದೆವು.

ಮೊದಲ ಸಲ ಭೇಟಿಯಾದಾಗ ಅವರು ಬಿಳಿ ಷರಟು, ಪಂಚೆಯಲ್ಲಿದ್ದರು. ಯಾವುದೋ ಪುಸ್ತಕ ಓದುತ್ತಿದ್ದರು. ನನ್ನನ್ನು ಬರಮಾಡಿಕೊಂಡು ಕೋಣೆಯ ಬಾಗಿಲು ಮುಚ್ಚಿ ನಾನು ತಂದಿದ್ದ ಸಂದೇಶ ಓದಿಕೊಂಡು ಚೀಟಿ ಹರಿದು ತುಂಡು ಮಾಡಿದರು. ನಂತರ ಸುಮಾರು ಒಂದು ಗಂಟೆ ಕಾಲ ನನಗೆ ಕಮ್ಯುನಿಸ್ಟ್ ಪಾರ್ಟಿಯ ಬಗ್ಗೆ, ಕಮ್ಯುನಿಸ್ಟ್ ಸಿದ್ಧಾಂತದ ಬಗ್ಗೆ ತಿಳಿವಳಿಕೆ ನೀಡಿ ನನ್ನ ಬಗ್ಗೆ ವಿವರಗಳನ್ನು ತಿಳಿದುಕೊಂಡರು. ಪಕ್ಷದ ಶಿಸ್ತಿನ ವಿಚಾರ, ಮುಖ್ಯವಾಗಿ ಭೂಗತರಾಗಿದ್ದವರ ಬಗ್ಗೆ ಅನುಸರಿಸಬೇಕಾದ ನಿಯಮಗಳನ್ನು ಹೇಳಿ ನಾನು ಬೇಗ ಕಮ್ಯುನಿಸ್ಟ್ ಪಾರ್ಟಿ ಸದಸ್ಯನಾಗಬೇಕೆಂದು ಹೇಳಿದರು. ನಾನಾಗ ವಿದ್ಯಾರ್ಥಿ ಫೆಡರೇಷನ್ನಿನ ಸಾಮಾನ್ಯ ಸದಸ್ಯನಾಗಿದ್ದೆ. ಅನಂತರ ಅವರನ್ನು ಆಗಾಗ ಭೇಟಿಯಾಗುತ್ತಿದ್ದೆ, ಹೆಚ್ಚಾಗಿ ರಾತ್ರಿ ವೇಳೆಯಲ್ಲಿ. ದಿನದ ವೇಳೆಯಲ್ಲಿ ಅಪರೂಪ. ಯಾರದಾದರೂ ಮನೆಯಲ್ಲಿ ಕತ್ತಲಾದ ಮೇಲೆ ಹೆಚ್ಚು ಜನ ಸಂಚಾರವಿಲ್ಲದ ಹೆಚ್ಚು ಬೆಳಕಿಲ್ಲದ ರಸ್ತೆ ಮೂಲೆಯಲ್ಲಿ ಭೇಟಿ ನಡೆಯುತ್ತಿತ್ತು. ಕೃಷ್ಣನ್ ನಿಗದಿತ ಸ್ಥಳಕ್ಕೆ ಬೈಸಿಕಲ್ ಮೇಲೆ ಬರುತ್ತಿದ್ದರು. ಮುಖ ಮುಚ್ಚುವಂತೆ ಮಫ್ಲರ್ ಸುತ್ತಿ, ಕೋಟು ಟೋಪಿ ಧರಿಸುತ್ತಿದ್ದರು. ಪೊಲೀಸರ ಕಣ್ಣು ತಪ್ಪಿಸಲು ಈ ದಿರಸು. ನಿಗದಿತ ಸ್ಥಳಕ್ಕೆ ವೇಳೆಗೆ ಸರಿಯಾಗಿ ಹೋಗಿರಬೇಕು. ಸಂಶಯಾಸ್ಪದ ವ್ಯಕ್ತಿಗಳು ಯಾರೂ ಆಸುಪಾಸಿನಲ್ಲಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಬೇಕಾಗಿತ್ತು. ಭೇಟಿಯ ಅವಧಿ ಕಮ್ಮಿ. ವ್ಯವಹಾರವೆಲ್ಲ ಕೆಲವೇ ನಿಮಿಷಗಳಲ್ಲಿ ಮುಗಿಸಿ ಹೊರಡಬೇಕು. ಕೆಲವೊಮ್ಮೆ ಭೇಟಿಯ ನಂತರ ಜೊತೆಯಲ್ಲಿ ಬೇರಾವುದಾದರೂ ಸ್ಥಳಕ್ಕೆ ಹೋಗುತ್ತಿದ್ದುದೂ ಉಂಟು. ಆಗ ಸುರಕ್ಷತೆಗಾಗಿ ಅನುಸರಿಸಬೇಕಾಗುವ ಎಲ್ಲ ನಿಯಮಗಳನ್ನು ಶಿಸ್ತಿನಿಂದ ಚಾಚೂ ತಪ್ಪದೆ ಪಾಲಿಸುತ್ತಿದ್ದೆವು ಎಲ್ಲರೂ.

ಸಾಕಷ್ಟು ದೀರ್ಘಕಾಲ, ಎರಡು ವರ್ಷಕ್ಕೂ ಹೆಚ್ಚು ಕಾಲ ಎಂ. ಎಸ್. ಕೆ. ಭೂಗತರಾಗಿದ್ದರು. ಇತರ ಕಮ್ಯುನಿಸ್ಟರಂತೆಯೇ ಅವರು ಬಿಡುವಿನ ವೇಳೆಯಲ್ಲಿ ಅಧ್ಯಯನದಲ್ಲಿ ತೊಡಗಿರುತ್ತಿದ್ದರು. ಪಾರ್ಟಿ ಕಾರ್ಯಕರ್ತರ, ಕಾರ್ಮಿಕ ಬಂಧುಗಳ ರಹಸ್ಯ ಸಭೆಗಳಲ್ಲಿ ಭಾಗವಹಿಸುತ್ತಿದ್ದ ಅವರು ಪಾರ್ಟಿ ಹಿತೈಷಿಗಳೊಂದಿಗೆ ಸಂಪರ್ಕ ಇರಿಸಿಕೊಳ್ಳುವುದು, ಪಾರ್ಟಿಗೆ ಹಣ ಸಂಗ್ರಹಿಸುವುದು ಹೀಗೆ ಹತ್ತು ಹಲವು ಕೆಲಸಗಳಲ್ಲಿ ತೊಡಗುತ್ತಿದ್ದರು. ಚಿಕ್ಕ ಚಿಕ್ಕ ಕವರುಗಳನ್ನು ಮಾಡಿ ಅದರಲ್ಲಿ ಚೀಟಿ ಇರಿಸಿ ಸಂದೇಶ ಕಳಿಸುವುದು ಕೃಷ್ಣನ್‌ರ ಅಭ್ಯಾಸ. ಅವರು ಅದರಿಂದ ಖುಷಿಪಡುತ್ತಿದ್ದರು. ಎಲ್ಲ ಹೊರಗಿನ

*'ಹೊಸತು' ಪತ್ರಿಕೆ ಪ್ರಾರಂಭವಾಗುವ ಮುನ್ನ ಆಸಕ್ತರ ಸಭೆಯೊಂದನ್ನು ಕರೆಯಲಾಗಿತ್ತು. ನವಕರ್ನಾಟಕ ಪ್ರಕಾಶನದ ನಿರ್ದೇಶಕರಲ್ಲೊಬ್ಬರಾದ ಶ್ರೀ ಎಂ. ಎಸ್. ಕೃಷ್ಣನ್ ಆ ಸಭೆಯಲ್ಲಿ ಹಾಗೂ 'ಹೊಸತು' ಬಿಡುಗಡೆ ಸಮಾರಂಭದಲ್ಲಿ ಭಾಗವಹಿಸಿದ್ದರು. ಅವರ ಅನಾರೋಗ್ಯದಿಂದಾಗಿ ಪತ್ರಿಕೆಯ ಬೆಳವಣಿಗೆಗೆ ನೇರವಾಗಿ ನೆರವು ನೀಡಲು ಸಾಧ್ಯವಾಗದ ಪರಿಸ್ಥಿತಿಗಾಗಿ ಅವರಿಗೆ ಬೇಸರವಿದ್ದಿತು. ಪತ್ರಿಕೆಯ ಬಹುಮುಖ ಆಸಕ್ತಿಯನ್ನು ಪ್ರತಿ ತಿಂಗಳೂ ಗಮನಿಸುತ್ತಾ ಬಂದಿದ್ದ ಕಾಮ್ರೇಡ್ ಕೃಷ್ಣನ್ ಸೆಪ್ಟೆಂಬರ್ ೫ರಂದು ಕೊನೆಯುಸಿರೆಳೆದರು. ಅವರಿಗೆ ಗೌರವ ಸಲ್ಲಿಸುತ್ತಾ ಕೃಷ್ಣನ್ ಅವರ ಜೀವನ ಹಾಗೂ ಪರಿಶ್ರಮದ ಸ್ಥೂಲ ಪರಿಚಯ ಮಾಡಿಕೊಡಲು 'ಹೊಸತು' ಶ್ರೀ ಸೀಯಾರ್ಕೆ ಯವರನ್ನು ಕೇಳಿಕೊಂಡಿತು. ಶ್ರೀಯುತರು ಕೃಷ್ಣನ್ ಅವರೊಡನೆ ಐದು ದಶಕಗಳ ಕಾಲ ಸಂಪರ್ಕವಿರಿಸಿಕೊಂಡವರು, ಸಹಭಾಗಿಯಾಗಿ- ಸಂಗಾತಿಯಾಗಿ ಕೆಲಸ ಮಾಡಿರುವವರು.*

**ಸೀಯಾರ್ಕೆ**

ಚಲನವಲನಗಳೂ ಕತ್ತಲಾದ ಮೇಲೆ. ಪೊಲೀಸರ ಕೈಗೆ ಸಿಕ್ಕಿ ಬೀಳುವ ಅಪಾಯವಿದ್ದರೂ ಮಾಡಬೇಕಾದ ಕೆಲಸವನ್ನೆಲ್ಲ ಮಾಡುತ್ತಿದ್ದೆವು. ಅದರಲ್ಲಿ ಒಂದು ರೀತಿಯ ಥ್ರಿಲ್ ಇರುತ್ತಿತ್ತು. ಶಿಸ್ತು ಪರಿಪಾಲನೆ ಆಗ ಅಗ್ರಸ್ಥಾನದಲ್ಲಿ ಇದ್ದುದರಿಂದ ಸಾಕಷ್ಟು ಚಟುವಟಿಕೆಗಳು ನಡೆಯುತ್ತಿದ್ದುವು.

ತುಂಬಿದ ಶ್ರೀಮಂತ ಕುಟುಂಬದಲ್ಲಿ ೧೯೨೪ರ ಜನವರಿ ೬ರಂದು ಜನಿಸಿದ ಕೃಷ್ಣನ್‌ರ ಶಾಲಾ ಶಿಕ್ಷಣವೆಲ್ಲ ಬೆಂಗಳೂರಿನಲ್ಲೆ. ಅವರ ತಂದೆ ಹಳೆಯ ಮೈಸೂರು ಸಂಸ್ಥಾನದಲ್ಲಿ ಚೀಫ್ ಇಂಜಿನಿಯರ್ ಆಗಿದ್ದವರು. ತಾಯಿ ಆಗಿನ ಕಾಲದಲ್ಲೇ ಪದವೀಧರೆ. ಉತ್ತಮ ವಿದ್ಯಾರ್ಥಿಯಾಗಿದ್ದ ಅವರು ಇಂಟರ್ ಮುಗಿದ ಮೇಲೆ ಬಿ. ಎಸ್‌ಸಿ. ಓದಲು ಮದರಾಸಿನ ಲಯೊಲಾ ಕಾಲೇಜು ಸೇರಿದರು. ಅದು ಎರಡನೇ ಮಹಾಯುದ್ಧ ಪ್ರಾರಂಭವಾಗಿದ್ದ ಕಾಲ. ಎರಡು ವರ್ಷ ಮದರಾಸಿನ ವಾಸ್ತವ್ಯ ವಿದ್ಯಾರ್ಥಿ ಎಂ. ಎಸ್. ಕೆ. ಜೀವನದಲ್ಲಿ ಒಂದು ತಿರುಗು ಬಿಂದು. ಸ್ವಾತಂತ್ರ್ಯ ಹೋರಾಟದಲ್ಲಿ ವಿದ್ಯಾರ್ಥಿಗಳು, ಯುವಜನರು ಭಾಗವಹಿಸಲು ಮುಂದೆ ಬರುತ್ತಿದ್ದ ಕಾಲ ಅದು. ಕಾಲೇಜಿನ ಎಲ್ಲ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ಅವರು ಕಮ್ಯುನಿಸ್ಟರ ಸಂಪರ್ಕಕ್ಕೆ ಬಂದದ್ದು, ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಆಕರ್ಷಿತರಾದ್ದು ಆಗಲೆ. ಆಗ ಮದರಾಸಿನ ವಿದ್ಯಾರ್ಥಿ ಸಮೂಹದಲ್ಲಿ ಕ್ರಿಯಾಶೀಲರಾಗಿ ಕೆಲಸ ಮಾಡುತ್ತಿದ್ದ ಮದರಾಸು ವಿದ್ಯಾರ್ಥಿಗಳ ಸಂಘಟನೆಯ (ಎಂ. ಎಸ್.) ಸದಸ್ಯರಾದರು ಅವರು. ಈ ಅವಧಿಯಲ್ಲಿ ಅವರು ಲಭ್ಯವಿದ್ದ ಮಾರ್ಕ್ಸ್‌ವಾದಿ ಸಾಹಿತ್ಯವನ್ನು ಅಧ್ಯಯನ ಮಾಡಿದರು. ಚರ್ಚಾಗೋಷ್ಠಿಗಳಲ್ಲಿ ಪಾಲ್ಗೊಂಡರು. ಬಿ. ಎಸ್‌ಸಿ. ಮುಗಿಸಿ ಬೆಂಗಳೂರಿಗೆ ವಾಪಸು ಬಂದ ಕೃಷ್ಣನ್ ಇಂಜಿನಿಯರಿಂಗ್ ಕಾಲೇಜು ಸೇರಿದರು. ವಿದ್ಯಾರ್ಥಿ ಚಳುವಳಿಯಲ್ಲಿ ವಿಶ್ವವಿದ್ಯಾಲಯದ ಯೂನಿಯನ್ ಚಟುವಟಿಕೆಗಳಲ್ಲಿ ಅವರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಬೆಂಗಳೂರು ಬಸವನಗುಡಿಯಲ್ಲಿದ್ದ ತಮ್ಮ ಮನೆಯಲ್ಲಿ ಅವರು ಪ್ರತಿವಾರ ಮಿತ್ರರು ಮತ್ತು ಸಹಚಿಂತಕರನ್ನು ಸೇರಿಸಿ ವಿಚಾರಮಂಥನ ಮಾಡುತ್ತಿದ್ದರು. ಮಾರ್ಕ್ಸ್‌ವಾದದ ಅಧ್ಯಯನ ನಡೆಸುತ್ತಿದ್ದರು. ಆ ದಿನಗಳಲ್ಲಿ ಕಮ್ಯುನಿಸ್ಟ್ ವಿರೋಧ ತೀವ್ರವಾಗಿತ್ತು. ಕಾಂಗ್ರೆಸ್ಸನ್ನು ಬೆಂಬಲಿಸುತ್ತಿದ್ದ ವಿದ್ಯಾರ್ಥಿಗಳನ್ನು ಸೇರಿಸಿ ಆಗ ಸಂಘಟನೆಯೊಂದು ಅಸ್ತಿತ್ವಕ್ಕೆ ಬಂದಿತು. ಎಂ.ಎಸ್. ಕೆ. ಮತ್ತು ಅವರ ಮಿತ್ರರು ಪುರೋಗಾಮಿ ವಿಚಾರದ ವಿದ್ಯಾರ್ಥಿಗಳನ್ನು ಸೇರಿಸಿ ವಿದ್ಯಾರ್ಥಿ ಫೆಡರೇಷನ್ ಸಂಸ್ಥೆ ಸ್ಥಾಪಿಸಿ ವಿದ್ಯಾರ್ಥಿ ಚಳವಳಿಗೆ ಹೊಸ ರೂಪ ನೀಡಿದರು. ಎಂ. ಸಿ. ನರಸಿಂಹನ್, ವೈ. ಆರ್. ಸತ್ಯನಾರಾಯಣ, ಎಸ್. ಸೂರ್ಯನಾರಾಯಣರಾವ್, ಬಿ. ಕೆ. ನರಸಿಂಹ ಮೂರ್ತಿ ಮೊದಲಾದವರು ವಿದ್ಯಾರ್ಥಿ ಫೆಡರೇಷನ್ನಿನ ಮಂಡಳದಲ್ಲಿದ್ದರು. ವಿದ್ಯಾರ್ಥಿ ಫೆಡರೇಷನ್ ಸಾಕಷ್ಟು ವಿದ್ಯಾರ್ಥಿಗಳ ಬೆಂಬಲ ಪಡೆದುಕೊಂಡು ವಿದ್ಯಾರ್ಥಿಗಳ ಪ್ರಾತಿನಿಧಿಕ ಸಂಸ್ಥೆಯಾಗಿತ್ತು. ವಿದ್ಯಾರ್ಥಿಗಳ ಬೇಡಿಕೆಗಳಿಗಾಗಿ ಹೋರಾಟ ನಡೆಸುವುದಲ್ಲದೆ, ಈ ಸಂಘಟನೆ ಚರ್ಚಾಗೋಷ್ಠಿಗಳನ್ನು, ವಿಚಾರಸಂಕಿರಣಗಳನ್ನು ಏರ್ಪಡಿಸುತ್ತಿತ್ತು. ಬಡ ವಿದ್ಯಾರ್ಥಿಗಳಿಗೆ ನೆರವಾಗಲು ವಿದ್ಯಾರ್ಥಿ ಫೆಡರೇಷನ್ ಆಶ್ರಯದಲ್ಲಿ ಎಂ. ಎಸ್. ಕೆ. ಸ್ಟೂಡೆಂಟ್ಸ್ ಏಯ್ಡ್ ಸೊಸೈಟಿಯನ್ನು ಸಂಘಟಿಸುವುದರಲ್ಲಿ ಯಶಸ್ವಿಯಾದರು. ಈ ಸಂಸ್ಥೆಯು ಶೇಷಾದ್ರಿಪುರದ ಲಿಂಕ್ ರಸ್ತೆಯಲ್ಲಿ ಉಚಿತ ಹಾಸ್ಟೆಲೊಂದನ್ನು ನಡೆಸುತ್ತಿತ್ತು. ಬಡವಿದ್ಯಾರ್ಥಿಗಳಿಗೆ ಕಾಲೇಜು ಫೀ ಕಟ್ಟಲು, ಪರೀಕ್ಷೆಗೆ ಹಣ ಕಟ್ಟಲು ನೆರವೀಯುತ್ತಿತ್ತು. ಸಂಸ್ಥೆಗೆ ಹಣ ಕೂಡಿಸುವುದರಲ್ಲಿ ಕೃಷ್ಣನ್‌ರ ಪಾತ್ರ ಮುಖ್ಯವಾಗಿತ್ತು. ಈ ಸಂಸ್ಥೆ ಸಾಕಷ್ಟು ಕಾಲ ಅಸ್ತಿತ್ವದಲ್ಲಿತ್ತು. ವಿದ್ಯಾರ್ಥಿ ಫೆಡರೇಷನ್ ಕಚೇರಿ ಅವಿನ್ಯೂ ರಸ್ತೆಯಲ್ಲಿತ್ತು.

ಇಂಜಿನಿಯರಿಂಗ್ ಶಿಕ್ಷಣ ಮುಗಿಯುವ ಹೊತ್ತಿಗಾಗಲೇ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾಗಿದ್ದ ಎಂ.ಎಸ್.ಕೆ. ವಿದ್ಯಾರ್ಥಿಗಳ ಮಧ್ಯೆ ತಮ್ಮ ಕೆಲಸ ಮುಂದುವರೆಸುತ್ತಿದ್ದರೂ ಅವರ ಒಲವು ಇದ್ದುದು ಕಾರ್ಮಿಕರನ್ನು ಸಂಘಟಿಸುವುದರಲ್ಲಿ. ಬೆಂಗಳೂರಿನಲ್ಲಿ ಹತ್ತಿ ಗಿರಣಿ ಕಾರ್ಮಿಕರ ಸಂಘಟನೆ ಆಗಲೇ ಪ್ರಬಲವಾಗಿತ್ತು. ಆದ್ದರಿಂದ ಕೃಷ್ಣನ್ ಅಸಂಘಟಿತ ಕಾರ್ಮಿಕರ ಸಂಘಟನೆಯ ಕಾರ್ಯದಲ್ಲಿ ತೊಡಗಿದರು. ಪಾರ್ಟಿಯ ಪೂರ್ಣ ಕಾಲದ ಸದಸ್ಯರಾಗಿದ್ದ ಕೃಷ್ಣನ್ ಚರ್ಮ ಹದ ಮಾಡುವ ಟ್ಯಾನರಿ ಕೆಲಸಗಾರರು, ವಸಂತಪುರದಲ್ಲಿದ್ದ ಕೃಷ್ಣ ವೀವಿಂಗ್ ಮಿಲ್ಸ್ ಕೆಲಸಗಾರರು, ಹೋಟೆಲ್ ಮತ್ತು ಮುನಿಸಿಪಲ್ ಕಾರ್ಮಿಕರು, ಐಟಿಸಿ ಕಾರ್ಮಿಕರು, ಹೀಗೆ ನಾನಾ ಕಾರ್ಮಿಕ ಸಂಘಟನೆಗಳ ಸ್ಥಾಪನೆಯಲ್ಲಿ ಇತರ ಸಂಗಾತಿಗಳ ಜೊತೆ ಪಾಲ್ಗೊಂಡಿದ್ದರು, ಪದಾಧಿಕಾರಿಗಳಾಗಿದ್ದರು.

ಸ್ವಾತಂತ್ರ್ಯಾನಂತರ ೧೯೪೮ರಲ್ಲಿ ದೇಶಾದ್ಯಂತ ಕಮ್ಯುನಿಸ್ಟರ ಮೇಲೆ ಕಾಂಗ್ರೆಸ್ ಸರಕಾರ ದಾಳಿ ಪ್ರಾರಂಭಿಸಿದಾಗ ಎಂ. ಎಸ್. ಕೆ. ಭೂಗತರಾಗಿ ತಮ್ಮ ಚಟುವಟಿಕೆ ಮುಂದುವರೆಸಿದರು. ಅವರು ಆ ವೇಳೆಗಾಗಲೆ ಪಾರ್ಟಿಯ ಜಿಲ್ಲಾ ಸಮಿತಿಯ ಕಾರ್ಯದರ್ಶಿ. ಎನ್. ಎಲ್. ಉಪಾಧ್ಯಾಯ ಪ್ರಾಂತ ಸಮಿತಿಯ ಕಾರ್ಯದರ್ಶಿ. ಕಮ್ಯುನಿಸ್ಟ್ ಪಾರ್ಟಿ ಸೇರಿಕೊಂಡವರಿಗೆ ಅಂದಿನ ದಿನಗಳಲ್ಲಿ ಮನೆಯಲ್ಲಿ ಒತ್ತಾಸೆ ದೊರಕುತ್ತಿದ್ದುದು ಕಮ್ಮಿ. ಕೃಷ್ಣನ್ ವಿದ್ಯಾರ್ಥಿಯಾಗಿದ್ದಾಗಲೇ ತಂದೆ ತೀರಿಕೊಂಡಿದ್ದರು. ಅವರ ತಾಯಿ ಕೃಷ್ಣನ್‌ಗೆ ಎಲ್ಲ ರೀತಿಯ ಬೆಂಬಲವನ್ನೂ ನೀಡುತ್ತಿದ್ದರು. ಅವರ ಮನೆಯಲ್ಲಿ ಯಾವಾಗಲೂ ಇಬ್ಬರು ಮೂವರಿಗೆ ಊಟ ಸಿದ್ಧವಾಗಿರುತ್ತಿತ್ತು. ಎಂ. ಸಿ. ನರಸಿಂಹನ್, ಕೆ. ಎಲ್. ಗೋಪಾಲಕೃಷ್ಣರಾವ್, ನಾನು ಹಾಗೂ ಇತರ ಗೆಳೆಯರು ಅವರ ಮನೆಯಲ್ಲಿ ಕೃಷ್ಣನ್ ಜೊತೆ ಎಷ್ಟೋ ಸಲ ಊಟ ಮಾಡಿದ್ದೇವೆ. ಭೂಗತ ದಿನಗಳಲ್ಲಿ ಪಾರ್ಟಿ ಸಭೆಗಳು ಊರಾಚೆ ನಡೆಯುತ್ತಿದ್ದವು. ಬೆಳಕು ಹರಿಯುವ ಮುನ್ನವೇ ನಾವುಗಳೆಲ್ಲ ಸೈಕಲ್ ಮೇಲೋ, ನಡೆದೋ ನಗರ ಮುನಿಸಿಪಾಲಿಟಿ ಮಿತಿ ದಾಟಿರಬೇಕು. ಅಲ್ಲಿಂದ ನಿಗದಿತ ಸ್ಥಳಕ್ಕೆ ಪ್ರಯಾಣ. ಬೆಂಗಳೂರಿನ ಹೊರವಲಯದಲ್ಲಿದ್ದ ಸರ್ವೆ ತೋಪು, ದೊಡ್ಡ ಮರದ ನೆರಳೇ ಸಭೆಗೆ ಸ್ಥಳ. ಕುಡಿಯಲು ನೀರು ಇರುವ ಜಾಗ ಅರಸುವುದು ಮುಖ್ಯ. ಇಂಥ ಸಭೆಗಳಿಗೆ ಒಂದು ದಿನ ಮುಂಚೆಯೇ ಕೃಷ್ಣನ್‌ರ ಮನೆಯಿಂದ ಊಟ ತಿಂಡಿ ಸಿದ್ಧವಾಗಿರುತ್ತಿತ್ತು. ಹಾಗೇ ಇತರ ಕೆಲವು ಹಿತೈಷಿಗಳೂ ಕೂಡ ಊಟ ತಿಂಡಿಯ ವ್ಯವಸ್ಥೆ ಮಾಡುತ್ತಿದ್ದರು. ಅದನ್ನು ಹೊರಗಿದ್ದ ನಾವುಗಳು ಯಾರಾದರೂ ಒಯ್ಯುತ್ತಿದ್ದೆವು. ಸಭೆ ಸಾಮಾನ್ಯವಾಗಿ ಕ್ರಾಂತಿಗೀತೆಯಿಂದ ಪ್ರಾರಂಭವಾಗುತ್ತಿತ್ತು. ಕೃಷ್ಣನ್ ಚೆನ್ನಾಗಿ ಹಾಡುತ್ತಿದ್ದರು. - ಏರಲಿ ಹಾರಲಿ ಕೆಂಬಾವುಟ, ಕಟ್ಟುವೆವು ನಾವು ಹೊಸ ಸಮಾಜವ, ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್ ಹಾಡು ಮೊದಲಾದುವನ್ನು ಹಾಡುತ್ತಿದ್ದುದು ಈಗಲೂ ನೆನಪಿನಲ್ಲಿದೆ ನನಗೆ.



*ಜನಪರ ಹೋರಾಟಗಳಲ್ಲಿ ಎಂ.ಎಸ್.ಕೃಷ್ಣನ್*

ಐವತ್ತರ ದಶಕದ ಪ್ರಾರಂಭದಲ್ಲಿ ಜೈಲಿನಲ್ಲಿದ್ದ ಕಮ್ಯುನಿಸ್ಟರ ಬಿಡುಗಡೆಯಾಗಿ ವಾರಂಟುಗಳು ರದ್ದಾದ ಮೇಲೆ ಪಾರ್ಟಿ ಚಟುವಟಿಕೆಗಳು ಮತ್ತೆ ಬಹಿರಂಗವಾಗಿ ಪ್ರಾರಂಭವಾಯಿತು. ಆ ವೇಳೆಗೆ ನಾನು ಮತ್ತು ಕೆ. ಎಲ್. ಗೋಪಾಲಕೃಷ್ಣರಾವ್ ಪಾರ್ಟಿಯ ಪೂರ್ಣಕಾಲದ ಕಾರ್ಯಕರ್ತರಾಗಿದ್ದೆವು. ನಗರದ ಸುಲ್ತಾನಪೇಟೆಯಲ್ಲಿ ಪಾರ್ಟಿ ಕಚೇರಿ. ಆಫೀಸಿನ ಕಸ ಗುಡಿಸಿ, ದೂಳು ಹೊಡೆಯುವುದರಿಂದ ಎಲ್ಲ ಕೆಲಸಗಳನ್ನು ನಾವುಗಳೇ

ಮಾಡುತ್ತಿದ್ದೆವು. ಕಾರ್ಯದರ್ಶಿ ಮತ್ತು ಕಾರ್ಯಕರ್ತರ ಮಧ್ಯೆ ಯಾವ ಭೇದವೂ ಇರುತ್ತಿರಲಿಲ್ಲ. ಭೂಗತದ ಕಾಲದಲ್ಲಿ ಪಾರ್ಟಿ ಸಂಘಟಿಸಿದ್ದ ಟ್ರೇಡ್ ಯೂನಿಯನ್‌ಗಳೆಲ್ಲ ನಿಷ್ಕ್ರಿಯವಾಗಿದ್ದುವು ಇಲ್ಲವೆ ಬೇರೆಯವರ ಪಾಲಾಗಿದ್ದವು. ಕೃಷ್ಣನ್ ಹೊರಗೆ ಬಂದವರೆ ಟ್ರೇಡ್ ಯೂನಿಯನ್ ಸಂಘಟನೆಯ ಕಾರ್ಯದಲ್ಲಿ ತೊಡಗಿದರು. ಆಗ ಸ್ವಲ್ಪಮಟ್ಟಿಗೆ ಸಕ್ರಿಯವಾಗಿದ್ದುದು ಟ್ಯಾನರಿ ಕೆಲಸಗಾರರ ಸಂಘ ಮಾತ್ರ. ಯಶವಂತಪುರದ ಪ್ಲೈವುಡ್ ಕಾರ್ಖಾನೆ ಕೆಲಸಗಾರರ ಸಂಘ ಅವರು ಸ್ಥಾಪಿಸಿದ ಮೊದಲ ಸಂಘಟನೆ. ಈ ಸಂಘ ನಡೆಸಿದ ಹೋರಾಟವೂ ಮೊದಲನೆಯದು ಆಗ. ಅನಂತರ ಕೃಷ್ಣನ್ ಸಂಘಟಿಸಿದ, ನಾಯಕತ್ವ ವಹಿಸಿದ ಟ್ರೇಡ್ ಯೂನಿಯನ್‌ಗಳು ಹಲವಾರು. ಹೆಚ್. ಎಮ್. ಟಿ., ಬಿ. ಇ. ಎಲ್., ಮೈಕೋ, ಜಿ. ಕೆ. ಡಬ್ಲ್ಯೂ., ಮೈಸೂರು ಸಿಮೆಂಟ್ಸ್ ಅವುಗಳಲ್ಲಿ ಕೆಲವು. ಬೆಂಗಳೂರಿನ ಕೇಂದ್ರ ಕೈಗಾರಿಕೋದ್ಯಮಗಳ ಸಂಘಗಳ ಜಂಟಿ ಕಾರ್ಯಾಚರಣೆಯಲ್ಲಿ ಕೃಷ್ಣನ್ ವಹಿಸಿದ ಪಾತ್ರ ಗಮನಾರ್ಹ. ಅವರು ದೇಶದಲ್ಲೇ ಪ್ರಥಮ ಬಾರಿಗೆ ಆಡಳಿತೆಯಲ್ಲಿ ಕಾರ್ಮಿಕರನ್ನು ಪಾಲ್ಗೊಳ್ಳುವಂತೆ ಮಾಡಲು ಹೆಚ್. ಎಂ. ಟಿ.ಯಲ್ಲಿ ಪ್ರಾಯೋಗಿಕವಾಗಿ ಪ್ರಾರಂಭಿಸಲಾದ ಕಾರ್ಮಿಕ ಪ್ರತಿನಿಧಿ ಗಳನ್ನೊಳಗೊಂಡಿದ್ದ ಜಾಯಿಂಟ್ ಕೌನ್ಸಿಲ್ ಆಫ್ ಮ್ಯಾನೇಜ್‌ಮೆಂಟಿನ ಉಪಾಧ್ಯಕ್ಷರಾಗಿದ್ದರು.

ರಾಜ್ಯದ ಟ್ರೇಡ್ ಯೂನಿಯನ್ ಚಳವಳಿಯಲ್ಲಿ ವಿಶಿಷ್ಟವಾದ ಸ್ಥಾನ ಗಳಿಸಿದ್ದ ಎಂ. ಎಸ್. ಕೆ. ಕರ್ನಾಟಕ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಪದಾಧಿಕಾರಿ ಗಳಲ್ಲೊಬ್ಬರಾಗಿದ್ದರು. ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಗ್ರೆಸ್ಸಿನ ಅಧ್ಯಕ್ಷರಾಗಿದ್ದರು, ವಿಶ್ವ ಕಾರ್ಮಿಕ ಮಹಾಮಂಡಲದ (WFTU) ಉಪಾಧ್ಯಕ್ಷರಾಗಿದ್ದರು. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನೌಕರರ ಸಂಘದ ಸ್ಥಾಪಕ ಅಧ್ಯಕ್ಷರು, ಯಶವಂತಪುರದಲ್ಲಿ ಸ್ಥಾಪನೆಯಾಗಿರುವ ಆದರ್ಶ ಹೈಸ್ಕೂಲಿನ ಸ್ಥಾಪಕ ಅಧ್ಯಕ್ಷರು. ಹೀಗೆ ಅವರು ಹತ್ತು ಹಲವು ಸಂಸ್ಥೆಗಳಲ್ಲಿದ್ದರು.

ಇಷ್ಟೆಲ್ಲಾ ಟ್ರೇಡ್ ಯೂನಿಯನ್ ಚಟುವಟಿಕೆಯಲ್ಲಿ ತೊಡಗಿದ್ದರೂ ಕೃಷ್ಣನ್ ಪಾರ್ಟಿ ಸಂಘಟನೆಯನ್ನು ಎಂದೂ ಕಡೆಗಣಿಸಿದವರಲ್ಲ. ಪಾರ್ಟಿಯ ಬೆಂಗಳೂರು ಜಿಲ್ಲಾ ಸಮಿತಿಯ ಕಾರ್ಯದರ್ಶಿಯಾಗಿದ್ದ ಅವರು ಪ್ರಾಂತ ಸಮಿತಿಯ ಕಾರ್ಯದಲ್ಲೂ ನಿರತರಾಗಿದ್ದರು. ಐವತ್ತರ ದಶಕದ ನಡುವಿನಲ್ಲಿ ಪ್ರಾಂತ ಸಮಿತಿಯ ಸದಸ್ಯರಾದರು. ೧೯೬೪ರಲ್ಲಿ ಪ್ರಾಂತ ಸಮಿತಿಯ ಕಾರ್ಯದರ್ಶಿಯಾದ ಅವರು ಪಾರ್ಟಿ ಕೇಂದ್ರ ಸೆಕ್ರೆಟಾರಿಯಟ್‌ನ ಸದಸ್ಯರೂ ಆಗಿದ್ದರು. ೧೯೫೨ರಲ್ಲಿ 'ಜನಶಕ್ತಿ' ಪತ್ರಿಕೆ ಪುನರಾರಂಭವಾದಾಗ ಅವರು ಅದರ ಸಂಪಾದಕ ಮಂಡಲಿಯಲ್ಲಿದ್ದರು. ಇದಕ್ಕೆ ಮುನ್ನ ಎಂ.ಎಸ್.ಕೆ. ತಮ್ಮ ಪಾಲಿಗೆ ಬಂದಿದ್ದ ಆಸ್ತಿಯನ್ನು ಮಾರಿ ಬಂದ ಹಣದಲ್ಲಿ ಒಂದು ಭಾಗವನ್ನು ಪಾರ್ಟಿಗೆ ನೀಡಿದರು, ಪಾರ್ಟಿ ಉಪಯೋಗಕ್ಕಾಗಿ ಮುದ್ರಣಾಲಯ ವೊಂದನ್ನು ಖರೀದಿಸಿದರು. ಸುಲ್ತಾನಪೇಟೆಯಲ್ಲಿ ಸ್ಥಾಪನೆಯಾದ ಜನಶಕ್ತಿ ಮುದ್ರಣಾಲಯ ಈಗ ನವಕರ್ನಾಟಕ ಸಂಸ್ಥೆಯಲ್ಲಿ ಲೀನಗೊಂಡಿದೆ. ೧೯೬೨ರಲ್ಲಿ ಸ್ಥಾಪಿತವಾದ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕ ನಿರ್ದೇಶಕರಲ್ಲೊಬ್ಬರಾದ ಎಂ.ಎಸ್.ಕೆ. ಕೊನೆಯವರೆಗೂ ನಿರ್ದೇಶಕರಾಗಿದ್ದರು. ಐವತ್ತರ ದಶಕದಲ್ಲಿ ಪಾರ್ಟಿ ಸಾಹಿತ್ಯವನ್ನು, ಮುಖ್ಯವಾಗಿ ಪಾರ್ಟಿ ಪತ್ರಿಕೆಗಳನ್ನು ಮಾರಾಟ ಮಾಡುವುದರಲ್ಲಿ ಪಾರ್ಟಿ ಸದಸ್ಯರು ಭಾಗವಹಿಸುತ್ತಿದ್ದರು. ಕೃಷ್ಣನ್, ಉಪಾಧ್ಯಾಯ, ನರಸಿಂಹನ್, ನಾನು, ರಣನವರೆ ಮೊದಲಾದವರೆಲ್ಲ ಪ್ರತಿ ವಾರ ಚಿಕ್ಕಪೇಟೆ ರಸ್ತೆಯಲ್ಲಿ 'ಜನಶಕ್ತಿ', 'ನ್ಯೂಏಜ್' ಮಾರಾಟ ಮಾಡುತ್ತಿದ್ದೆವು. ಪಾರ್ಟಿಗೆ ನಿಧಿ ಸಂಗ್ರಹಿಸುವುದರಲ್ಲಿ ಹೊಸಬರನ್ನು ತರುವುದರಲ್ಲಿ ಕೃಷ್ಣನ್ ಮುಖ್ಯ ಪಾತ್ರ ವಹಿಸುತ್ತಿದ್ದರು. ಬೆಂಗಳೂರಿನ ವೈಯಾಲಿಕಾವಲ್ ಬಡಾವಣೆಯಲ್ಲಿರುವ ಪಾರ್ಟಿ ಪ್ರಾಂತ ಸಮಿತಿ ಕಚೇರಿ ಕಟ್ಟಡ 'ಘಾಟೆ ಭವನ'ದ ನಿರ್ಮಾಣದಲ್ಲಿ ಕೃಷ್ಣನ್ ವಹಿಸಿದ ಪಾತ್ರ ಗಣನೀಯವಾದ್ದು. ಬೆಳಗ್ಗೆ ಏಳರಿಂದ ನಡುರಾತ್ರಿಯವರೆಗೆ ಅವಿಶ್ರಾಂತವಾಗಿ ದುಡಿಯುತ್ತಿದ್ದ ಕೃಷ್ಣನ್‌ಗೆ ಟ್ರೇಡ್ ಯೂನಿಯನ್ ಚಟುವಟಿಕೆಗೆ ನೀಡುತ್ತಿದ್ದಷ್ಟು ಕಾಲವನ್ನು ಪಾರ್ಟಿ ಚಟುವಟಿಕೆಗೆ ನೀಡಲಾಗಲಿಲ್ಲ ಎನ್ನುವುದು ಸತ್ಯ. ಆದರೂ ಅವರು ನಡೆಸಿದ ಪ್ರಯತ್ನ ಪ್ರಾಮಾಣಿಕವಾದ್ದು. ಪಾರ್ಟಿ ಕಾರ್ಯಕರ್ತರೊಂದಿಗೆ ದೈನಂದಿನ ಸಂಪರ್ಕದಲ್ಲಿ ಅವರು ಆತ್ಮೀಯರಾಗಿರುತ್ತಿದ್ದರು. ಕಾರ್ಯಕರ್ತರ ವೈಯಕ್ತಿಕ ತೊಂದರೆಗಳನ್ನು ವಿಚಾರ ಮಾಡುತ್ತಿದ್ದರು. ಪಾರ್ಟಿ ಸಭೆಗಳಲ್ಲಿ ನಡೆಯುವ ಚರ್ಚೆಗಳಲ್ಲಿ ಬಿಚ್ಚು ಮನಸ್ಸಿನಿಂದ ತಮ್ಮ ಅಭಿಪ್ರಾಯ ವ್ಯಕ್ತಗೊಳಿಸುತ್ತಿದ್ದರು.

ಎಂ. ಎಸ್. ಕೆ. ಚುನಾವಣಾ ಪ್ರಚಾರ ಕಾರ್ಯದಲ್ಲಿ ಮುಂಚೂಣಿಯಲ್ಲಿದ್ದರೂ ಸ್ವತಃ ಚುನಾವಣೆಯಲ್ಲಿ ಅಭ್ಯರ್ಥಿಯಾಗಿ ಪಾಲ್ಗೊಂಡಿರಲಿಲ್ಲ. ೧೯೬೨ರಲ್ಲಿ ಅವರು ಮೊದಲ ಬಾರಿಗೆ ಪಾರ್ಲಿಮೆಂಟ್ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಅನಂತರ ೧೯೬೭ರಲ್ಲಿ, ೧೯೭೨ರಲ್ಲಿ, ೧೯೭೮ರಲ್ಲಿ ಹೀಗೆ ಮೂರು ಬಾರಿ ಶಾಸನಸಭೆಗೆ ಆಯ್ಕೆಯಾಗಿದ್ದರು. ಶಾಸಕರಾಗಿ ಅವರು ನಿರ್ವಹಿಸಿದ ಕಾರ್ಯ ಸ್ಮರಣೀಯ. ಜನಪರವಾದ ಪ್ರಶ್ನೆಗಳನ್ನು ಶಾಸನಸಭೆಯಲ್ಲಿ ಮಂಡಿಸುತ್ತಿದ್ದ ಕೃಷ್ಣನ್ ಜನಪ್ರಿಯ ಶಾಸಕರಾಗಿದ್ದರು. ಶಾಸನಸಭೆಯಲ್ಲಿ ಪ್ರಸ್ತಾಪಕ್ಕೆ ಬರುವ ವಿಷಯಗಳನ್ನು ಅಧ್ಯಯನ ಮಾಡಿ ಮಾತನಾಡುತ್ತಿದ್ದ ಅವರು ಸರಕಾರವನ್ನು ಪೇಚಿಗೆ ಸಿಕ್ಕಿಸುತ್ತಿದ್ದರು. ಒಳ್ಳೆಯ ಶಾಸಕರೆಂದು ಹೆಸರುಗಳಿಸಿದ್ದರು.

ವ್ಯಕ್ತಿಯಾಗಿ ಎಂ. ಎಸ್. ಕೃಷ್ಣನ್ ಸಹೃದಯಿ, ಸಂಭಾವಿತ, ಸನ್ಮಿತ್ರ. ಎಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲೂ ಅವರು ತಮ್ಮ ಸಂಯಮವನ್ನು ಕಳೆದುಕೊಳ್ಳುತ್ತಿರಲಿಲ್ಲ. ಭೂಗತರಾಗಿದ್ದಾಗ ಅವರು ಒಳ್ಳೆಯ ಬಾಣಸಿಗ. ಲಿಂಬೂರಸಂ ಅವರ ಸ್ಪೆಷಾಲಿಟಿ. ಒಳ್ಳೆಯ ಊಟ ಸಿಕ್ಕಾಗ ತೃಪ್ತಿಪಡುತ್ತಿದ್ದರು. ಹಾಗೆಂದರೆ ಅವರು ಎಂದೂ ಊಟಕ್ಕೆ ಪ್ರಾಮುಖ್ಯತೆ ನೀಡಿದವರಲ್ಲ. ಎಷ್ಟೋ ವೇಳೆ ನಾವುಗಳು ಇದ್ದ ಸ್ವಲ್ಪ ಊಟವನ್ನೇ ಹಂಚಿಕೊಳ್ಳುತ್ತಿದ್ದೆವು. ಊಟ ಸಿಗದ ದಿನಗಳೂ ಇರುತ್ತಿದ್ದವು. ಕೃಷ್ಣನ್ ಮೊದಲ ಬಾರಿ ಕಾರಾಗೃಹ ವಾಸ ಅನುಭವಿಸಿದ್ದು ೧೯೬೨ರ ಕೊನೆಯಲ್ಲಿ, ಅದುವರೆಗೆ ಆರೆಸ್ಟಾದದ್ದೆ ಇಲ್ಲ. ಅವರು ಉಪಾಧ್ಯಾಯ, ನರಸಿಂಹನ್, ನಾನು, ರಣನವರೆ, ಕಕ್ಕಿಲ್ಲಾಯ, ವೈ. ಆರ್. ಸತ್ಯ ಮೊದಲೇ ಬಂಧಿತರಾಗಿದ್ದೆವು. ಕೃಷ್ಣನ್ ದೆಹಲಿಗೆ ಹೋಗಿದ್ದುದರಿಂದ ಬಂದ ಮೇಲೆ ಬಂಧನಕ್ಕೊಳಗಾದರು. ಬಂಧನದಲ್ಲಿದ್ದಾಗ ನಾವೇ ಅಡುಗೆ ಮಾಡಿಕೊಳ್ಳುತ್ತಿದ್ದೆವು. ಆಗ ಕೃಷ್ಣನ್ ಅಡುಗೆ ರುಚಿ ನಮಗೆ. ಆರು ತಿಂಗಳಿಗೂ ಹೆಚ್ಚು ಸಮಯ ಅವರು ಇದ್ದು ನಂತರ ಬಿಡುಗಡೆಯಾದರು. ಆಗ ಅವರಿಗೆ ವಿವಾಹವಾಗಿತ್ತು. ಅವರು ವಿವಾಹವಾದ್ದು ಕೂಡ ಸ್ವಲ್ಪ ವಯಸ್ಸಾದ ಮೇಲೇ, ಅದೂ ಅವರ ತಾಯಿಯ ಒತ್ತಾಯದಿಂದ. ಆ ದಿನಗಳಲ್ಲಿ ನಮ್ಮ ಹೆಚ್ಚಿನವರು ಮದುವೆ ಆದ್ದು ವಯಸ್ಸಾದ ಮೇಲೆಯೆ. ಪಾರ್ಟಿಯ ಹಿತೈಷಿಗಳೊಂದಿಗೆ, ಮಿತ್ರರೊಂದಿಗೆ ಸಂಪರ್ಕವಿರಿಸಿ ಕೊಳ್ಳುತ್ತಿದ್ದ ಕೃಷ್ಣನ್ ಯಾವುದೇ ವಿಷಯದಲ್ಲೂ ಆತುರದ ನಿರ್ಣಯ ಕೈಗೊಳ್ಳುತ್ತಿರಲಿಲ್ಲ. ಕೈಗಾರಿಕೋದ್ಯಮಗಳ ಮಾಲೀಕರೊಂದಿಗೆ ನಡೆಸುತ್ತಿದ್ದ ಸಂಧಾನಗಳಲ್ಲಿ ದೃಢವಾದ ನಿಲುವು ತಳೆದರೂ ಕೂಡ ಅವರು ತಮ್ಮ ತಾಳ್ಮೆ ಕಳೆದುಕೊಳ್ಳುತ್ತಿರಲಿಕ್ಕಿಲ್ಲ. ಅವರ ಈ ಗುಣವನ್ನು ಅವರ ರಾಜಕೀಯ ವಿರೋಧಿಗಳೂ ಮೆಚ್ಚಿಕೊಳ್ಳುತ್ತಿದ್ದರು. ಕೃಷ್ಣನ್‌ನಂಥವರ ಜತೆ ದೀರ್ಘಕಾಲ ಕೆಲಸ ಮಾಡಲು ಅವಕಾಶ ದೊರೆತದ್ದು ಅವಿಸ್ಮರಣೀಯವಾದ ಅನುಭವ.

OO



# ತಿಮ್ಮನ ಗಾಡಿ

**ಎಂ. ಗೋಪಾಲಕೃಷ್ಣ ಅಡಿಗ**

*ನವ್ಯ ಕವಿಯಾಗಿ ವಿಶೇಷ ಸಾಧನೆಗಳನ್ನು ತಮ್ಮದಾಗಿಸಿಕೊಂಡ ದಿ|| ಎಂ. ಗೋಪಾಲಕೃಷ್ಣ ಅಡಿಗರು ಕತೆಗಳನ್ನೂ ಬರೆದಿದ್ದರೆಂದು ಜ್ಞಾಪಿಸಿಕೊಳ್ಳುವುದು ವಿರಳ. ೧೯೫೦ರ ಸೆಪ್ಟೆಂಬರ್ ೧೧ರ ಸಂಚಿಕೆಯಲ್ಲಿ ಮೊಟ್ಟಮೊದಲಿಗೆ ಈ ಕತೆಯನ್ನು ಪ್ರಕಟಿಸಲಾಗಿದ್ದುದು 'ಚಿತ್ರಗುಪ್ತ' ವಾರಪತ್ರಿಕೆಯಲ್ಲಿ. ಐವತ್ತು ವರ್ಷಗಳ ಹಿಂದಿನ ಈ ಕತೆಯನ್ನು ಇಂದು ಓದಿದಾಗ ಮಾನ್ಯ ಅಡಿಗರ ಚಿಂತನೆ, ಶೈಲಿ, ಜೀವನಮೌಲ್ಯ, ಇತ್ಯಾದಿಗಳ ಬಗ್ಗೆ ವಿವಿಧ ಅನಿಸಿಕೆಗಳು ಸಹಜವಾಗಿಯೇ ಮೂಡುತ್ತವೆ. ಈ ಕತೆಯನ್ನು ಪ್ರಕಟಣೆಗೆ 'ಹೊಸತು'ಗೆ ದೊರಕಿಸಿಕೊಟ್ಟವರು ಡಾ|| ವಿಜಯಾ.*

ತಿಮ್ಮ ನಮಗೆಲ್ಲ ಚೆನ್ನಾಗಿ ಗೊತ್ತು. ಹಳ್ಳಿಯಲ್ಲಿ ಒಬ್ಬರು ಇನ್ನೊಬ್ಬರಿಗೆ ಮನೆಮಂದಿಯ ಹಾಗೇ ಇರುತ್ತಾರೆ. ಅಲ್ಲಿ ಗುಟ್ಟಾಗಿ ಬಾಳಬೇಕೆಂದರೂ ಸಾಧ್ಯವಿಲ್ಲ. ಒಬ್ಬರ ಸುಖವೋ ದುಃಖವೋ ಆಚಾರವೋ ಇನ್ನೊಬ್ಬರ ಕಣ್ಣಿಗೆ ಬಿದ್ದೇ ಬೀಳುತ್ತದೆ ; ಹತ್ತು ನಾಲಿಗೆಗಳ ಮೇಲೆ ಆಡಿಯೇ ತೀರುತ್ತದೆ. ನಮ್ಮದು ಬಡವರ ಊರು. ಒಂದು ಕ್ಷಣವಾದರೂ ಅಲ್ಲಿ ಯಾರೂ ಸೋಮಾರಿಗಳಾಗಿ ಉಳಿಯುವಂತಿಲ್ಲ. ಹಗಲೆಲ್ಲ ಬೆವರು ಸುರಿಸಿಯೇ ರಟ್ಟೆ ನೋಯಿಸಿಕೊಂಡೇ ಊಟ ಮಾಡಬೇಕು. ಊಟ ಮಾಡಿಯೂ ಹೊಟ್ಟೆ ತುಂಬದೆ ಇರಬೇಕು. ಇಲ್ಲವೆ, ರಾಗಿ ಅಂಬಲಿಯನ್ನೋ ತೆಳ್ಳನೆಯ ಗಂಜಿಯನ್ನೋ, ಹೊಟ್ಟೆಗೆ ಸುರಿದುಕೊಂಡು ಹೊಟ್ಟೆ ತುಂಬಿತು ಎಂದು ಸಮಾಧಾನ ತಂದುಕೊಳ್ಳಬೇಕು. ಇಂಥ ಊರಿನಲ್ಲಿ ಸೋಮಾರಿತನಕ್ಕಿಂತ ಬೇರೆ ಅಪರಾಧವಿಲ್ಲ. ಕೆಲಸ ಮಾಡದೆ ಸುಮ್ಮನೆ ಕೂತಿರುವವನನ್ನು ಕಂಡರೆ ಎಲ್ಲರಿಗೂ ತಿರಸ್ಕಾರ. ಅದರಲ್ಲೂ ತಿಮ್ಮನಂಥ ಧಾಂಡಿಗ ಮನೆಯ ಗಳ ಎಣಿಸುತ್ತಾ ಕುಳಿತರೆ ಅವನ ಪಾಡು ಯಾರಿಗೂ ಬೇಡ. ಊರಲ್ಲಿ ಇಂಥ ಸೋಮಾರಿ ರಾಜ ಹೇಗೆ ಹುಟ್ಟಿ ಬಂದ ಎಂದು ನನಗೆ ಯಾವಾಗಲೂ ಆಶ್ಚರ್ಯವೇ.

ತಿಮ್ಮನೋ ಬಡವರಲ್ಲಿ ಬಡವ. ಈ ದಿನ ಅನ್ನವಿದ್ದರೆ ನಾಳೆ ಇಲ್ಲ. ಭವಿಷ್ಯ ನಿಜವಾಗಿಯೂ ದೇವರ ಕೈಯಲ್ಲೇ. ಅವನಪ್ಪನ ಕಾಲದಿಂದ ಬಂದ ಆ ಹುಲ್ಲು ಜೋಪಡಿಯೊಂದಲ್ಲದೆ ತನ್ನದು ಎಂಬುದು ಅವನಿಗೆ ಇನ್ನೇನೂ ಇಲ್ಲ. ಮನೆ ಮುಂದಿನ ಗದ್ದೆಗಳೆರಡನ್ನೂ ತಲತಲಾಂತರದಿಂದಲೂ ಅವನ ಮನೆಯವರೇ ಸಾಗುವಳಿ ಮಾಡುತ್ತಾ ಬಂದಿದ್ದಾರೆ. ಆದರೆ ಅವು ಅವನದಲ್ಲ. ಆ ಊರಲ್ಲಿ ಎರಡು ಹೊತ್ತು ಊಟ ಮಾಡುವ ಜಾತಿಗೆ ಸೇರಿದ ಕೃಷ್ಣಪ್ಪನವರದ್ದು. ಅದಕ್ಕೆ ಅವನು ಪ್ರತಿವರ್ಷವೂ ಗೇಣಿ ಸಲ್ಲಿಸಬೇಕು. ಬಿಡು ಎಂದರೆ ಬಿಟ್ಟು ಹೊರಡಬೇಕು. ತಿಮ್ಮನಂತೆಯೇ ತಿಮ್ಮನ ಮನೆ. ಸೂರೆಲ್ಲ ಹರಿದು ತೂತು ತೂತಾಗಿ ಮಳೆಗಾಲದಲ್ಲಿ ಮನೆಯೊಳಗೇ ಹೊಳೆ ಹರಿಯುತ್ತದೆ. ನಾಲ್ಕಡಿ ಎತ್ತರದ ಮಣ್ಣು ಗೋಡೆ ಅಲ್ಲಲ್ಲಿ ಕುಸಿದುಬಿದ್ದಿದೆ. ಮನೆ ಹಿಂದಿನ ಹಿತ್ತಿಲಲ್ಲಿದ್ದ ಎರಡು ತೆಂಗಿನ ಮರಗಳು ನೀರಿಲ್ಲದೆ ಆರೈಕೆ ಇಲ್ಲದೆ ಒಣಗಿ ಬಾಡಿ ಆಕಾಶದ ಕಡೆ ಕಣ್ಣು ತಿರುಗಿಸಿ ನಿಂತಿವೆ. ಒಂದು ಕಾಲದಲ್ಲಿ ಹಸುರು ಹಸುರಾಗಿ ಕಾಣುತ್ತಿದ್ದ ಬಾಳೆ ತೋಟ ಈಗ ಇಲ್ಲ. ಏನೇನೋ ಕಾಡುಗಳು ಸುತ್ತಲೂ ಹುಲುಸಾಗಿ ಬೆಳೆದು ನಿಂತಿವೆ. ಕುಡಿಯುವ ನೀರಿನ ಬಾವಿಯಲ್ಲಿ ಅರ್ಧದಷ್ಟು ಕಸ ತುಂಬಿ ಕೊಳೆಯುತ್ತಿದೆ.

ತಿಮ್ಮನೋ ಏಕಾಂಗಿ, ಹೇಳುವವರಿಲ್ಲ. ಅವನಪ್ಪ ಭರಮ ತೀರಿಹೋದಾಗ ತಿಮ್ಮನಿಗೆ ಹದಿನೈದೋ ಹದಿನಾರೋ ವರ್ಷಗಳಾಗಿದ್ದಿರಬೇಕು. ಈಗ ಅವನ ವಯಸ್ಸು ಇಪ್ಪತ್ತೈದು. ಇಷ್ಟು ದಿನ ಅವನು ಹೇಗೆ ಬದುಕಿದನೋ ದೇವರೇ ಬಲ್ಲ. ಬಹಳ ವರ್ಷಗಳ ಕಾಲ ಅವನ ಜೊತೆಗೇ ಇದ್ದು ಪಾಡು ಪಟ್ಟ ಅವನ ಅಕ್ಕ ಸುಬ್ಬಿ ಈ ಸೋಮಾರಿಯನ್ನು ಕಟ್ಟಿಕೊಂಡು ಬಾಳಲಾಗದೆ ಈಗ ಬೇರೆ ಹೋಗಿ ಇದ್ದಾಳೆ. ಇವನು ಸೋಮಾರಿಗಳಲ್ಲಿ ಆರಿಸಿ ತೆಗೆದವನು. ಹೂಟಿಯ ಕಾಲದಲ್ಲಿ, ನೆಟ್ಟಿಯ ಕಾಲದಲ್ಲಿ, ಕೊಯ್ಲಿನ ಕಾಲದಲ್ಲಿ ಊರಿನಲ್ಲಿ ಕೆಲಸಗಾರರ ಅಗತ್ಯ ಹೆಚ್ಚುತ್ತದೆ. ಆಗ ಯಾರಾದರೂ ಬಂದು 'ತಿಮ್ಮ ಒಂದು ತಿಂಗಳು ಕೆಲಸಕ್ಕೆ ಬರುತ್ತೀಯೇನೋ ?' ಎಂದರೆ ತಿಮ್ಮ ಒಲ್ಲೆ ಎನ್ನುವುದಿಲ್ಲ. 'ನೋಡಿ ಸ್ವಾಮೀ, ದಿನಾ ಬರೋದಕ್ಕೆ ಆಗುವುದಿಲ್ಲ. ಒಂದು ನಾಲ್ಕು ದಿನದ ಮಟ್ಟಿಗೆ ಆದರೆ ನೋಡುವ, ಬರುತ್ತೇನೆ - ಬೇಕಾದರೆ-' ಎನ್ನುತ್ತಾನೆ. ನಾಲ್ಕು ದಿನ ಆದ ಮೇಲೆ ಅಲ್ಲಿಗೆ ಮುಗಿಯಿತು. ಮತ್ತೆ ಮನೆ ಬಿಟ್ಟು ಕದಲುವ ಇಷ್ಟ ಅವನಿಗಿಲ್ಲ. ಆಮೇಲೂ ಹೋಗಿ ಪೀಡಿಸಿದರೆ 'ಬಂದೆ, ಹೋಗಿ' ಎನ್ನುತ್ತಾನೆ - ಬರುವುದಿಲ್ಲ. ಅಥವಾ ನೀವು ಪಟ್ಟು ಹಿಡಿದು ಅವನನ್ನು ಮನೆಯಿಂದ ಹೊರಡಿಸಿದಿರಿ ಅನ್ನಿ; ನಿಮ್ಮ ಹಿಂದೆಯೇ ಬರುತ್ತಾ ''ಹಾದಿ''ಯಂಚಿನಲ್ಲೇ ಹಳ್ಳದ ಮೂಲೆಯಲ್ಲೇ ಮಾಯವಾಗುತ್ತಾನೆ ಅಥವಾ ಗದ್ದೆಗೆ ಹೋಗಿ ಉಳಲು ತೊಡಗಿದನೆಂದರೂ ಸ್ವಲ್ಪ ಹೊತ್ತು ಬಿಟ್ಟು ನೀವು ಅಲ್ಲಿಗೆ ಹೋದರೆ ಎತ್ತುಗಳು ಗದ್ದೆಯ ನಡುವೆ ನಿಂತು ಹಾಯಾಗಿ ಮೆಲುಕಾಡುವುದು ಮಾತ್ರ ಕಾಣಿಸುತ್ತದೆ. ತಿಮ್ಮ ಕಾಣಿಸುವುದಿಲ್ಲ. ಕೆಲಸ ಮಾಡುವಾಗಲೂ ಅಷ್ಟೆ, ಒಂದು ದಿನ ಸರಿಯಾಗಿ ಕೆಲಸ ಮಾಡಿದರೆ ನಾಲ್ಕು ಜನ ಮಾಡುವಷ್ಟು ಕೆಲಸ ಮಾಡಬಲ್ಲ, ಮಾಡುತ್ತಾನೆ. ಇಲ್ಲದೆ ಹೋದರೆ ಎತ್ತುಗಳನ್ನು ನಿಲ್ಲಿಸಿಬಿಟ್ಟು ಗದ್ದೆಯಂಚಿನಲ್ಲಿ ಕುಳಿತು ಕನಸು ಕಾಣುತ್ತಾನೆ.

ಹಗಲುಗನಸು ಕಾಣುತ್ತಾ ಕೊರಡಿನಂತೆ ಬಿದ್ದುಕೊಂಡಿರುವುದೇ ತಿಮ್ಮನ ಮುಖ್ಯ ಉದ್ಯೋಗ, ಜನ್ಮಕ್ಕಂಟಿದ ಅಭ್ಯಾಸ. ಹಳ್ಳಿಗರ ದೃಷ್ಟಿಯಲ್ಲಿ ಅದೇ ಅವನ ದುರಭ್ಯಾಸ. ಅವನು ಹಾಗೆ ಕನಸು ಕಾಣುತ್ತಾ ಕುಳಿತಾಗ ಯಾರು ಏನೆಂದರೂ ಅವನಿಗೆ ಕೇಳಿಸದು. ಮನೆ ಮುಂದೆ ಜಗುಲಿಯಲ್ಲಿ ಕುಳಿತೋ, ಇಲ್ಲ ಹಾಯಾಗಿ ಒರಗಿಕೊಂಡೋ ಮೈಮರೆಯುತ್ತಾನೆ. ನೋಡಿದವರಿಗೆ ಅವನು ಕಣ್ಣು ಬಿಟ್ಟುಕೊಂಡೇ ನಿದ್ದೆ ಮಾಡುತ್ತಿರುವಂತೆ ತೋರುತ್ತದೆ. ಆದರೆ ಅವನ ಕಣ್ಣು ಆಕಾಶದ ನೀಲದಲ್ಲಿ ನೆಟ್ಟಿರುತ್ತದೆ. ಅಲ್ಲಿ ಕುಳಿತು ಪೂರ್ವಕ್ಕೆ ಮುಖ ತಿರುಗಿಸಿದರೆ ಸಾಲು ಸಾಲು ಬೆಟ್ಟ - ಪಶ್ಚಿಮ ಘಟ್ಟದ ಸರಣಿ ಕಾಣುತ್ತದೆ. ಆ ಬೆಟ್ಟಗಳು ದೂರದಿಂದ ನೋಡಿದಾಗ ಹಸುರು ರೇಶ್ಮೆಯ ಮುಸುಕು ತೊಟ್ಟಂತೆ ನುಣ್ಣಗೆ ತೋರುತ್ತವೆ. ಅವುಗಳ ಮೇಲೆ ಬಿಳಿ ಕರಿಮೋಡಗಳ ಹಿಂಡು ನುಗ್ಗಿ ಆಡುತ್ತವೆ. ಆ ತೆಳ್ಳನೆಯ ಬೆಳ್ಳನೆಯ ಕರಿಯ ಮರಿ ಮುಗಿಲುಗಳನ್ನು ಕಂಡು ಅವುಗಳ ನಿರಂತರ ಸಂಚಾರವನ್ನು ಕಣ್ಣು ಮುಚ್ಚದೆ ನೋಡಿ ತಿಮ್ಮನ ಎದೆ ಉಬ್ಬುತ್ತದೆ, ತುಂಬಿಬರುತ್ತದೆ. ಏಕೆಂದು ಅವನಿಗೆ ತಿಳಿಯದು. ದೂರದಲ್ಲಿ, ಮೇಲೆ ಅಗೋ ಅಲ್ಲಿ ಒಂದು ಹದ್ದು ಬಿಚ್ಚಿದ ರೆಕ್ಕೆ ಬಿಚ್ಚಿದಂತೆಯೇ ತೇಲಾಡುತ್ತದೆ. ''ಏಕಯ್ಯ ಸುಮ್ಮನೆ ಕುಳಿತೆ ? ಏನಾದರೂ ಕೂಲಿ ನಾಲಿ ಮಾಡಿ ಅಷ್ಟು ಸಂಪಾದಿಸಿ ಎಲ್ಲರ ಹಾಗೆ ಇರಬಾರದೆ ?'' ಎಂದು ಯಾರಾದರೂ ಕೇಳಿದರೆ ತಿಮ್ಮ ರೇಗುವವನಲ್ಲ. ''ಅಯ್ಯಾ ಒಂದು ಗಾಡಿ ಇದ್ದಿದ್ದರೆ.... ಒಂದು ಕ್ಷಣವೂ ನಾನು ಸುಮ್ಮನೆ ಕೂರುತ್ತಿರಲಿಲ್ಲ. ಒಂದು ಜೊತೆ ಎತ್ತು, ಒಂದು ಗಾಡಿ, ಇನ್ನೇನೂ ಬೇಡ. ಗಾಡಿಯ ಮೇಲೆ ಕಮಾನು. ಎತ್ತು ಒಂದಕ್ಕೂ ಒಂದು ಗಂಟೆ ಸರ. ಗಂಟೆ ಗಣ ಗಣ ಎನ್ನಬೇಕು; ನಾನು ಮೂಕಿಯ ಮೇಲೆ ಕುಳಿತು ''ಹೈ, ಹೈ, ಹೈ'' ಎನ್ನಬೇಕು. ನೋಡಿ ಕೆಲಸ ಅಂದರೆ ಅದು. ಕುಂದಾಪುರಕ್ಕೆ ಹೋಗಬೇಕೆ ? ಸಾಗರಕ್ಕೆ ? ಶಿವಮೊಗ್ಗೆಗೆ ? ಹಾಸನದ ಜಾತ್ರೆಗೆ ? ಹೋಗುತ್ತೇನೆ ಎಲ್ಲಿ ಬೇಕಾದರೆ ಅಲ್ಲಿಗೆ. ಆಣೆಯಿಂದ ಕಲ್ಲು ತರಬೇಕೆ ? ಇಲ್ಲ ಕಾಡಿಗೆ ಹೋಗಿ ಸೌದೆಯನ್ನೇ ? ಎಷ್ಟು ಗಾಡಿ ಸೌದೆ ಬೇಕು ಹೇಳಿ...... ಆದರೆ ನೋಡಿ, ಅಯ್ಯಾ, ಗಾಡಿ ಒಂದು ಇಲ್ಲದೆ ನನ್ನ ಕೈ ಮುರಿದ ಹಾಗೇ ಆಗಿದೆ. ಏನು ಮಾಡೋದಕ್ಕೂ ತೋಚದು. ಅಲ್ಲಿ ಆಕಾಶದಲ್ಲಿ ನೋಡಿ ಎಷ್ಟು ಗಾಡಿಗಳು ಸಲೀಸಾಗಿ ಸಾಗುತ್ತಿವೆ ! ಅಬ್ಬಬ್ಬಾ, ಒಂದೊಂದು ಮೋಡಕ್ಕೂ ಒಂದೊಂದು ಗಾಡಿ ಹೇಗೆ ಓಡುತ್ತವೋ ನೋಡಿ. ದಿನಾ ಅವಕ್ಕೆ ಅದೇ ಕೆಲಸ. ನಾನೂ ಅಷ್ಟು ದಿನಗಳಿಂದ ನೋಡುತ್ತಿದ್ದೇನೆ. ಒಂದಾದರೂ ಕೆಳಕ್ಕೆ ಬಾರದು, ನನ್ನ ಕೈಗೆ ಎಟುಕದು''.

ತಿಮ್ಮ ಹೀಗೆ ದೀರ್ಘ ಭಾಷಣ ಮಾಡುತ್ತಿದ್ದುದು ತೀರ ಅಪರೂಪ. ಆದರೆ ಆಗಾಗ ಇಂಥ ಮಾತುಗಳು ಅವನ ಎದೆಯ ಕಟ್ಟೆಯನ್ನೊಡೆದು ಹೊರಚಿಮ್ಮುತ್ತಿದ್ದವು. ಕೇಳಿದವರು ಇವನೊಡನೆ ಮಾತಾಡಿ ಫಲವಿಲ್ಲ ಎಂದುಕೊಂಡು

ಹೊರಟುಹೋಗುವರು. ಇಂಥವನು ಹುಚ್ಚನೆಂದು ಉಳಿದವರು ತಿಳಿದರೆ ಆಶ್ಚರ್ಯವಿಲ್ಲ. ಅವನೇನಾದರೂ ಪಟ್ಟಣದಲ್ಲಿದ್ದಿದ್ದರೆ ಅವನ ಹಿಂದೆ ಒಂದು ಹುಡುಗರ ದಂಡು ಸೇರಿ ಹೋ ಎಂದು ಕೂಗಿ 'ಹುಚ್ಚಾ' ಎಂದು ರೇಗಿಸಿ ಕಲ್ಲೆಸೆದು ನಲಿಯುತ್ತಿದ್ದರು ; ತಿಮ್ಮನಿಗೆ ನಿಜವಾಗಿಯೂ ಹುಚ್ಚು ಹಿಡಿಸಿಬಿಡುತ್ತಿದ್ದರು. ಆದರೆ ಹಳ್ಳಿಯ ಜನಕ್ಕೆ ಅಷ್ಟು ಪುರುಸೊತ್ತಿಲ್ಲ, ನಾಗರಿಕತೆಯೂ ಇಲ್ಲ ಅನ್ನಿ. ಮಾತಾಡಿದಾಗಲೆಲ್ಲ ಇಲ್ಲದ ಗಾಡಿಯನ್ನೇ ಬಣ್ಣಿಸುತ್ತ 'ಗಾಡಿ, ಗಾಡಿ' ಎಂದು ಬಾಯ್ಬಾಯ್ಬಿಡುತ್ತಿದ್ದ ಈ ಕನಸುಗಾರನಿಂದ ನಮ್ಮ ಹಳ್ಳಿಯ ಶಬ್ದಕೋಶಕ್ಕೆ ಮಾತ್ರ ಒಂದು ಹೊಸ ಶಬ್ದ ಸೇರಿಕೊಂಡಿತು. ಯಾರಾದರೂ ಏನಾದರೂ ಆಗಹೋಗದುದನ್ನು ನಂಬಿದ್ದರೆ 'ಸರಿ, ಅದೇನು ಬಿಡಿ, ತಿಮ್ಮನ ಗಾಡೀನೇ' ಎನ್ನುತ್ತಿದ್ದರು.

ಆದರೆ ಈ ಯಾವ ಟೀಕೆ ಟಿಪ್ಪಣಿಗಳಿಂದಲೂ ತಿಮ್ಮ ವ್ಯಗ್ರನಾಗುವವನಲ್ಲ. ಅವನು ಗಾಡಿಯಲ್ಲಿ ಕುಳಿತಿದ್ದಾನೆ. ಉಳಿದವರೆಲ್ಲ ಕಾಲು ನಡಿಗೆಯವರು. ಅವನ ಲೋಕ ಬೇರೆ. ಅವನು ಗಾಡಿ ಇಳಿಯುವುದು ಅಪರೂಪ, ಅವರು ಏರುವುದು ಅಪರೂಪ. ತನ್ನದಲ್ಲದ ಲೋಕಕ್ಕೆ ಅವನು ಇಳಿಯುವುದು ಎಲ್ಲೋ ಒಮ್ಮೊಮ್ಮೆ ಅಷ್ಟೆ. ಆಗ ಮಾತ್ರ ಇಬ್ಬರಿಗೂ ಸಂಕೋಚ, ದಿಗ್ಭ್ರಮೆ. ಉಳಿದ ಕಾಲವೆಲ್ಲ ತಿಮ್ಮನ ಮಟ್ಟಿಗೆ ಗಾಡಿಯ ಕನಸಿನಲ್ಲೇ ಕಳೆಯುತ್ತದೆ. ಸೂರ್ಯ ಏಳು ಕುದುರೆ ಹೂಡಿದ ರಥದಲ್ಲಿ ಕುಳಿತು ಮೂಡಲಿಂದ ಪಡುವಲಿಗೆ ಸವಾರಿ ಮಾಡುತ್ತಾನೆ ಎಂದು ತಿಮ್ಮ ಒಮ್ಮೆ ಭಾಗವತರಾಟದಲ್ಲಿ ಕೇಳಿದ. ಮಾರನೆಯ ದಿನ ಅವನು ಬೆಳಿಗ್ಗೆ ಹೊತ್ತಿಗೆ ಮುಂಚೆಯೇ ಎದ್ದು ಮನೆ ಮುಂದೆ ಮೂಡುಬಾನನ್ನೇ ನೋಡುತ್ತ ನಿಂತ. ಸಪ್ತಾಶ್ವಗಳ ಖುರಪುಟ ಧ್ವನಿ ಕೇಳಲು ಸೂರ್ಯ ಭಗವಾನ್ ಮಂಡಿಸಿರುವ ರಥವನ್ನು ಏಳು ಕುದುರೆಗಳು ಕೂಡಿ ಎಳೆವ ಆ ಭಂಗಿಯನ್ನು ಕಾಣಲು ಸಜ್ಜಾದ. ಆದರೆ ಆಶ್ಚರ್ಯ ಆಗ ಅವನಿಗೆ ಕೇಳಿದ್ದು ಕುದುರೆಗಳ ಖುರಪುಟ ನಿನಾದವಲ್ಲ, ಕೇವಲ ಗಂಟೆಗಳ ಮರ್ಮರ. ಏಳು ಕುದುರೆಗಳಲ್ಲ, ಎರಡೇ ಎರಡು ಪಗದಸ್ತಾದ ಗಟ್ಟದ ಎತ್ತುಗಳು. ಆದರೆ ಅವು ಎಳೆಯುತ್ತಿದ್ದ ಗಾಡಿ ಮಾತ್ರ ಮರದ್ದಲ್ಲ, ಚಿನ್ನದ್ದು. ಸೂರ್ಯದೇವರು ದೊಡ್ಡ ಮನುಷ್ಯ, ಮರದ ಗಾಡಿಯಲ್ಲಿ ಏಕೆ ಕೂತಾನು ಎಂದು ಸಮಾಧಾನ ತಂದುಕೊಂಡ. ಆದರೆ ಆ ಏಳು ಕುದುರೆಗಳ ವಿಚಾರ ಏನು ? ಅವು ಎಲ್ಲಿ ಹೋದುವು ? ಬಯಲಾಟದ ಆ ನಾರದ ಹೇಳಿದ್ದು ಸುಳ್ಳೆ ? ತಿಮ್ಮನಿಗೆ ಬಹಳ ದಿನಗಳ ಕಾಲ ಈ ಸಂಶಯ ಬಗೆಹರಿಯಲಿಲ್ಲ. ಬಹಳ ದಿನಗಳವರೆಗೂ ಅದೇ ಚಿಂತೆ ಅವನನ್ನು ಕಾಡಿತು.

ಮಕ್ಕಳು ಎಂದರೆ ತಿಮ್ಮನಿಗೆ ಪ್ರಾಣ. ಮಕ್ಕಳ ದೃಷ್ಟಿಯಲ್ಲಿ ಅವನು ಕೆಲಸಕ್ಕೆ ಬಾರದ ಮನುಷ್ಯನಲ್ಲ, ಬಹಳ ಒಳ್ಳೆಯ, ತುಂಬ ಉಪಕಾರಿಯಾದ ಮನುಷ್ಯ. ಊರ ಮಕ್ಕಳೆಲ್ಲ ಆಗಾಗ ಅವನ ಹತ್ತಿರ ಹೋಗಿ 'ತಿಮ್ಮ ಗಾಡಿ ಮಾಡ್ಕೊಡೋ' ಎಂದು ಕಾಡುತ್ತಿದ್ದವು. ಆಗ ತಿಮ್ಮನ ಮುಖ ಅರಳುತ್ತಿತ್ತು. ತನ್ನ ಆಲಸ್ಯವನ್ನು ಬದಿಗೊತ್ತಿ ಮಕ್ಕಳೊಡನೆ ಸೇರಿ ನಗುತ್ತ ಆಡುತ್ತ ಅದು ಇದು ಸೇರಿಸಿ ಆಟದ ಗಾಡಿಗಳನ್ನು ಮಾಡಿಕೊಡುತ್ತಿದ್ದ. ಹಲಸಿನ ಹಣ್ಣೆಲೆಗಳನ್ನು ಆರಿಸಿ ತಂದು ಎತ್ತುಗಳನ್ನು ಮಾಡಿ ಗಾಡಿಗಳಿಗೆ ಹೂಡುತ್ತಿದ್ದ. ಆಗ ಅವನ ಮುಖ ನೋಡಬೇಕು. ತನ್ನ ಕೆಲಸವನ್ನು ತಾನು ಕಂಡುಕೊಂಡವನ, ಕೃತಕೃತ್ಯನಾದವನ ತೃಪ್ತಿ ಒಂದು ಕ್ಷಣ ಅವನ ಮುಖದಲ್ಲಿ ಸೂಸುವುದು. ಅವನು ಮಾಡುವ ಗಾಡಿ ಬಹಳ ಓರಣವಾಗಿ ಅಚ್ಚುಕಟ್ಟಾದುದು. ಅದರ ಚಂದವನ್ನು ಕಂಡು ಮಕ್ಕಳು ಉಬ್ಬಿ ಕುಣಿದು ಕೇಕೆ ಹಾಕುತ್ತವೆ. ಮಕ್ಕಳೊಂದಿಗೆ ತಾನೂ ಸೇರಿ 'ಹೇ, ಹೇ' ಎಂದು ಆಟದ ಎತ್ತುಗಳನ್ನು ಒಂದು ಕ್ಷಣ ಓಡಿಸಿ ತಿಮ್ಮ ಸ್ತಬ್ಧನಾಗಿ ಮೂಕನಾಗುತ್ತಾನೆ. ತಿಮ್ಮ ಮಗುವಲ್ಲ, ವಯಸ್ಸಾದವನು, ಬುದ್ಧಿ ಬಲ್ಲವನು. ಆಟದ ಗಾಡಿ ಅವನಿಗೆ ಎಷ್ಟು ತಾನೇ ತೃಪ್ತಿ ಕೊಟ್ಟೀತು ? ಅಥವಾ ಅವನದೂ ಇನ್ನೊಂದು ಆಟವೋ ! ನಾವಿಲ್ಲಿ ಯಾವುದನ್ನು ಬಯಸುತ್ತೇವೋ, ಯಾವುದಕ್ಕಾಗಿ ಕಾತರಿಸುತ್ತೇವೋ ಅವೆಲ್ಲವೂ ಒಂದು ಬಗೆಯ ಆಟಿಗೆಗಳೇ. ಆದರೆ ಅದು ನಮಗೆ ಆಟ ಎನಿಸುವುದಿಲ್ಲ. ಮಕ್ಕಳಿಗೂ ಹಾಗೆಯೇ. ನಮಗೆ ಯಾವುದು ಬರಿ ಆಟ ಎನಿಸುವುದೋ ಅದು ಅವಕ್ಕೆ ಆಟವಲ್ಲ, ತಲೆ ಹೋಗುವ ಕೆಲಸ. ಅದು ಕೈಗೂಡದಿದ್ದರೆ ಅವು ಅಳುತ್ತವೆ. ನಾವೂ ಹಾಗೆಯೆ... ಎರಡೆತ್ತು ಕಟ್ಟಿದ ದೊಡ್ಡ ಗಾಡಿಯ ಚಿತ್ರ ಕಣ್ಣ ಮುಂದೆ ಬಂದು ನಿಂತು ತಿಮ್ಮ ನಿರಾಶೆಯ ನಿಟ್ಟುಸಿರು ಬಿಡುತ್ತಿದ್ದ. ಮಕ್ಕಳ ಸಂತೋಷದ ಕೇಕೆ ಅವನ ಒಳ ಜೀವನದ ಅತೃಪ್ತ ಆಸೆಗೆ ಧೂಪ ಹಾಕುತ್ತಿತ್ತು. ಇದ್ದಕ್ಕಿದ್ದಂತೆ ಸುತ್ತಲೂ ನೂರಾರು ಗಾಡಿಗಳು ಓಡಾಡುವ ಸದ್ದು, ನೂರಾರು ಎತ್ತುಗಳ ಗೊರಸಿನ ಘಟ್ಟನೆ, ಕೊರಳ ಗೆಜ್ಜೆಗಳ ನಿಕ್ವಣನ - ಎಲ್ಲಾ ಸೇರಿ ಅವನ ಕಿವಿಯ ಬಳಿ ಒಂದು ಸಮುದ್ರದಂತೆ ಮೊರೆಯುತ್ತಿದ್ದವು. ಕೇಳಿ ತಿಮ್ಮನ ತಲೆ ಸುತ್ತಿ ಬಂದಂತಾಗಿ ಅವನು ಮೈ ಮರೆಯುತ್ತಿದ್ದ. ಮಕ್ಕಳೆಲ್ಲ ಸೇರಿ 'ತಿಮ್ಮ, ತಿಮ್ಮ' ಎಂದು ಕೂಗಿ ಅಲ್ಲಾಡಿಸಿದಾಗಲೇ ಅವನಿಗೆ ಮೈ ಅರಿವು. 'ಓ, ಓ, ಅಲ್ಲಿ ನೋಡಿ, ಒಡೆಯಾ; ದಿವ್ಯವಾದ ಗಾಡಿ, ನೋಡಿ ಸ್ವಾಮಿ', ಎನ್ನುತ್ತಾನೆ. ಬೆಕ್ಕಸ ಬೆರಗಾಗಿ ಮಕ್ಕಳು ಸುತ್ತಲೂ ಕಣ್ಣರಳಿಸಿ ನೋಡಿ ಏನೂ ಕಾಣದೆ, ''ಹೋಗೋ ತಿಮ್ಮ; ಚೇಷ್ಟೆ ಮಾಡುತ್ತೀಯಾ ?'' ಎನ್ನುತ್ತವೆ. ತಿಮ್ಮನಿಂದ ಅದಕ್ಕೆ ಏನೂ ಉತ್ತರ ಬಾರದಿರಲು ಹುಡುಗರು ತಮ್ಮ ಪಾಡಿಗೆ ತಾವು ಆಡುತ್ತಾ ಹೊರಟು ಹೋಗುತ್ತಿದ್ದರು.

ಮತ್ತೆ ತಿಮ್ಮ ಏಕಾಂಗಿಯಾಗುತ್ತಾನೆ. ಅವನಕ್ಕ ಬಂದು ಸಿಕ್ಕಾಪಟ್ಟೆ ಬಯ್ಯುತ್ತಾಳೆ. ಮನೆಯಲ್ಲಿ ಅಕ್ಕಿ ಒಂದು ಕಾಳೂ ಇಲ್ಲ. ''ಏನು ? ಉಪವಾಸ ಬಿದ್ದು ಸಾಯುತ್ತೀಯಾ ? ಎಲ್ಲಾದರೂ ಸ್ವಲ್ಪ ಕೂಲಿ ಮಾಡೋ'' ಎಂದು ಕಿರಿಚುತ್ತಾಳೆ. ಆ ರಾತ್ರಿ ಊಟವಿಲ್ಲ, ಮರುದಿನವೂ ಇಲ್ಲ. ಮೂರನೆಯ ದಿನ ಬೆಳಿಗ್ಗೆ ಎದ್ದು ಕಂಬಳಿ ಹೆಗಲಿಗೇರಿಸಿ



ತಿಮ್ಮ ಹೊರಡುತ್ತಾನೆ. ಎರಡೇ ಎರಡು ದಿನ ಕೆಲಸ ಮಾಡುತ್ತಾನೆ. ಮತ್ತೆ ವಿರಾಮ - ಗಾಡಿಯ ಕನಸು.

ಆ ಊರಲ್ಲಿ ಗಾಡಿಯಿಟ್ಟಿದ್ದವರು ಒಬ್ಬರೇ ಒಬ್ಬರು - ಶ್ರೀನಿವಾಸ ಕಿಣಿಯರು. ಅವರು ಗಾಡಿಯಿಡುತ್ತಾರೆ ಎಂದು ಕೇಳಿದ ಕೂಡಲೇ ತಿಮ್ಮ ಅಲ್ಲಿಗೆ ಓಡಿ ''ಒಡೆಯ, ನಿಮ್ಮ ಗಾಡಿ ನಾನು ಹೊಡೆಯುತ್ತೇನೆ'' ಎಂದ. ವ್ಯವಹಾರ ನಿಪುಣರಾದ ಅವರಿಗೆ ಈ ಸೋಮಾರಿಯಲ್ಲಿ ಕೊಂಚವೂ ನಂಬಿಕೆ ಹುಟ್ಟುವಂತಿರಲಿಲ್ಲ. ''ನೀನು - ಗಾಡಿ ಹೊಡೆಯೋದು - ಆಯಿತು ! ನಿನ್ನಂಥ ಸೋಮಾರೀನ ನಂಬಿದರೆ ನನಗೆ ಸುಡುಗಾಡೇ ಗತಿ'' ಎಂದು ತಿಮ್ಮನನ್ನು ಓಡಿಸಿಬಿಟ್ಟರು. ಗಾಡಿ ಹೊಡೆಯುವ ಕೆಲಸ ಸೋಮನಿಗೆ ದಕ್ಕಿತು. ತಿಮ್ಮನಿಗೆ ಅದರ ಕನಸು ಮಾತ್ರ ಉಳಿಯಿತು.

ಆ ಊರಿನಲ್ಲೆಲ್ಲ ತಿಮ್ಮನಲ್ಲಿ ಸ್ವಲ್ಪ ಮಟ್ಟಿಗೆ ವಾತ್ಸಲ್ಯವಿದ್ದವರೆಂದರೆ ಕೃಷ್ಣಪ್ಪನವರೊಬ್ಬರೇ. ತಿಮ್ಮ ಎಂದರೆ

ಅವರಿಗೆ ಮೊದಲಿನಿಂದಲೂ ಆಸಕ್ತಿ. ಕುತೂಹಲ ಸ್ವಭಾವದಲ್ಲಿ ಅವರು ತಿಮ್ಮನ ಜಾತಿಗೆ ಸೇರಿದವರಾಗಿದ್ದುದೇ ಇದಕ್ಕೆ ಕಾರಣವಿರಬಹುದು. ಅವರ ಆಶ್ರಯವಿಲ್ಲದೆ ಹೋಗಿದ್ದರೆ ತಿಮ್ಮ ಎಂದೋ ಉಪವಾಸ ಸತ್ತು ಹೋಗುತ್ತಿದ್ದ. ಅವನನ್ನು ಬದುಕಿಸುತ್ತಿದ್ದುದು ಅವರ ಕೊಡುಗೈಯೇ. ತಿಮ್ಮನಿಗೂ ಕೃಷ್ಣಪ್ಪನವರ ಮಾತೆಂದರೆ ವೇದವಾಕ್ಯ. ಅವರ ಮಾತನ್ನು ಅವನು ಎಂದೂ ಮೀರಿದವನಲ್ಲ. ಎಂಟು ದಿನಗಳ ಕಾಲ ಅವನು ನಿರಂತರವಾಗಿ ಕೆಲಸ ಮಾಡಿದ್ದು - ಅಭೂತಪೂರ್ವ ವಿದ್ಯಮಾನ ಅದು - ಕೃಷ್ಣಪ್ಪನವರ ದೊಡ್ಡ ಮಗಳ ಮದುವೆಯ ಕಾಲದಲ್ಲಿ ಮಾತ್ರ. ತಿಮ್ಮನ ಗಾಡಿಯ ಗೀಳು ಕೃಷ್ಣಪ್ಪನವರೂ ಬಲ್ಲರು. ''ಮೂರು ಹೊತ್ತೂ ಗಾಡಿ ಗಾಡಿ ಅಂತ ಹೊಡೆದುಕೊಳ್ಳುತ್ತೆ, ಪಾಪ, ಮಂಕು ಮುಂಡೇದು; ಏನಾದರೂ ಮಾಡಿ ಒಂದು ಗಾಡಿ ತೆಗೆದುಕೊಳ್ಳಬೇಕು'' ಎಂದು ಬಹಳ ದಿನಗಳಿಂದಲೂ ಯೋಚಿಸುತ್ತಿದ್ದರು. ಆದರೆ ಕೃಷ್ಣಪ್ಪನವರಲ್ಲಿ ಅಂಥ ಯೋಚನೆಗಳು ಬಹಳ : ಕೆಲಸ ಮಾತ್ರ ಕೊಂಚ ನಿಧಾನ.

ಅದು ಇನ್ನೂ ನಿಧಾನವಾದುದಕ್ಕೆ ಕೃಷ್ಣಪ್ಪನವರು ಕುದುರೆ ಕೊಂಡುಕೊಂಡದ್ದು ಮುಖ್ಯ ಕಾರಣವಾಯಿತು. ತಕ್ಕ ಮಟ್ಟಿಗೆ ಪಿತ್ರಾರ್ಜಿತ ಆಸ್ತಿ ಇದ್ದ ಕೃಷ್ಣಪ್ಪ ದುಂದುಗಾರ, ಹಿಂದು ಮುಂದಿನ ಯೋಚನೆಯಿಲ್ಲದ ಅವಿವೇಕಿ ಎಂದು ನಮ್ಮೂರಿನವರೆಲ್ಲ ಬಲ್ಲರು. ಆದರೆ ಒಂದು ಕುದುರೆಗೆ ನೂರೈವತ್ತು ರೂಪಾಯಿ ಸುರಿಯಬಲ್ಲಷ್ಟು ಅವಿವೇಕಿ ಎಂದು ಮಾತ್ರ ಯಾರೂ ತಿಳಿದಿರಲಿಲ್ಲ. ಕೃಷ್ಣಪ್ಪ ಅತಿಥಿ ಸತ್ಕಾರ ನಡೆಸಿದರೆ, ಬಯಲಾಟ ಆಡಿಸಿದರೆ, ತಾಳ ಮದ್ದಲೆ ಮಾಡಿಸಿದರೆ ಅದು ದುಂದುಗಾರಿಕೆ ಹೌದು ; ಆದರೆ ಅದರಿಂದ ಊರವರಿಗೆಲ್ಲ ಪ್ರಯೋಜನವುಂಟು. ಆದರೆ ಊರಿಗೆ ವಿಶೇಷವಾದ ಈ ಕುದುರೆ ತಂದುದು ಅನುಪಯೋಗ ? ಯಾರಿಗೂ ಹೊಳೆಯಲಿಲ್ಲ. ಆ ಕುದುರೆಯೋ ಕೀಳು ಜಾತಿಯ ಮುದಿ ಕುದುರೆಯಂತೆ ತೋರಿತು. ಅದರ ಆರೋಗ್ಯ ಕೂಡಾ ಸರಿಯಾಗಿಲ್ಲ ಎಂದು ಹಳ್ಳಿಯ ವೈದ್ಯ ಗಣೇಶರಾಯರು ಅಭಿಪ್ರಾಯ ಪಟ್ಟರು. ಆದರೆ ಕೃಷ್ಣಪ್ಪನವರು ಇದಾವುದನ್ನೂ ಗಮನಿಸದೆ ಒಂದು ವಾರವೆಲ್ಲ ಕುದುರೆ ಸವಾರಿ ಕಲಿಯುವುದರಲ್ಲಿ ಕಳೆದರು. ಹತ್ತಾರು ಸಲ ಬಿದ್ದು ಒಂದೆರಡು ಹಲ್ಲು ಮುರಿದುಕೊಂಡರು. ಕೊನೆಗೂ ಕುದುರೆಯ ಬೆನ್ನನ್ನು ಏರುವಷ್ಟು ನೈಪುಣ್ಯ ಪಡೆದರು.

ಒಂದು ದಿನ ಕೃಷ್ಣಪ್ಪನವರು ಕುದುರೆ ಏರಿಕೊಂಡೇ ತಿಮ್ಮನ ಮನೆಯ ಹತ್ತಿರ ಬಂದರು. ತಿಮ್ಮನನ್ನು ಕಂಡಾಗ ಕುದುರೆ ಬಂದ ಮೇಲೆ ಹಿಮ್ಮೆಟ್ಟಿದ್ದ ಗಾಡಿಯ ಯೋಚನೆ ಅವರ ಮನಸ್ಸಿನಲ್ಲಿ ಮತ್ತೆ ಸುಳಿಯಿತು.

'ಏನೋ ತಿಮ್ಮಾ, ಅದೇ ಗಾಡಿಯ ಕನಸು ಅಲ್ಲವೋ ?' ಎಂದು ಕೇಳಿದರು.

'ಹೌದು ಒಡೆಯಾ, ಅದೇ. ಈಗೀಗ ಅಂತೂ ದಿನ ಕಳೆಯೋದೇ ಕಷ್ಟವಾಗುತ್ತಿದೆ. ಮಂಜಣ್ಣನ ಗಾಡಿ ನೀವು ನೋಡಿದಿರಾ ? ಹೇಗಿದೆ ! ಆದರೆ ಕಮಾನು ಇಲ್ಲದೆ ಇರುವುದು ಅಷ್ಟು ಚೆಂದವಲ್ಲ. ಗಾಡಿ ಅಂದ ಮೇಲೆ ಕಮಾನು ಇರಬೇಡವಾ ? ಎತ್ತುಗಳ ಕತ್ತು ಬೋಳಾಗೇ ಇವೆ. ಒಂದು ಗಂಟೆ ಸರ ಕಟ್ಟಬಾರದಾ ? ಏಕೋ ಅಂಥವರಿಗೆ......'

'ಎಲ್ಲಾ ಒಂದೇ ಸಲಕ್ಕೆ ಆಗುತ್ತೇನೋ ? ನಿಧಾನವಾಗಿ ಎಲ್ಲಾ ಹೊಂದಿಸಿಕೊಳ್ಳುತ್ತಾನೆ.'

'ಅದೂ ಹೋಗಲಿ, ಒಡೆಯಾ. ಅವನು ಎತ್ತುಗಳನ್ನು ಹೊಡೆಯುವುದು ! ನೀವು ನೋಡಿಲ್ಲ ಅಂತ ಕಾಣುತ್ತೆ. ಪಾಪ ಅವಕ್ಕೆ ಪ್ರಾಣ ಇಲ್ಲವಾ ? ಮೂಕ ಪ್ರಾಣಿಗಳಿಗೆ ಹಾಗೆ ಹಿಂಸೆ ಕೊಡೋದು ದೇವರು ಮೆಚ್ಚೋ ಕೆಲಸವಾ ?'

'ಹೌದು ತಿಮ್ಮ, ಹಾಗೆಲ್ಲ ಮಾಡಕೂಡದು ನಿಜ. ಈ ಕುದುರೇನೇ ನೋಡು. ಅದಕ್ಕೆ ಹುಷಾರಿಲ್ಲ ಅಂತ ಕಾಣುತ್ತೆ. ಜ್ವರವೋ ಏನೋ ಹಾಳಾದ್ದು! ನಾಳೆಯಿಂದ ಅದು ವಾಸಿಯಾಗೋ ತನಕ ಹತ್ತೋದೆ ಇಲ್ಲ.'

-ಎಂದು ಹೇಳಿ ಹೊರಟುಹೋದರು ಕೃಷ್ಣಪ್ಪ. ಕುದುರೆ ವಾಸಿಯಾಗಲಿಲ್ಲ, ಹತ್ತು ದಿನ ನರಳಿ ಹಾಗೇ ಕಣ್ಣು ಮುಚ್ಚಿತು.

ತಾನು ಅಷ್ಟು ದುಡ್ಡು ಕೊಟ್ಟು ತಂದಿದ್ದ ಕುದುರೆ ತೀರಿಹೋದ ಮೇಲೆ ಕೃಷ್ಣಪ್ಪನವರಿಗೆ ಅದಕ್ಕಿಂತ ಗಾಡಿಯೇ ವಾಸಿ ಎನ್ನಿಸಿತು. ಮನೆಯಲ್ಲಿ ಒಂದು ಜೊತೆ ಕಟ್ಟು ಮಸ್ತಾದ ಎತ್ತುಗಳಿದ್ದವು. ಒಂದು ಗಾಡಿ ಮಾಡಿಸಿಬಿಟ್ಟರೆ ಹೂಟಿಯ ಕೆಲಸಕ್ಕೆ ಹೂಟಿಯ ಕೆಲಸ, ಉಳಿದ ಕಾಲದಲ್ಲಿ ಎಲ್ಲಿಗೆ ಬೇಕಾದರೆ ಅಲ್ಲಿಗೆ ಗಾಡಿಯೇರಿ ಹೋಗಬಹುದು; ಬೇಕಾದ ಸಾಮಾನು ತರಿಸಿಕೊಳ್ಳಬಹುದು. ಕೃಷ್ಣಪ್ಪನವರು ಗಾಡಿ ಆಗಬೇಕು ಎಂದದ್ದೇ ತಡ ಅವರ ಒಕ್ಕಲು ನಾಗಪ್ಪಾಚಾರಿ ಬಂದು ಆ ಕೆಲಸಕ್ಕೆ ಸಿದ್ಧನಾದ.

ಆ ಕಾಲ ತಿಮ್ಮನ ಜೀವನದ ಪರ್ವಕಾಲ. ಗಾಡಿ ಕೆಲಸ ನಡೆಯುತ್ತಿದ್ದಾಗ ತಿಮ್ಮ ಕೃಷ್ಣಪ್ಪನವರ ಮನೆಗೇ ಬಂದು ತಳವೂರಿದ. ಉಳಿಯ ಮೇಲೆ ಬೀಳುವ ಒಂದೊಂದು ಕೊಡತಿಯೇಟಿಗೂ ಅವನ ಮನಸ್ಸು ಕುಣಿದು ತಾಳ ಹಾಕುತ್ತಿತ್ತು. ನಡೆಯುತ್ತಿದ್ದ ಕೆಲಸವನ್ನು ನೋಡುತ್ತ ನೋಡುತ್ತ ಉತ್ಸಾಹದಿಂದ ಸಫಲತೆಯ ತೃಪ್ತಿಯಿಂದ ಅವನ ಹೃದಯ ನೀರುನೀರಾಯಿತು. ಕೃಷ್ಣಪ್ಪನವರೂ ಆಗಾಗ ಅಲ್ಲಿಗೆ ಬಂದು ನಿಂತು ತಿಮ್ಮನ ಮುಖದಲ್ಲಿ ಲಾಸ್ಯವಾಡುತ್ತಿದ್ದ ಕೃತಕೃತ್ಯತೆಯ ಮಿಂಚನ್ನು ಕಂಡು ಹಿಗ್ಗುತ್ತಿದ್ದರು. ತಾನು ನಿಜವಾಗಿಯೂ ಒಂದು ಒಳ್ಳೆಯ ಕೆಲಸ ಮಾಡಿ ಈ ಬಡಪಾಯಿಯ ಆಶೆಯನ್ನು ಪೂರೈಸಿಕೊಡುತ್ತಿರುವೆನಲ್ಲ ಎಂದು ತಣಿದರು. ನಾಲ್ಕೇ ನಾಲ್ಕು ದಿನಗಳಲ್ಲಿ ಗಾಡಿಯ ಚಕ್ರಗಳು ಸಿದ್ಧವಾದುವು. ಇನ್ನೇನು, ಸುತ್ತೂ ಮರದ ಪಟ್ಟಿಗಳನ್ನು ನಿಲ್ಲಿಸಿ, ಮೂಕಿಯನ್ನು ಜೋಡಿಸಿ, ಬಿರಿಕುಂಟೆಯನ್ನು ಅಳವಡಿಸಿ ಮೇಲೆ ಕಮಾನು ಕಟ್ಟಿದರೆ ತೀರಿತು. ದಿವ್ಯವಾದ ಗಾಡಿ ಆಯಿತು. ಗಾಲಿಯ ಕೀಲುಗಳಿಗೆ ಎಣ್ಣೆ ಸುರಿದು ಎತ್ತುಗಳನ್ನು ನೊಗಕ್ಕೆ ಸೇರಿಸಿ ಕಟ್ಟಿ ಮೇಲೆ ಮೂಕಿಯ ಮೇಲೆ ಕುಳಿತು 'ಹೇ, ಹೇ, ಹೈ' ಎಂದು ಬಾರುಗೋಲು ಬೀಸಿದರೆ ತೀರಿತು ಸರಿ ಗಾಡಿ ಓಡುತ್ತದೆ.

ಗಾಡಿ ಓಡುತ್ತದೆ. ರಸ್ತೆ ಹಿಂದೆ ಹಿಂದೆ ಸರಿಯುತ್ತದೆ. ಹಾಗೆ ಹೋಗುತ್ತಿದ್ದರೆ ಒಂದೇ ಒಂದು ಗಳಿಗೆಯಲ್ಲಿ ನಾಯ್ಕನ ಕಟ್ಟೆಯ ದೊಡ್ಡ ರಸ್ತೆ ಸಿಗುತ್ತದೆ. ಅಲ್ಲಿಂದ ಮುಂದೆ ಎಡಮಾವಿನ ಹೊಳೆ ಸೇತುವೆ. ಆಗ ಮಾತ್ರ ಜೋಕೆಯಿಂದ ಗಾಡಿ ಹೊಡೆಯಬೇಕು. ಎದುರು ಗಡೆಯಿಂದ ಇದ್ದಕ್ಕಿದ್ದಂತೆ ಭೋ ಭೋ ಭೋ ಎಂದು ಬಸ್ಸು ತಿರುವಿನಲ್ಲಿ ಕಾಣಿಸಿಕೊಂಡುಬಿಡಬಹುದು. ಅನಂತರ ಕಿರಿಮುನೇಶ್ವರ ಸಿಗುತ್ತದೆ; ಆಚೆ ನಾಮುಂದ, ಮರವಂತೆ, ಮಾರಸ್ವಾಮಿ. ಮಾರಸ್ವಾಮಿ. ಅಲ್ಲಿ ಒಂದು ಕಡೆ ಸಮುದ್ರ, ಇನ್ನೊಂದು ಕಡೆ ಅರೆ ಹೊಳೆ ನಡುವೆ ರಸ್ತೆ. ಕೊಂಚ ದಿಗಿಲು ಹುಟ್ಟುವ ಸ್ಥಳವೇ ಅದು. ಸಮುದ್ರ ಘೋ ಎಂದು ಬೊಬ್ಬಿರಿಯುತ್ತದೆ. ಬೆಳ್ಳಿ ಮರಳ ಹಾಸಿಗೆಯ ಮೇಲೆ ಸಮುದ್ರದ ದೆಯ್ಯ ಕೈಗಳು ಬಂದು ಬಡಿದು ಬಾರಿಸುತ್ತವೆ. ನೀರು ಚಿಮ್ಮಿ ತುಂತುರು ತುಂತುರಾಗುತ್ತದೆ ; ನೊರೆನೊರೆಯಾಗಿ ನೀರು ಹಲ್ಮೊರೆಯುತ್ತದೆ. ದಡದ ಬಳಿಯಲ್ಲೇ ಅಲ್ಲಲ್ಲಿ ಬಂಡೆಗಳು ತೆರೆಗಳು ಹೊಯ್ಲಿಗೆ ಅಡ್ಡವಾಗಿ ತಲೆ ಮಲೆತು ನಿಂತಿವೆ. ತೆರೆಗಳ ಹಿಂಡೇ ಬಂದು ತಾಗಿ ಬಡಿದು ಭೋರೆಂದು ಮೊರೆದು ಸುಯ್ದು ಎತ್ತರಕ್ಕೆ ಚಿಮ್ಮಿ ಬಿದ್ದು ಬೆಳ್ಳಿಯಂಥ ನೊರೆ ಕಾರುತ್ತದೆ. ಈಚೆ ಹೊಳೆಗೆ ಆ ಆರ್ಭಟವಿಲ್ಲ, ಗಂಭೀರ ಮೌನದಲ್ಲಿ ಸಳಸಳ ಹರಿಯುತ್ತದೆ. ಶುದ್ಧವಾಗಿ ಸ್ವಚ್ಛವಾಗಿ ದೂರಕ್ಕೆ ತಿಳಿ ನೀಲಿಯಾಗಿ ಕಾಣುವ ನೀರು; ಎರಡೂ ದಡಗಳ ಮೇಲೆ ತೆಂಗಿನ ಸಾಲು ತೋಪು. ನೀರನ್ನು ಕಂಡರೆ ಹಾಗೇ ಹಾಯಾಗಿ ಅದರ ಮೇಲ್ಮೈಯ ತೆಳು ರೇಶಿಮೆಯ ಮೇಲೆ ನಡೆಯಬಹುದು ಎನಿಸುತ್ತದೆ. ಆದರೂ ಹೊಳೆ ಬಹಳ ಆಳವಂತೆ. ಮಾರಸ್ವಾಮಿಯ ಬಳಿ ಹೊಳೆ ಕಡಲು ಎರಡೂ ಭಯಂಕರ. ಎಳ್ಳಮವಾಸ್ಯೆಯ ದಿನ ಸ್ನಾನಕ್ಕೆ ಹೋದವರಲ್ಲಿ ಒಬ್ಬಿಬ್ಬರಾದರೂ ಅದಕ್ಕೆ ಬಲಿಯಾಗದೆ ಇರುತ್ತಿರಲಿಲ್ಲ. ಹೊಳೆಯ ಮೇಲೆ ಈ ಕಡುವಿನಿಂದ ಆ ಕಡುವಿಗೆ ಒಂದು ಟಪುದೋಣಿ ಜನಗಳನ್ನು ಸಾಗಿಸಿಕೊಂಡು ಹೋಗುತ್ತದೆ. ಸಮುದ್ರದಲ್ಲಿ ದೂರ ದೂರದಲ್ಲಿ ಹಾಯಿ ದೋಣಿಗಳೂ, ಮಚ್ವೆಗಳೂ, ಲಗಗಳೂ ಚುಕ್ಕೆಗಳ ಹಾಗೆ ಕಾಣಿಸುತ್ತವೆ. ಹತ್ತಿರದಲ್ಲಿ ಕಿನಾರೆಯ ಸಮೀಪವೇ ಸಣ್ಣ ಸಣ್ಣ ಪಾತಿಗಳಲ್ಲಿ ಬಲೆ ಹಿಡಿದು ನಿಂತ ಬೆಸ್ತರು ಕಡಲಲೆಗಳ ಮೇಲೆ ಉಯ್ಯಲಾಡುತ್ತಾರೆ. ಗಣೆ ಮಿಣಿಯಾಟ ನಡೆಸುವಂತೆ ತೋರುತ್ತದೆ. ಮುಂದೆ ಹಾಗೇ ಹೋಗಿ ತ್ರಾಸಿಯನ್ನು ಕಳೆದರೆ ಗಂಗೊಳ್ಳಿಯ ಏರು ಬರುತ್ತದೆ. ಆಗ ಮಾತ್ರ ತುಂಬ ಜೋಪಾನವಾಗಿರಬೇಕು. ಸ್ವಲ್ಪ ಹೆಚ್ಚು ಕಡಿಮೆಯಾದರೆ ಗಾಡಿಯೇ ಮಗುಚಿಕೊಂಡೀತು.

ತಿಮ್ಮನ ಮನಸ್ಸು ನಾಗಾಲೋಟದಿಂದ ಮುಂದೆ ಓಡಿತು. ಗಾಡಿ ಸಿದ್ಧವಾಯಿತು. ಬಹು ಸುಂದರವಾದ ಗಾಡಿ. ತಾನು ಹತ್ತಾರು ವರ್ಷಗಳಿಂದ ಕಾಣುತ್ತಿದ್ದ ಬಂಗಾರದ ಕನಸು ಕಣ್ಣ ಮುಂದೆ ರೂಪುಗೊಂಡು ನಿಂತಂತೆ ತಿಮ್ಮನಿಗೆ ತೋರಿತು. ಎತ್ತುಗಳ ಕೊರಳಿಗೆ ಗಂಟೆ ಸರ ಮಾತ್ರ ಇನ್ನೂ ತಂದಿಲ್ಲ, ತರಬೇಕು. ಇಂಥ ಈ ಸೊಗಸಾದ ಗಾಡಿ ಸವಾರ ಯಾರು ? ತಿಮ್ಮ. ಕೆಲಸಕ್ಕೆ ಬಾರದವನೆಂದು ಸೋಮಾರಿಯೆಂದು ಎಲ್ಲರೂ ಹಳಿಯುತ್ತಿದ್ದ, ತಿಮ್ಮ. ಆ ರಾತ್ರಿಯೇ ಅವನು ಗಾಡಿಗೆ ಹುಲ್ಲು ಹೊರೆ ತುಂಬಿಕೊಂಡು ಗಂಗೊಳ್ಳಿಗೆ

ಹೊರಡುತ್ತಾನೆ ಈ ರಾತ್ರಿಯೇ. ಇನ್ನು ಉಳಿದದ್ದು ಒಂದು ಹತ್ತು ಗಂಟೆ ಅಷ್ಟೆ. ಆದರೆ ಅದರ ಒಂದೊಂದು ನಿಮಿಷವೂ ಅವನಿಗೆ ಒಂದೊಂದು ಯುಗದಂತೆಯೇ ತೋರಿತು. ಅವನ ಸಂಗಡ ಕೃಷ್ಣಪ್ಪನವರೂ ಹೊರಡುತ್ತಾರೆ. ಮರುದಿನ ಬೆಳಿಗ್ಗೆ ಅವರೊಬ್ಬರೇ ಗಂಗೊಳ್ಳಿ ಹೊಳೆ ದಾಟಿ ಆಚೆ ಕುಂದಾಪುರದ ಸಂತೆಗೆ ಹೋಗುತ್ತಾರೆ. ಅಲ್ಲಿ ಅಷ್ಟು ಹಸುರುವಾಣಿ ಕೊಂಡುಕೊಂಡು ಅವರು ಈಚೆಗೆ ದಾಟಿದ ಮೇಲೆ ಇಬ್ಬರೂ ಒಟ್ಟಿಗೆ ಮತ್ತೆ ಊರಿಗೆ ಮರಳುವುದು.

ಕೈ ಮೇಲೆ ನಿಂತು ಕುಣಿಯುತ್ತಿದ್ದ ಈ ಕನಸುಗುಳ್ಳೆಯನ್ನು ಕಂಡು ತಿಮ್ಮ ನಲಿದ; ಮೈಮರೆತ. ಆಕಾಶದಲ್ಲಿ ಅವನು ದಿನವೂ ಕಾಣುತ್ತಿದ್ದ ಗಾಡಿಗಳಲ್ಲಿ ಈಗ ಒಂದು ಕೆಳಕ್ಕೆ ಇಳಿದು ಬಂದು ನಿಂತಿದೆ. ಕನಸು ಈಗ ನನಸಿನ ತೀರವನ್ನು ತಲುಪಿದೆ. ಅದರಾಚೆ ಈವರೆಗೆ ಕಣ್ಣಿಗೆ ಬೀಳದ ಸಾಹಸಗಳು, ಸೌಂದರ್ಯಗಳು, ಅನುಭವಗಳು ದಾರಿಯುದ್ದಕ್ಕೂ ತಿಮ್ಮನಿಗಾಗಿ ಕಾದುನಿಂತಿವೆ. ಈಗ ಅವನ ಬಾಳು ಅರಳಿತು. ಅದಕ್ಕೆ ನಿಜವಾದ ಬುನಾದಿ ಏರ್ಪಟ್ಟಿತು. ಇನ್ನು ಅದು ಏರುತ್ತದೆ. ವಿಶಾಲವಾಗಿ ಹರಡಿ ರೂಪುಗೊಳ್ಳುತ್ತದೆ. ಹೆಂಡತಿ, ಮನೆ, ಮಕ್ಕಳು - ಎಲ್ಲಾ. ಇನ್ನು ಯೋಚಿಸಿ ತಿಮ್ಮನ ಮುಖ ಕೆಂಪಾಯಿತು.

'ಒಡೆಯಾ !' ಎಂದ ತಿಮ್ಮ.

ಅಲ್ಲೇ ನಿಂತಿದ್ದ ಕೃಷ್ಣಪ್ಪನವರು 'ಏನೋ ತಿಮ್ಮ ಗಾಡಿ ಹೇಗಿದೆ ? ಮಂಕ ಮುಂಡೆಗಂಡ, ಈ ದಿನ ಗಾಡಿ ಹತ್ತು. ಅಳುತ್ತಿದ್ದೆಯಲ್ಲ ಇಷ್ಟು ದಿನ ಗಾಡಿ ಗಾಡಿ ಅಂತ. ಇನ್ನು ಈ ಗಾಡಿ ಹೊಡೆಯುವವನು ನೀನೇ, ತಿಳೀತೇನೋ,-

'ಹೌದು ತಿಳೀತೊಡೆಯಾ ; ಆದರೆ ಗೆಜ್ಜೆ ಸರ ಇಲ್ಲವಲ್ಲ - ತರಲಾ ?'

ಉಪ್ಪುಂದ ಪೇಟೆಗೆ ಎರಡು ಮೈಲಿ ದೂರ. ಅಲ್ಲಿಗೆ ತಿಮ್ಮ ಗಾಳಿಯಂತೆ ಓಡಿದ. ಮಾಧವ ಪೈಗಳ ಅಂಗಡಿಯಲ್ಲಿ ಹತ್ತಾರು ಗೆಜ್ಜೆ ಸರಗಳನ್ನು ತೆಗೆಸಿ ನೋಡಿ ಅವುಗಳಲ್ಲಿ ಅತ್ಯುತ್ತಮವಾದುದನ್ನೇ ಆರಿಸಿ ತಂದ. ಈಗ ಗಾಡಿ ಪರಿಪೂರ್ಣವಾಯಿತು. ತಿಮ್ಮ ಗಾಡಿಯಲ್ಲಿ ಕುಳಿತು ಕೊಳ್ಳುತ್ತಾನೆ - ನಿಜವಾಗಿಯೂ - ಮೊದಲ ಸಲ ! ಆದರೆ ಗಾಡಿ ಹೊಡೆಯುವುದು ಅವನಿಗೆ ಪ್ರಯಾಸವಾಗದು. ದಿನದಿನವೂ ಹಗಲಿರುಳೂ ಅವನು ಮಾಡುತ್ತಿದ್ದ ಕೆಲಸ ಇನ್ನೇನು ? ಈಗ ಅವನ ಗುರುತೂ ಸಿಗದು. ಮಣ್ಣ ಹೆಂಟೆ ಪಾದರಸವಾಗಿದೆ. ಚುರುಕು, ಓಡಾಟ, ಗಡಿಬಿಡಿ, ಸಂಭ್ರಮ.

ಆ ವರ್ಷ ನಮ್ಮೂರಿನಲ್ಲಿ ಮಾವಿನಕಾಯಿ ಬೆಳೆ ಚೆನ್ನಾಗಿ ಆಗಿರಲಿಲ್ಲ. ಮಾವಿನ ಮರಗಳು ಹೂ ಬಿಡುತ್ತಿದ್ದಾಗಲೇ ಮೋಡ ಕವಿದು ಹೂವು ಕಮರಿಹೋಗಿದ್ದುವು. ಅಲ್ಲಲ್ಲಿ ಕೆಲವು ಮರಗಳಲ್ಲಿ ಒಂದಷ್ಟು ಮಿಡಿ ಕಾಣಿಸಿಕೊಂಡಿದ್ದುವು ಅಷ್ಟೆ. ಎಲ್ಲಿಂದಾದರೂ ಅಷ್ಟು ಮಿಡಿ ತಂದು ಉಪ್ಪಿನಕಾಯಿ ಹಾಕದೆ ಹೋದರೆ ಮಳೆಗಾಲ ಕಳೆಯುವುದು ಹೇಗೆ ? ಕೃಷ್ಣಪ್ಪನವರ ಮನೆ ಹಿಂದಿನ ಹಿತ್ತಲಲ್ಲಿ ಭೂತಾಕಾರದ ಒಂದು ಮಾವಿನ ಮರ ಇದೆ. ಅದರ ತುದಿಯಲ್ಲಿ ಎಟುಕಲಾರದಷ್ಟು ಎತ್ತರದಲ್ಲಿ ಮಿಡಿಗೊಂಚಲು ಗೊಂಚಲಾಗಿ ತೂಗುತ್ತಿದ್ದುವು. ಆ ಊರಿನಲ್ಲಿ ಅಂಥ ಮರ ಹತ್ತುವವರು ಯಾರೂ ಇಲ್ಲ. ಮರ ಏರುವುದರಲ್ಲಿ ಹನುಮಂತ ಎನಿಸಿಕೊಂಡಿದ್ದ ಸೋರೆ ಬೈಲು ಸೋಮನೂ ಕೂಡಾ ಈ ಮರಕ್ಕೆ ಕಪ್ಪ ಕೊಡುತ್ತಿದ್ದ. ಆ ದಿನ ತಿಮ್ಮನಿಗೆ ಊಟಕ್ಕೆ ಬಡಿಸುತ್ತಾ ಕೃಷ್ಣಪ್ಪನವರ ಹೆಂಡತಿ,

'ಏನೋ ತಿಮ್ಮ, ಈ ವರ್ಷ ಮಾವಿನ ಮಿಡಿ ಮುಖಾನೇ ಕಾಣಲಿಲ್ಲ. ಗೊಜ್ಜು, ಉಪ್ಪಿನಕಾಯಿ ಒಂದೂ ಇಲ್ಲ. ನಮ್ಮ ಮನೆ ಹಿಂದಿನ ಮರದಲ್ಲಿ ಬೇಕಾದಷ್ಟು ಆಗಿದೆ. ಕೊಯ್ಯುವವರೇ ಇಲ್ಲ. ಬಿಟ್ಟರೆ ಬಲಿತು ಹೋಗಿಬಿಡುತ್ತದೆ' ಎಂದರು.

'ಅದರ ಯೋಚನೆ ಬಿಡಿ ಅಮ್ಮಾ, ಅದೇನು ಅಂಥ ದೊಡ್ಡ ಕೆಲಸ ? ಇವತ್ತು ಗಾಡಿ ಹೊರಡುವುದರೊಳಗೆ ಕೊಯ್ದುಕೊಟ್ಟೇ ಹೋಗುತ್ತೇನೆ. ಆ ಕೆಲಸ ನನಗಿರಲಿ.'

ಈಗ ತಿಮ್ಮನಿಗೆ ಯಾವುದೂ ಅಸಾಧ್ಯವೆನ್ನಿಸಲಿಲ್ಲ. ಎನ್ನಿಸಲಾರದು. ಕಷ್ಟ, ಅಸಾಧ್ಯ, ಆಗತಕ್ಕದ್ದಲ್ಲ ಎಂಬ ಮಾತೆಲ್ಲ ಈಗ ಅವನಿಗೆ ಅರ್ಥವಿಲ್ಲದವುಗಳೆಂದೇ ತೋರಿತು. ಆಕಾಶಕ್ಕೆ ನೆಗೆದು ಬೇಕಾದರೆ ನಕ್ಷತ್ರಗಳನ್ನೇ ಕೀಳಬಹುದು. ಸೂರ್ಯಮಂಡಲಕ್ಕೆ ಹೋಗಿ ಅವನ ಬಂಗಾರದ ಗಾಡಿಗೆ ಸಾರಥಿಯಾಗಿ ಕುಳಿತು ಪೂರ್ವದಿಂದ ಪಶ್ಚಿಮಕ್ಕೆ ಸವಾರಿ ಮಾಡಬಹುದು. ಮರ ಏರಲು, ಮಾವಿನ ಮಿಡಿ ಉದುರಿಸಲು ಹೆದರಿಯಾನೇ ತಿಮ್ಮ ?

ಮರ ಏರುವುದು ಅವನಿಗೆ ಸುಲಭವಾದ ಕೆಲಸವಾಗಲಿಲ್ಲ. ಇಬ್ಬರು ತಬ್ಬಿಕೊಂಡರೂ ತೆಕ್ಕೆ ಹಿಡಿಯದಂಥ ಕಾಂಡ ಅದಕ್ಕೆ. ಐದು ಮಾರು ಕಾಂಡ ಹತ್ತಿದರೇ ಮೊದಲನೆಯ ಕೊಂಬೆ ಕೈಗೆ ಸಿಕ್ಕುವುದು. ಮಾವಿನ ಮರದ ಪಕ್ಕದ ತೆಂಗಿನ ಮರವನ್ನೇರಿ ಅಲ್ಲಿಂದ ಕೊಂಬೆಗೆ ಹಗ್ಗವೆಸೆದು ಕಟ್ಟಿ ಕೋತಿಯಂತೆ ನೇತಾಡುತ್ತಾ ಏರಿ ಮೊದಲನೆಯ ಕವಲಿನಲ್ಲಿ ತಿಮ್ಮ ನಿಂತ. ವಿಶಾಲವಾಗಿ ಎಲೆ ತುಂಬಿ ಕವಿದಿದ್ದ ಕೊಂಬೆ ಕೊಂಬೆಗಳ ನಡುವೆ ಆಗಾಗ ಕಣ್ಮರೆಯಾಗುತ್ತ ಹಂತಹಂತವಾಗಿ ಕವಲು ಕವಲುಗಳನ್ನೇರಿ ಮೇಲೆ ಸಾಗಿದ. ಇನ್ನೂ ಮೇಲೆ ಅಲ್ಲಿ ಆಕಾಶದಲ್ಲೇ ಎಂಬ ಹಾಗೆ ದಟ್ಟವಾದ ಹಸುರು ಎಲೆಗಳ ಬಲೆಗಳ ನಡುವೆ ಮಾವಿನ ಮಿಡಿಗಳು ಗೊಂಚಲು ಗೊಂಚಲಾಗಿ ತೂಗುತ್ತಿದ್ದವು. ಇನ್ನೇನು, ಮರದ ತುದಿಗೆ ಏರಿದ ಹಾಗೇ. ಅಲ್ಲಿ ನಿಂತು ಗೆಲ್ಲುಗಳನ್ನು ಅಲುಗಿಸಿದರೆ ಮಾವಿನ ಮಿಡಿಗಳ ಮಳೆಯೇ. ಕೆಳಗೆ ನಿಂತು ಕೃಷ್ಣಪ್ಪನವರ ಹೆಂಡತಿ ಆಶೆಯಿಂದ ಕಣ್ಣು ಮೇಲಕ್ಕೇರಿಸಿ ನೋಡುತ್ತಿದ್ದರು.

ತಿಮ್ಮನ ದೇಹವೇನೋ ಮರವನ್ನು ಕಷ್ಟಪಟ್ಟು ಏರುತ್ತಿತ್ತು. ಕೈ ಕೊಂಬೆಗಳನ್ನು ಆಯ ನೋಡಿ ಹಿಡಿಯುತ್ತಿತ್ತು ; ಕಾಲು ಕೊಂಬೆಯಿಂದ ಕೊಂಬೆಗೆ ಹತ್ತುತ್ತಿತ್ತು. ಆದರೆ ಮನಸ್ಸು ಭವಿಷ್ಯದ ಹಗಲುಗನಸುಗಳಲ್ಲಿ ಬೆರೆತಿತ್ತು. ಇನ್ನು ಮೂರು ನಾಲ್ಕು ಗಂಟೆಗಳಲ್ಲಿ ಮೊದಲಾಗುವ ಗಾಡಿ ಪ್ರಯಾಣದ ಚಿತ್ರಗಳು ಒಂದೊಂದಾಗಿ ಅವನ ಕಣ್ಣ ಮುಂದೆ ಸುಳಿದು ಹೋಗುತ್ತಿದ್ದವು. ಕೊಳೆವ ನೀರಿನ ಮಡುವಿನಂತಿದ್ದ ಜೀವನ ಈಗ ಹೊಸ ಮಳೆ ಬಂದು ಪ್ರವಾಹದಂತೆ ಹುಚ್ಚು ತೊರೆಯಾಗಿ ಮುಂದೋಡುತ್ತಿತ್ತು. ಮನಸ್ಸಿನಲ್ಲಿ ಮಲಗಿದ್ದ ಸುಮಾರು ನೂರಾರು ಹಕ್ಕಿಗಳು ಈಗತಾನೇ ಎಚ್ಚತ್ತು ಚಿಲಿಪಿಲಿ ಎನ್ನುತ್ತಿದ್ದುವು. ನೀಲಾಕಾಶದ ಕರೆಗೆ ಮಾರುಹೋಗಿ ರೆಕ್ಕೆ ಬಡಿಯುತ್ತಿದ್ದುವು. ಈ ಕೆಲಸ ಬೇಗ ಮುಗಿಸಿಬಿಡಬೇಕು ಎಂದುಕೊಂಡು ತಿಮ್ಮ ಒಂದು ಕೈಯಲ್ಲಿ ಕೊಂಬೆಯನ್ನು ಬಲವಾಗಿ ಹಿಡಿದುಕೊಂಡು ಇನ್ನೊಂದು ಕೈಯಿಂದ ಮಾವಿನ ಮಿಡಿ ತುಂಬಿದ್ದ ಚಿಕ್ಕ ಕೊಂಬೆಯನ್ನು ಅಲ್ಲಾಡಿಸಲು ಬಾಗಿದ. ತನ್ನ ಹಿಂದೆ ಏನಿದೆ ಎಂದಾಗಲೀ ತನ್ನ ಸುತ್ತಮುತ್ತನ್ನಾಗಲೀ ಅವನು ಗಮನಿಸಿರಲಿಲ್ಲ. ಅವನ ಹಿಂದುಗಡೆಯಲ್ಲೇ ಒಂದು ದೊಡ್ಡ ಚೌಳಿ ಮೊಟ್ಟೆ ಇತ್ತು. ಆ ಕೆಂಬಣ್ಣದ ದೊಡ್ಡ ಇರುವೆಗಳು ಕಚ್ಚಿದರೆ ಆಗುವ ಸುಖ ಕಚ್ಚಿಸಿಕೊಂಡವನೇ ಬಲ್ಲ. ಮರದ ತುದಿಯಲ್ಲಿ ಹಾಯಾಗಿದ್ದ ಚೌಳಿಗಳು ಈ ಮನುಷ್ಯನ ಧಾಳಿಯನ್ನು ಸಹಿಸಲಿಲ್ಲ. ತಿಮ್ಮನ ಮೈ ತಾಗಿದ್ದೇ ತಡ, ಆ ಚೌಳಿಗಳ ದೊಡ್ಡ ಸೇನೆಯೊಂದು ಗೂಡನ್ನು ಬಿಟ್ಟು ಸಾಲು ಸಾಲಾಗಿ ಹೊರಟು ತಿಮ್ಮನನ್ನು ತಾಗಿ ಮುತ್ತಿ ಮುಸುಕಿ ಓಡಾಡಿದುವು. ತಲೆ, ಎದೆ, ಕೈಕಾಲು, ಮುಖ - ಎಲ್ಲ ಅವುಗಳಿಂದ ತುಂಬಿ ಹೋಯಿತು. ಒಂದೆರಡು ಕಿವಿಯೊಳಕ್ಕೂ ನುಗ್ಗಿದುವು. ನೋವು, ನೋವು ; ಉರಿ, ಉರಿ. ತಾಳಲು ಸಾಧ್ಯವೇ ಇಲ್ಲ. ಒಂದು ಕ್ಷಣಕಾಲ ತಿಮ್ಮನಿಗೆ ದಿಗ್ಭ್ರಮೆ ಹಿಡಿದಂತೆಯೇ ಆಯಿತು. ಮೈಮರವೇ ಬಂತು. ಕೈ ಹಿಡಿತ ತಪ್ಪಿತು. ಕಾಲು ಜಾರಿತು–

ತಿಮ್ಮ ಕೆಳಗೆ ಬಿದ್ದಾಗ ಅವನಿಗೆ ಸ್ಮೃತಿ ಇರಲಿಲ್ಲ. ಕೊಂಬೆರೆಂಬೆಗಳಿಗೆ ತಾಗಿ ತಾಗಿ ಮೈ ತರಿದುಹೋಗಿತ್ತು. ಬಿದ್ದ ಏಟಿಗೆ ಅಂಗಾಂಗವೆಲ್ಲ ಜಜ್ಜಿಹೋಗಿತ್ತು. ತಲೆಯೊಡೆದು ದೇಹವೆಲ್ಲ ರಕ್ತದಿಂದ ರಣರಂಪವಾಗಿತ್ತು.

ಈ ದುರಂತವನ್ನು ಕಂಡು ಕೃಷ್ಣಪ್ಪನವರ ಹೆಂಡತಿ ತತ್ತರಿಸಿದರು. ಕೂಗಿಕೊಂಡರು, ಗಲಾಟೆ ನಡೆಯಿತು, ಕೃಷ್ಣಪ್ಪನವರು ಬಂದು ಕಂಡು ಹಾಗೇ ನೆಲದ ಮೇಲೆ ಕುಸಿದು ಕುಳಿತು ಈ ಅನಾಹುತವನ್ನು ಕಾಣಲಾರದೆ ಮುಖ ಮುಚ್ಚಿಕೊಂಡರು, ಜನ ನೆರೆದರು. ಅಯ್ಯೋ ಎಂದರು, ಅಪ್ಪಾ ಎಂದರು. ಏನು ಮಾಡುವುದು ? ಆದರೆ ತಿಮ್ಮನಿಗೆ ಇದಾವುದೂ ತಿಳಿಯದು, ಕೇಳಿಸದು. ಕೂಡಲೇ ಆಸ್ಪತ್ರೆಗೆ ಸಾಗಿಸಬೇಕೆಂದು ಯಾರೋ ಹೇಳಿದರು. ಆ ಕ್ಷಣವೇ ಗಾಡಿಯನ್ನು, ಅದೇ ಗಾಡಿಯನ್ನು ಕಟ್ಟಿ ತಿಮ್ಮನನ್ನು ಅದರಲ್ಲಿ ಮಲಗಿಸಿದರು. ಬಾಯಿ ಬಾಯಿ ಬಡಿದುಕೊಳ್ಳುತ್ತಾ ತಿಮ್ಮನ ಅಕ್ಕ ಸುಬ್ಬಿ ಅವನ ಪಕ್ಕದಲ್ಲಿ ಬಂದು ಕುಳಿತಳು. ಗಾಡಿ ಹೊರಟಿತು. ಗಾಡಿ ಹೊಡೆಯುವವನು ಮಾತ್ರ ತಿಮ್ಮನಲ್ಲ, ಸೋಮ. ಕೊರಳ ಗೆಜ್ಜೆ ಗಣ ಗಣ ಎಂದಿತು. ಚಕ್ರಗಳು ಕಿರಿಲಿದುವು. ಗಾಡಿ ಹಾಗೇ ಸಾಗಿತು. ನಾಲ್ಕು ಮೈಲಿ ದೂರ ಬೈಂದೂರಿನಲ್ಲಿ ಆಸ್ಪತ್ರೆ ಇದೆ. ಅಲ್ಲಿಗೆ ಬೇಗ, ಬೇಗ, ಬೇಗ ಎನ್ನುತ್ತ ಕೃಷ್ಣಪ್ಪನವರು ಗಾಡಿ ಹಿಂದೆಯೇ ಓಡಿದರು.

ತಿಮ್ಮ ಗಾಡಿಯಲ್ಲಿ ಕುಳಿತು ಹೋದ ಬೈಂದೂರಿಗೆ, ಕಿರಿಮಣೀಶ್ವರ ಮಾರಸ್ವಾಮಿಗಳನ್ನು ಹಾಯ್ದು ಗಂಗೊಳ್ಳಿಗಲ್ಲ. ಈ ರೀತಿ ಹೋಗಬೇಕೆಂದು ಅವನು ಎಂದೂ ಬಯಸಿದವನಲ್ಲ. ಆದರೆ ಹೋದವ ಮತ್ತೆ ಹಿಂದೆ ಬರಲಿಲ್ಲ. ಆಕಾಶದಲ್ಲಿ ಅವನು ದಿನವೂ ಕಾಣುತ್ತಿದ್ದ ಆ ಮೋಡದ ಗಾಡಿಗಳಲ್ಲಿ ಒಂದಾದರೂ ಅಲ್ಲಿ ಅವನಿಗೆ ದಕ್ಕಬಹುದೋ ? ಯಾರು ಬಲ್ಲರು ? ○○

# ಬಸವ ಕ್ರಾಂತಿಯ ಸೋಲು ಗೆಲುವು

ಡಾ॥ ಎಚ್. ಎಸ್. ಮಂಜುರಾಜ್

ಜಗತ್ತಿನಲ್ಲಿ ನಡೆದ ದೊಡ್ಡ ವಿಪ್ಲವಗಳಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಚಳವಳಿ ಹಲವು ದೃಷ್ಟಿಗಳಿಂದ ಮಹತ್ವದ್ದು. ವಿಚಾರವಾದಿ ಹಾಗೂ ಮಾನವತೆಯ ತತ್ವಜ್ಞಾನಿ ಗೌತಮಬುದ್ಧನ ತರುವಾಯ ಕಾಣಿಸಿಕೊಂಡ ಭಾರತದ ಶ್ರೇಷ್ಠ ಸಂತ ಬಸವಣ್ಣ ತನ್ನ ಹೆಸರು ಮಾತ್ರದಿಂದಲೇ ಒಂದು ಕಳಕಳಿಯ ಆವರಣವನ್ನು ನಿರ್ಮಿಸಿಬಿಟ್ಟಿದ್ದಾನೆ. ಹಾಗೆ ನೋಡಿದರೆ ಬಸವಣ್ಣನ ಬಗ್ಗೆಯಾಗಲಿ, ಒಟ್ಟಾರೆ ವಚನಾಂದೋಲನದ ಸಾಧನೆಯ ಬಗ್ಗೆಯಾಗಲಿ, ಶಿವಶರಣರ ಅಭೂತಪೂರ್ವ ಕ್ರಾಂತಿಯ ಬಗ್ಗೆಯಾಗಲಿ ಮಾತನಾಡುವುದು ಅರೆಬರೆ ಇತಿಹಾಸವನ್ನಿಟ್ಟುಕೊಂಡು ಕಣ್ಣಾರೆ ಕಂಡಂತೆ ವರ್ಣಿಸುವುದು ಈಗಂತೂ ತೀರಾ ಸುಲಭ ಹಾಗೂ ಸರಳವಾಗಿಬಿಟ್ಟಿದೆ. ಯಾವುದು ಪದೇಪದೇ ಚರ್ಚಿತಗೊಳ್ಳುವುದೋ ಅದು ಅಂತರಂಗದಲ್ಲಿ ಸುಲಭವಾಗಿರಲಿಕ್ಕಿಲ್ಲವೆಂಬ ಸತ್ಯ ನಮಗೀಗ ನಿಧಾನವಾಗಿಯಾದರೂ ಗೋಚರವಾಗಹತ್ತಿದೆ.

ಹನ್ನೆರಡನೆಯ ಶತಮಾನದಲ್ಲಿ ಸದ್ದುಗದ್ದಲವಿಲ್ಲದೇ ಕರ್ನಾಟಕದಲ್ಲಿ ಆಗಿಹೋದ ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಕ್ರಾಂತಿ ಭಾರತದಲ್ಲಿ ಹಿಂದೆಂದೂ ಆಗಿದ್ದಿಲ್ಲ. ಅಂಥದೇ ಆಂದೋಲನ ಈವರೆಗೂ ಆಗಲಿಲ್ಲ. ವಿಚಾರಗಳು ಆಚಾರಗಳಾಗಿ, ತತ್ವಸಿದ್ಧಾಂತಗಳು ಪ್ರಯೋಗಗಳಾಗಿ ಕಣ್ಮುಂದೆ ವಿಜೃಂಭಿಸಿದ ಕಾಲವದು. ಎಲ್ಲ ಹಂತಗಳಲ್ಲೂ ಶ್ರೀಸಾಮಾನ್ಯನೇ ಕೇಂದ್ರಬಿಂದುವಾಗಿ ಪ್ರಜ್ವಲಿಸಿದ ಐತಿಹಾಸಿಕ ಘಟನೆಯದು.

ಚಳವಳಿ ಎಂಬುದು ಮೂಲತಃ ರಾಜಕೀಯ, ಸಾಮಾಜಿಕ, ಧಾರ್ಮಿಕ, ಒಟ್ಟಾರೆ ಸಾಂಸ್ಕೃತಿಕ ವಲಯಗಳಿಗೆ ಸಂಬಂಧಿಸಿದ ಸಾಮೂಹಿಕ ಹೋರಾಟವನ್ನು ಸೂಚಿಸುವ ಶಬ್ದ. ಸಾಹಿತ್ಯವಾದರೋ ಏಕಾಂತದ ಧ್ಯಾನಸ್ಥ ಸ್ಥಿತಿಯಲ್ಲಿ ಸೃಷ್ಟಿಯಾಗುವಂಥದು. ೧೨ನೇ ಶತಮಾನದ ಶಿವಶರಣರು ವಿರುದ್ಧ ಧ್ರುವದಲ್ಲಿರುವ ಈ ಎರಡೂ ಪ್ರಕ್ರಿಯೆಗಳನ್ನು ಒಂದುಗೂಡಿಸುವಲ್ಲಿ ಸಾಕಷ್ಟು ಸಫಲರಾದರೆಂದೇ ಹೇಳಬೇಕು. ವಚನಸಾಹಿತ್ಯದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಪರಿಧಿಗಳನ್ನು ಹಿಗ್ಗಿಸುವ ಕಳಕಳಿಯ ಪ್ರಯತ್ನ ನಡೆದಿದೆ.

ಅದುವರೆಗಿನ ವೈದಿಕಶಾಹಿ, ರಾಜಶಾಹಿ ಹಾಗೂ ಪುರೋಹಿತಶಾಹಿ ದಬ್ಬಾಳಿಕೆಗಳನ್ನು ಮೆಟ್ಟಿನಿಂತು ತಮ್ಮದೇ ಆದ ವಿಶಿಷ್ಟ ಹಾಗೂ ವೈವಿಧ್ಯ ನೆಲೆಯ ಮಾನವತಾ ಪರಿಕರಗಳ ಮೂಲಕ ಹೊಸ ಆಲೋಚನೆಗಳನ್ನು ಹರಿಯಬಿಟ್ಟು ಶಿವಶರಣರು ವ್ಯವಸ್ಥೆಯ ನಾಡಿಮಿಡಿತಗಳನ್ನು ಅರಿತೇ ಕ್ರಾಂತಿಗೆ ಧುಮುಕಿದರು. ಬಸವ, ಅಲ್ಲಮರ ನೇತೃತ್ವದಲ್ಲಿ ಜರುಗಿದ ಶಿವಶರಣರ ಆಂದೋಲನ ಪಟ್ಟಭದ್ರ ಹಿತಾಸಕ್ತಿಗಳನ್ನು ಬಹುಬೇಗನೆ ಅಲ್ಲಾಡಿಸಿತು. ತತ್ಪರಿಣಾಮವಾಗಿ ಬಸವಾದಿ ಪ್ರಮಥರ ಕಾರ್ಯ ಚಟುವಟಿಕೆಗಳಿಗೆ ವ್ಯವಸ್ಥಿತ ಪಿತೂರಿ ಎದುರಾಯಿತು. ಈ ದೇಶದಲ್ಲಿ ಯಾವ ಕ್ರಾಂತಿ ತಾನೇ ಊರ್ಜಿತವಾಗಿದೆ ? ಮಾನವತಾವಾದಿ ಬಸವಣ್ಣ ಸಂಕುಚಿತ ದೃಷ್ಟಿಯ ಮತಧರ್ಮವೊಂದರ ಸ್ಥಾಪಕನೆನಿಸಿಬಿಟ್ಟ ! ಶ್ರೀಸಾಮಾನ್ಯನ ಪ್ರೀತಿಯ ಸ್ವತ್ತಾಗಿ ಬಸವಣ್ಣನಾಗಿದ್ದವನು ವಿಧಿಕರ್ಮಾಚರಣೆಗಳ ಬಂಧನಕ್ಕೊಳಗಾಗಿ ಬಸವೇಶ್ವರನಾದ. ದೇವರ ಅಸ್ತಿತ್ವದ ಬಗ್ಗೆ ಏನನ್ನೂ ಹೇಳಲು ಇಚ್ಛಿಸದ, ಮನುಷ್ಯನ ಸನ್ಮಾರ್ಗದ ಬದುಕಿಗೆ ದೇವರ ಅಸ್ತಿತ್ವದ ಪ್ರಶ್ನೆ ಗೌಣವೆಂದು



ಸಾರಿದ ಬುದ್ಧನೇ ಕೆಲ ಕಾಲಾನಂತರ ಅವನ ಶಿಷ್ಯರಿಂದ 'ಭಗವಾನ್ ಬುದ್ಧ', ಬುದ್ಧ ದೇವನಾದ. ಇತಿಹಾಸವು ಐತಿಹ್ಯವಾಗಿ, ಐತಿಹ್ಯವು ಪುರಾಣೀಕರಣಕ್ಕೊಳಗಾಗುವುದು ಭಾರತದ ಚೋದ್ಯ.

೧೨ನೆಯ ಶತಮಾನಕ್ಕಿಂತ ಹಿಂದಿನ ಭಾರತವಾಗಲಿ, ಕರ್ನಾಟಕವಾಗಲಿ ಹಿಂದೂ ಧರ್ಮದ ಅವೈಜ್ಞಾನಿಕ ಆಚರಣೆಗಳ, ಮಾನವತೆಯ ಸೆಲೆ ಕಾಣದ ಕಂದಾಚಾರಗಳ, ಯಜ್ಞಯಾಗಾದಿಗಳ ಹಿಂಸಾತ್ಮಕ ಪರಿಧಿಯ ಘೋರ ಕೂಪವಾಗಿತ್ತು. ಹಿಂದೂ ಧರ್ಮದ ಪುರೋಹಿತಶಾಹಿ ದಬ್ಬಾಳಿಕೆ ಅಸಹನೀಯವಾಗಿತ್ತು. ಜಾತಿವರ್ಗಗಳ ತಾರತಮ್ಯ, ಸ್ತ್ರೀ ಶೋಷಣೆ ಅವ್ಯಾಹತವಾಗಿ ಮುಂದುವರಿದಿತ್ತು. ಎಲ್ಲದಕ್ಕೂ ಪೂರ್ವಜನ್ಮಗಳ ಸಂಸ್ಕಾರ ಫಲವೇ ವಿವೇಚನೆಯ ಮಾನದಂಡವಾಗಿಬಿಟ್ಟಿತ್ತು. ಇಂತಹ ದುರಂತಗಳನ್ನು ಪ್ರತ್ಯಕ್ಷ ಕಂಡ ಬಸವಣ್ಣನು ವೈದಿಕ ಆಚರಣೆಗಳ ಕುರುಹಾದ ಅಸಮಾನತೆ, ಪ್ರತ್ಯೇಕತೆಗಳ ದ್ಯೋತಕವೆನಿಸಿದ ಯಜ್ಞೋಪವೀತವನ್ನು ಕಿತ್ತೆಸೆದು ಸಾಮಾನ್ಯ ಮನುಷ್ಯನಾದ. ಆಶ್ಚರ್ಯವೆಂದರೆ ಇಂದಿಗೂ ಸಾಧ್ಯವಾಗದ ಅಂಥ ಬೃಹತ್ ಆಂದೋಲನವನ್ನು ಬಸವಣ್ಣ ತನ್ನ ವ್ಯಕ್ತಿತ್ವ ಮಾತ್ರದಿಂದಲೇ ಸಾಧಿಸಿದ್ದು ಜಗತ್ತಿನ ನಿಜವಾದ ಪವಾಡವೇ ಸರಿ. ಇಂಥಲ್ಲೆಲ್ಲ ಬಸವಣ್ಣ ಜಾಗೃತ ಪ್ರಜ್ಞೆಯಾಗಿ ಕೆಲಸ ನಿರ್ವಹಿಸಿದ್ದನ್ನು ಕಾಣಬಹುದು.

ಎಂಟುನೂರು ವರುಷಗಳು ಸಂದರೂ ವಚನಕಾರರ ಚಳವಳಿ ಈ ಹೊತ್ತಿಗೂ ಪ್ರಸ್ತುತ ಚರ್ಚೆಗೆ ಒಳಗಾಗಿರುವುದೇ ಬಸವಕ್ರಾಂತಿಯ ಐತಿಹಾಸಿಕ ಗೆಲುವಿನ ಸಂಕೇತ. ಸಮಾಜದ ಅತ್ಯಂತ 'ಕೆಳಸ್ತರ' ಎನಿಸಿಕೊಂಡಿದ್ದ ಜನರ ಮನಸ್ಸನ್ನು ಬಸವಣ್ಣ ಗೆದ್ದು, ತನ್ನ ಮಹದಾಂದೋಲನದಲ್ಲಿ ಸೇರಿಸಿಕೊಂಡಿದ್ದು, ಸಮಾನ ಸ್ಥಾನಮಾನ ನೀಡಿದ್ದು, ಬಸವ ಚಳವಳಿಯ ತಕ್ಷಣದ ಗೆಲುವೇ ಆಗಿತ್ತು. ಯಾವ ಮತಧರ್ಮಗಳೂ ಹೆಣ್ಣಿಗೆ ಸಮಾನ ಸ್ಥಾನಮಾನ ನೀಡದ ಕಾಲದಲ್ಲಿ ಬಸವಣ್ಣ ಸ್ತ್ರೀಯರ ಆತ್ಮಗೌರವಕ್ಕೆ ಮಾನ್ಯತೆ ಕೊಟ್ಟಿದ್ದು ಬಸವ ಚಳವಳಿಯ ಗಂಭೀರವಾದ ಸಾಧನೆ. ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರು ಕವಿಯಿತ್ರಿಗಳಾಗಿ ತಂತಮ್ಮ ಶತಮಾನದ ದುಮ್ಮಾನಗಳನ್ನು ಅಭಿವ್ಯಕ್ತಿಸಲು ಬಸವಣ್ಣ ವೇದಿಕೆ ನಿರ್ಮಿಸಿದ್ದು ಸ್ವಲ್ಪದ ಗೆಲುವಲ್ಲ. ಬಸವನಂತೆಯೇ ಬದುಕಿ ಬಾಳಿದ ಅಲ್ಪ ಭೂಮಗಳ ಪ್ರಚ್ಛನ್ನ ಸ್ವರೂಪಗಳನ್ನು ಕಾವ್ಯಾತ್ಮಕವಾಗಿ, ತಾತ್ವಿಕವಾಗಿ ಅಭಿವ್ಯಕ್ತಿಸಿದ ಹಲವು ಮಹನೀಯರು, ಮಹಿಳೆಯರು ಬಸವಪ್ರಣೀತ ಕ್ರಾಂತಿಗೆ ಒತ್ತಾಸೆಯಾಗಿ ನಿಂತರೆಂಬುದನ್ನು ಮರೆಯಬಾರದು.

ಕಾಲದ ಅಂತರ ಎಂತಹ ಗಂಭೀರತೆಯನ್ನೂ ಸಡಿಲಿಸುತ್ತದೆ, ತೀಕ್ಷ್ಣತೆಯನ್ನು ನುಂಗಿಬಿಡುತ್ತದೆ. ಅಂತಹುದರಲ್ಲಿ ಎಂಟುನೂರು ವರ್ಷಗಳ ಹಿಂದಿನ ಶರಣ ಚಳುವಳಿ ಈ ಹೊತ್ತು ಎಲ್ಲ ರೀತಿಯ ಆಲೋಚನೆ, ವಿವೇಚನೆಗಳ ಹಿಂದಿನ ಪ್ರಖರ ತತ್ವಗಳನ್ನು ಪ್ರಕಾಶಪಡಿಸುತ್ತದೆಂಬುದೇ ಅದರ ಗೆಲುವಿನ ಸಂಕೇತವಲ್ಲವೇ ?

ಎಷ್ಟೆಲ್ಲ ಮಹನೀಯರು ಬಂದು ಹೋದರು ! ಮಾನವತೆಯ ಏನೆಲ್ಲ ಸಿದ್ಧಾಂತಗಳನ್ನು ಪ್ರಚುರಪಡಿಸಿದರು. ತಮ್ಮ ಜೀವಿತ ಕಾಲದಲ್ಲಿಯೇ ಪ್ರಯೋಗಕ್ಕೆ ಒಳಪಡಿಸಿದರು ! ಆದರೂ ದೇಶ, ಸಮಾಜಗಳು ಜಾತಿ ವರ್ಗಗಳ ಭೂತದಿಂದ ಪಾರಾಗಿ ಮೇಲೆದ್ದು ಬರಲೇ ಇಲ್ಲ. ಇವತ್ತಿನ ಜಾತೀಯತೆಯ ತಾಂಡವ ನೃತ್ಯವೇ ಬಸವ ಚಳವಳಿಯ ಸೋಲುಗೆಲುವಿನ ಪ್ರಮಾಣವನ್ನು ಹೇಳಿಬಿಡುತ್ತದೆ. ಬಸವಣ್ಣ ಮತ್ತಿತರ ಶಿವಶರಣರು ಮಾಡಿದ್ದಾದರೂ ಏನು ? ಧಾರ್ಮಿಕ, ಆಧ್ಯಾತ್ಮಿಕ ತಳಹದಿಯ ವಿಶ್ವಧರ್ಮ ನಿರ್ಮಾಣ.

ಕೊಳೆತು ಬಗ್ಗಡವಾಗಿರುವ ಸರೋವರದ ನೀರಿನ ಮೇಲ್ಮೈಯನ್ನು ಶುಚಿಗೊಳಿಸಿದರೆ ಸಾಕೆ ? 'ನೂರಾರು ಭಾವದ ಬಾವಿ, ಎತ್ತಿಕೋ ನಿನಗೆ ಬೇಕಾದಷ್ಟು ಸಿಹಿನೀರ, ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ, ನಮಗೆ ಬೇಕಾದದ್ದು ದಾಹ ಪರಿಹಾರ' ಎಂಬ (ಜಿ. ಎಸ್. ಎಸ್.) ಕವಿವಾಣಿ ಇಂಥಲ್ಲಿ ನಮ್ಮನ್ನು ಕೈಹಿಡಿದು ನಡೆಸುತ್ತದೆ. ದಾಹ ಪರಿಹಾರಕ್ಕಾಗಿ ಬಸವಣ್ಣ ತೋರಿಸಿಕೊಟ್ಟ ಸಿಹಿನೀರ ಮಾರ್ಗ ಕಲ್ಲುಮುಳ್ಳುಗಳಿಂದ ಕೂಡಿದ್ದು. ಬಸವಾದಿ ಶರಣರು ಸುರಿಸಿದ ಬೆವರ ಹನಿ, ನೆಲವನ್ನು ತೋಯಿಸಿದ ರಕ್ತದ ಬಿಂದು ಅತ್ಯಲ್ಪ ಕಾಲದಲ್ಲೇ ಪರಿಮಳದ ಪನ್ನೀರಾದದ್ದು ಬಸವ ಕ್ರಾಂತಿಯ ಗೆಲುವಲ್ಲವೇ ?

ಪುರೋಹಿತಶಾಹಿ ವೈದಿಕ ಪ್ರಜ್ಞೆಯನ್ನು ಯಾವ ಮರ್ಜಿಯೂ ಇಲ್ಲದೆ ನೇರವಾಗಿ ತಿರಸ್ಕರಿಸಿದ ಶಿವಶರಣರು ಪರ್ಯಾಯವನ್ನು ಕಟ್ಟತೊಡಗಿದರು. ಯಾವುದೇ ನಿರಾಕರಣೆ ಕೇವಲ ನೇತ್ಯಾತ್ಮಕವಾದರೆ, ಖಂಡನೆಗಾಗಿ ಖಂಡನೆ ಎನಿಸಿದರೆ ಅದು ಯಾವತ್ತಿಗೂ ಮೌಲಿಕವಾಗುವುದೇ ಇಲ್ಲ. ತಮ್ಮ ಟೀಕೆ ವಿಮರ್ಶೆಗಳನ್ನು

ರಚನಾತ್ಮಕವಾಗಿಸಿದವರ ಪೈಕಿ ಬಹುಶಃ ಶಿವಶರಣರೇ ಮೊದಲಿಗರಿರಬೇಕು. ಅಂದರೆ ಬಸವಣ್ಣನು ಕಟ್ಟಬಯಸಿದ ಸಮಾಜ ವಿಶ್ವಾತ್ಮಕ ನೆಲೆಯದು. ಮನುಷ್ಯನ ಕ್ಷುದ್ರತೆ, ಕುಬ್ಜತೆಗಳೊಟ್ಟಿಗೇ ಅವನ ಕಾರುಣ್ಯಪೂರಿತ ಪ್ರೇಮವನ್ನು ಅನ್ವೇಷಿಸಿ, ಬದುಕಿಸಿ ಬೆಳಕಾಗಿಸಲು ಪ್ರಯತ್ನಪಟ್ಟವರು ಶಿವಶರಣರು. ಅದುವರೆಗಿನ ಯಾವ ಧರ್ಮವೂ ಇಂತಹ 'ಪಾಪಮುಂ ಪುಣ್ಯಮುಖಿ' ಎಂಬ ತತ್ವವನ್ನು ಅಳವಡಿಸಿಕೊಂಡಂತೆ ಅನಿಸದು. ಶತಶತಮಾನಗಳಿಂದ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವಿಲ್ಲದೆ ಯಾತನೆಪಡುತ್ತಿದ್ದ ಶೋಷಿತ ವರ್ಗಕ್ಕೆ ಮನ್ನಣೆಯ ಮೊದಲ ಮಣೆ ಹಾಕಿಕೊಟ್ಟ ಬಸವಣ್ಣ ತನ್ನ ಮೇಲರಿಮೆಯನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ಅದರ ಬದಲಿಗೆ 'ಎನಗಿಂತ ಕಿರಿಯರಿಲ್ಲ' ಎಂದನು, 'ಮಾದಾರ ಚೆನ್ನಯ್ಯನ ಮನೆಯ ಮಗ ನಾನು' ಎಂದನು. ಕೀಳರಿಮೆಯಿಂದ ತಮಗೆ ತಾವೇ ಕುಬ್ಜತೆಯ ಭಾವನೆಯಲ್ಲಿ ಬೇಯುತ್ತಿದ್ದ ವರ್ಗಕ್ಕೆ ಇಂಥ ಅಂತಃಕರಣ ಸಂಜೀವಿನಿಯಾಗಿ ಕಂಡಿತು. ಪರಿಣಾಮವಾಗಿ ಅಸಂಖ್ಯಾತ ನಿಮ್ನವರ್ಗವು ಬಸವಪ್ರಣೀತ ವೇದಿಕೆಗೆ ವಲಸೆ ಬಂದಿತು.

ಇಂಥ ಜನಪರ ಚಳವಳಿ ಧಾರ್ಮಿಕತೆಯನ್ನು ಅದುವರೆಗಿನ ಅರ್ಥದಲ್ಲಿ ತೆಗೆದುಕೊಳ್ಳದೆ ಇಹಪರಗಳ ಐಕ್ಯತೆಯೆಂಬುದಾಗಿ ಅರ್ಥೈಸಿತು. ಇದರಿಂದ ನೀತಿ ಮತ್ತು ಮೌಲ್ಯಪ್ರಜ್ಞೆಗಳು ವಾಸ್ತವದ ನೆಲೆಗಟ್ಟಿನ ಭದ್ರತೆಯಲ್ಲಿ ಜತನಗೊಂಡವು, ಮಾತ್ರವಲ್ಲ, ವಿಚಾರವಾದಿ ದೃಷ್ಟಿಕೋನದಲ್ಲೂ ಶಿವಶರಣರ ಆಂದೋಲನ ಸಮ್ಮತವಾಯಿತು. 'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ'ವೆಂಬ ವಾಸ್ತವತೆ, 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂಬ' ಹೇಳಿಕೆಯ ಮೂಲಕ ಹೊರಡುವ ಇಹದ ಪ್ರಮುಖತೆ - ಬಸವಕ್ರಾಂತಿಯ ಮೇರು ಸಾಧನೆಗಳು. ಮೋಕ್ಷಕ್ಕಾಗಿ ಹಂಬಲಿಸುವ ವೈದಿಕಶಾಹಿ ಧೋರಣೆ ಎಂಥ ಸ್ವಾರ್ಥಪರವಾದದ್ದೆಂಬುದನ್ನು ತಿಳಿಯಬೇಕಾದರೆ ವಚನ ಚಳವಳಿಯನ್ನು ಅಧ್ಯಯನ ಮಾಡಬೇಕು. 'ತನಗೇ ಮೋಕ್ಷ ಬೇಕು' ಎಂಬುದೇ ಸ್ವಾರ್ಥಪರತೆಯ ತುರೀಯಾವಸ್ಥೆ. ಶರಣರ ದೃಷ್ಟಿಯಲ್ಲಿ ಮೋಕ್ಷವೆಂದರೆ ಇಹದ ಕ್ಷುದ್ರತನಗಳ ಬಿಡುಗಡೆ : ತನ್ನ ಕಾಯವ ಕಾಯುವ ಆತ್ಮದ ಪ್ರಚ್ಛನ್ನತೆ. 'ಮಂಡೆ ಬೋಳಾದಡೇನು ಮನ ಬೋಳಾದಡಲ್ಲದೆ' ಎಂಬ ಮತ್ತು 'ನುಡಿಪಾಕವಾದಡೇನು ಮನಪಾಕವಾಗದನ್ನಕ್ಕರ' ಎಂಬ ಕಾಣ್ಕೆಗಳೇ ಹಿಂದೂ ಧರ್ಮದ ಎಲ್ಲ ಅರ್ಥಹೀನ ಕಂದಾಚಾರಗಳಿಗೆ ಒಡ್ಡಿದ ಸವಾಲಾಗಿದೆ. ಬುದ್ಧನ ತರುವಾಯ ಕಾಣಸಿಕೊಂಡ ಬಸವ ಕಣ್ಣಿಗೆ ಸ್ಪಷ್ಟವಾಗಿ ಗೋಚರವಾಗುವ ಸತ್ಯಾಂಶಗಳನ್ನು ನಿರ್ಭಿಡೆಯಿಂದ ಹೇಳಿದನು. ಈ ದಾಕ್ಷಿಣ್ಯರಹಿತ ಸಂಸ್ಕಾರವೇ ಚಳವಳಿಯು ಕ್ರಾಂತಿಯ ಸೋಪಾನವೇರಲು ಸಾಧ್ಯಮಾಡಿಕೊಟ್ಟಿತು. ಎಂಥ ಕೊಳೆಗೇರಿಯಲ್ಲೂ ನಂದನವನ ನಿರ್ಮಿಸಬಹುದೆಂಬ ಶರಣ ತತ್ವವು ಅದನ್ನು ತೋರಿಸಿಕೊಟ್ಟಿತು. ಆದರೆ ಆ ನಂದನವನವನ್ನು ಉಳಿಸಿ, ಬೆಳೆಸುವ ಯೋಗ್ಯತೆ ನಮ್ಮದಾಗಲಿಲ್ಲ. ಧರ್ಮಗಳೆಲ್ಲ ಮತಗಳಾಗಿ, ಜಾತಿಗಳಾಗಿ ವಿಜೃಂಭಿಸುತ್ತಿದ್ದ ಕಾಲದಲ್ಲಿ ಮತಧರ್ಮವನ್ನು ಒಡೆದು ಮತವೇ ಬೇರೆ, ಧರ್ಮವೇ ಬೇರೆ, ಧರ್ಮ ಆಧ್ಯಾತ್ಮಕ್ಕೆ ಸೋಪಾನವೆಂಬುದಾಗಿ ಆಡುನುಡಿಯಲ್ಲಿ ಸರಳವಾಗಿ ನುಡಿದ ಕೀರ್ತಿ ಶರಣರದು. ಧರ್ಮಕ್ಕೆ ಯಾವುದೇ ಕಟ್ಟುಕಟ್ಟಳೆಗಳಿಲ್ಲ, ಆಚಾರವೇ ಸ್ವರ್ಗ, ಅನಾಚಾರವೇ ನರಕ ಎಂದು ಹೇಳುತ್ತ ಸಮಾಜದ ಹಿತಕ್ಕೆ ಧಕ್ಕೆ ತರದ ಬಾಳ್ವೆಯೇ ಶ್ರೇಷ್ಠ ಬದುಕು, ಅದುವೇ ವ್ಯಕ್ತಿ ಸಮಾಜಕ್ಕೆ ನೀಡುವ ಕನಿಷ್ಠ ಕೊಡುಗೆ ಎಂದು ಹೇಳಿದ ಆಂದೋಲನ ಬಸವಕ್ರಾಂತಿಯೊಂದೇ. ಬುದ್ಧನ ಅಹಿಂಸೆಯ ಪರಿಕಲ್ಪನೆಯೊಂದಿಗೆ ಕಾಯಕತತ್ವ, ಪ್ರಸಾದ ಸಿದ್ಧಾಂತ, ಜೀವ ತಾರುಣ್ಯಗಳು ಸೇರಿಕೊಂಡು ಬಸವತತ್ವವಾಗಿ ಪರಿಣಮಿಸಿದವು. ಒಂದು ರೀತಿಯಲ್ಲಿ ಬುದ್ಧನ ತತ್ವಸಿದ್ಧಾಂತಗಳ ಸಾಮಾಜಿಕ ಸ್ವರೂಪವೇ ಬಸವತತ್ವವೆನಿಸಿಕೊಂಡಿತು. 'ದಯವೇ ಧರ್ಮದ ಮೂಲವಯ್ಯ, ದಯವಿಲ್ಲದ ಧರ್ಮ ಅದೇವುದಯ್ಯಾ' ಎನ್ನುವಲ್ಲಿ ಇರುವ ನಿಷ್ಠುರತೆ ಮತ್ತು ಪ್ರಾಮಾಣಿಕ ಕಳಕಳಿ ಎಂಥ ಕಟುಕ ಹೃದಯವನ್ನೂ ಕರಗಿಸಬಲ್ಲದು.

'ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ' ಎಂಬಲ್ಲಿ ಅಂದಿನಿಂದಲೂ ಬೆಳೆದುಬಂದ ಮುಗ್ಧರ ಶೋಷಣೆಯ ಪ್ರಬಲ ಅಸ್ತ್ರ ಜ್ಯೋತಿಷ್ಯವನ್ನು ಅಲ್ಲಗಳೆದರು.

*ಬಸವ ಕ್ರಾಂತಿ ಎಂದಾಕ್ಷಣ ಕ್ರಾಂತಿಯ ಸರ್ವಸ್ವವೂ ಬಸವಣ್ಣನೇ, ಬಸವಣ್ಣನೊಬ್ಬನೇ ನೇತಾರನೆಂದುಕೊಳ್ಳಬೇಕಿಲ್ಲ. ಶರಣ ಚಳವಳಿಯ ಉಲ್ಲೇಖ ಬಂದಾಗಲೆಲ್ಲ ಬಸವಣ್ಣನ ಸಾಧನೆಸಿದ್ಧಿಗಳನ್ನಷ್ಟೇ ಹೊಗಳಿ ಕೈ ತೊಳೆದುಕೊಳ್ಳುವ ಸಂಪ್ರದಾಯ ನಮ್ಮಲ್ಲಿದೆ. ದಲಿತವರ್ಗದ ಶರಣರ ಅಧ್ಯಯನ ಹೆಚ್ಚಾದಂತೆ, ಅವರ ವಚನಗಳ ನಾನಾರ್ಥಗಳು ವ್ಯಾಖ್ಯಾನಗೊಂಡಂತೆ ಬಸವಣ್ಣನ ಪಾತ್ರ ಸಿಕ್ಕುಗಳಿಗೆ ಒಡ್ಡಿಕೊಳ್ಳುತ್ತದೆ.*

ವೈದಿಕಧರ್ಮದ ಸನ್ಯಾಸತ್ವದ ವೈರಾಗ್ಯ ಕಲ್ಪನೆಯನ್ನೂ ಅವರು ಒಪ್ಪಿಕೊಳ್ಳಲಿಲ್ಲ. ಈ ವಿಚಾರದಲ್ಲಿ ಹಿಂದೂ, ಬೌದ್ಧ, ಜೈನಧರ್ಮಗಳ ತತ್ವವನ್ನು ಶರಣಚಿಂತನೆ ಖಂಡತುಂಡವಾಗಿ ಖಂಡಿಸಿ ಸಾಂಸಾರಿಕ ಸತಿಪತಿ ಭಕ್ತಿಯ ಜೀವನ ಪ್ರೀತಿಯನ್ನು ಮೆರೆಯಿತು.

'ದೇಹವೇ ದೇಗುಲ', 'ಕಲ್ಲ ಮನೆಯ ಮಾಡಿ ಕಲ್ಲ ದೇವರ, ಆ ಕಲ್ಲು ಕಲ್ಲ ಕಡೆದರೆ ಆ ದೇವರೆತ್ತ ಹೋದರೋ ?' ಎಂಬಿತ್ಯಾದಿ ಚಿಂತನೆಗಳ ಮೂಲಕ ದೇವಾಲಯ ಸಂಸ್ಕೃತಿಗೆ ಶರಣಚಿಂತನೆ ತಡೆಹಾಕುತ್ತದೆ. ಆತ್ಮಸಾಕ್ಷಿಗೆ ಅದು ಅಪರಿಮಿತ ಮೌಲ್ಯ ನೀಡಿತು. 'ವೇದವೆಂಬುದು ಓದಿನ ಮಾತು..... ಭಕ್ತಿಯೆಂಬುದು ತೋರಿ ಉಂಬ ಲಾಭ' ಎಂದ ಶರಣ ಚಿಂತನೆ ಆ ಹೊತ್ತಿಗೇ ಎಷ್ಟೊಂದು ಕ್ರಾಂತಿಕಾರಕವಾಗಿತ್ತೆಂಬುದನ್ನು ಊಹಿಸಿಕೊಳ್ಳಬೇಕು. ''ಚಳವಳಿ ವೈಯಕ್ತಿಕ ಜರೂರಿನ ಫಲವೋ ಅಥವಾ ಐತಿಹಾಸಿಕ ಅನಿವಾರ್ಯತೆಯೋ ? ಈ ಪ್ರಶ್ನೆಗೆ ಸರಳವಾದ ನೇರವಾದ ಉತ್ತರ ಸಾಧ್ಯವಿಲ್ಲ. ಯಾವುದೇ ಚಳವಳಿಯ ಮೂಲದಲ್ಲಿ ವೈಯಕ್ತಿಕ ಜರೂರು ಇದ್ದೇ ಇರುತ್ತದೆ..... ಆದರೆ ಆ ವೈಯಕ್ತಿಕ ಒತ್ತಡಕ್ಕೆ ಸಾಮಾಜಿಕ ಸಂದರ್ಭದಲ್ಲಿ ಪೋಷಕಾಂಶಗಳು ದೊರಕದೇ ಇದ್ದರೆ ಅದೊಂದು ದಾಖಲೆಯಾಗಿ ಮಾತ್ರ ನಿಲ್ಲುತ್ತದೆ. ಹಾಗಲ್ಲದೆ ಸಾಮಾಜಿಕ ಸಂದರ್ಭವೂ ಅದಕ್ಕೆ ಪೂರಕವಾಗಿದ್ದರೆ ಆಗ ಅದು ಚಳವಳಿಯ ರೂಪ ಪಡೆದು ಬದಲಾವಣೆಗೆ ಕಾರಣವಾಗುತ್ತದೆ.'' (ನರಹಳ್ಳಿ ಬಾಲಸುಬ್ರಹ್ಮಣ್ಯ : ಕನ್ನಡ ಸಾಹಿತ್ಯ ಸಂದರ್ಭ, ೧೯೯೦). ಬಸವಕ್ರಾಂತಿ ಬಹು ಸಂಸ್ಕೃತಿಗಳ ನೆಲೆಯಲ್ಲಿ ಆದದ್ದು. ಶರಣ ಚಳವಳಿಯ ಉಪೋತ್ಪನ್ನವಾಗಿರುವ, ಆದರೆ ಕ್ರಾಂತಿಯ ಬಹುಮೂಲ್ಯ ಕೊಡುಗೆಯಾಗಿರುವ ಶರಣಸಾಹಿತ್ಯ ರಚನೆಯಲ್ಲಿ ಭಾಗವಹಿಸಿದವರ ಹೆಸರು, ಹೆಸರಿನೊಂದಿಗೇ ಲಗತ್ತಾಗಿರುವ ವೃತ್ತಿ, ಕುಲ, ಸಮರ್ಪಿಸಿಕೊಂಡ ಇಷ್ಟ ದೈವದ ಅಂಕಿತ ಇವೆಲ್ಲವೂ ಬಹುಸಂಸ್ಕೃತಿಗಳ ವಿವಿಧತೆಗಳನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ನಾಲ್ಕೆಂಟು ಮನಸ್ಸುಗಳು ಕಲೆತ ಕಡೆ ಭಿನ್ನಮತ ಸಹಜ. ಆದರೆ ಸಾವಿರಾರು ಶರಣರು ಶರಣರಾಗಿದ್ದುಕೊಂಡೇ ಒಮ್ಮತದ ಪ್ರಣಾಳಿಕೆಯನ್ನೊಪ್ಪಿ ಪರಿವರ್ತನೆಯ ಹಾದಿಯಲ್ಲಿ ಬಹುದೂರ ನಡೆದದ್ದು ಮಾತ್ರ ಜಗತ್ತಿನ ಅತಿದೊಡ್ಡ ಸೋಜಿಗ. ಚಳವಳಿಯ ನೇತೃತ್ವ, ಮಾರ್ಗದರ್ಶನ, ಮತ್ತವರ ವ್ಯಕ್ತಿತ್ವದ ವರ್ಚಸ್ಸು ಅಂತಹ ಸಾಮುದಾಯಿಕ ಆರೋಗ್ಯವನ್ನು ಒಂದಷ್ಟು ಕಾಲ ಕಾಪಾಡಲು ಸಾಧ್ಯವಾಯಿತು. ಅಸ್ಪೃಶ್ಯತೆಯ ನಿವಾರಣೆ ಮಾತ್ರವಲ್ಲ, ಅಂತಹ ಕೀಳರಿಮೆಯ ತನುಮನಗಳನ್ನು ಗೌರವದ ನೆಲೆಗೆ ತಂದು ಸಮಾನತೆಯ ಸ್ಥಾನಕ್ಕೆ ಸರಿದೂಗಿಸಿದ್ದು ಸ್ವಲ್ಪದ ಸಾಹಸವೇನಲ್ಲ. ಅಸ್ಪೃಶ್ಯತೆಯ ನಿವಾರಣೆ ಎಷ್ಟು ಕಷ್ಟವೋ ಕೀಳರಿಮೆಯನ್ನು ಹೋಗಲಾಡಿಸುವುದು ಅಷ್ಟೇ ಕಷ್ಟ. ಇಂತಹ ಸವಾಲಿನಲ್ಲಿ ಬಸವಾದಿ ಪ್ರಮಥರು ಗೆಲುವು ಸಾಧಿಸಿದರು. ವಿಧವಾ ವಿವಾಹ, ಅಂತರ್ಜಾತಿ ವಿವಾಹಗಳು ಈ ಹೊತ್ತೂ ಕೂಡ ಅನೇಕ ಅಡೆತಡೆಗಳಿಂದಾಗಿ ವಿಚಾರವಂತ ಪ್ರಜ್ಞೆಗೆ ಸವಾಲಾಗಿ ನಿಂತಿವೆ. ಆ ಕಾಲದಲ್ಲಿ ಇದನ್ನು ಸಾಧ್ಯವಾಗಿಸಿದ ಶರಣಾಂದೋಲನ ಸಹಜವಾಗಿಯೇ ಉದ್ವಿಗ್ನ ಪರಿಸ್ಥಿತಿಗೆ ಒಳಗಾಗಬೇಕಾಯಿತು. ಎಲ್ಲ ವೃತ್ತಿಗಳನ್ನೂ ಸಮಾನ ಗೌರವದಲ್ಲಿ ಕಾಣುವ ಔದಾರ್ಯ ಶರಣರ ಚಿಂತನೆಯ ಮತ್ತೊಂದು ಮಗ್ಗುಲು. ಸಂಸಾರ ನಿಷ್ಠೆ, ಸತಿಪತಿ ಭಕ್ತಿ, ಇಷ್ಟ ಲಿಂಗಕ್ಕೆ ಪುರಸ್ಕಾರ, ಸಹಭೋಜನ, ಪ್ರಸಾದ ತತ್ವ, ಕಾಯಕ ಸಿದ್ಧಾಂತ, ಸಂಪತ್ತಿನ ಸಂಗ್ರಹ ವಿರೋಧ - ಇವೆಲ್ಲವೂ ಕೇವಲ ಸುಧಾರಣಾ ನೆಲೆಯ ಭಾವನಾತ್ಮಕ ಅಂಶಗಳಷ್ಟೇ ಎನ್ನುವುದು ಎಷ್ಟು ಸರಿ ? ಸಾಮಾಜಿಕ, ಆರ್ಥಿಕ, ರಾಜಕೀಯದ ಪ್ರಬಲ ಅಸ್ತ್ರಗಳಾಗಿ, ಯೋಜನೆಗಳಾಗಿ ಇವು ಕಾಣಿಸಿಕೊಳ್ಳುತ್ತವೆ. 'ಕರ್ಮಣ್ಯೇ ವಾಧಿಕಾರಸ್ತೇ....' ಎಂಬುದಕ್ಕಿಂತ 'ಕಾಯಕದಲ್ಲಿ ನಿರತನಾದರೆ ಗುರುಲಿಂಗವಾದರೂ ಮರೆಯಬೇಕು' ಎಂಬುದು ಹೆಚ್ಚು ಮೌಲಿಕವಾದ ಆಲೋಚನೆ. ಅಕ್ಕ, ಮುಕ್ತಾಯಕ್ಕ, ಕೆಳ ಎನಿಸಿಕೊಂಡ ವರ್ಗದಿಂದ ಬಂದ ಹಲವು ವಚನಕಾರ್ತಿಯರು - ಇವರೆಲ್ಲರ ಉವಾಚಗಳು ಇಂದಿನ ಸ್ತ್ರೀವಾದಿ ಸಂಹಿತೆಯ ಬೇರೆಬೇರೆ ನೆಲೆಗಳೇ ಆಗಿವೆ. 'ಶರಣಸತಿ ಲಿಂಗಪತಿ'ಯಂಥ ಭಾವನಾ ನಿಷ್ಠೆಯಂತೂ ಸ್ತ್ರೀ ಶಕ್ತಿಗೆ ನೀಡಿದ ಅಪ್ರತಿಮ ಗೌರವವೇ ಆಗಿದೆ.

ಕರ್ಮಲತೆಯಂತಿರ್ದ ಜನಿವಾರವನ್ನು ಕಳಚಿ ಬಿಸುಟು ಬಂದ ಬಸವಣ್ಣ 'ಶಿವಪಾರಮ್ಯ'ವನ್ನು ಮತ್ತೆ ಎತ್ತಿ ಹಿಡಿಯುತ್ತಾನೆ. ಅಲ್ಲಮನು ಜ್ಞಾನಯೋಗಿ, ಬಸವಣ್ಣನು ಭಕ್ತಯೋಗಿ, ಸಿದ್ಧರಾಮನು ಕರ್ಮಯೋಗಿ, ಎಂದು ಹೇಳುತ್ತಾ ಅವರವರ ಸ್ಥಾನಮಾನಗಳನ್ನು ನಿರ್ವಚಿಸಿದ್ದೇವೆ. ಶೂನ್ಯ ಸಿಂಹಾಸನಾಧಿಪತಿ ಅಲ್ಲಮನೇ ಹೊರತು

ಬಸವಣ್ಣನಲ್ಲ, ಅಲ್ಲಮನಾದಿಯಾಗಿ ಎಲ್ಲರೂ ಶೋಷಿತ ಸಮುದಾಯದಿಂದ ಬಂದವರು.

'ಲಾಂಛನಕ್ಕೆ ಶರಣೆಂಬೆ' ಎನ್ನುತ ಇಷ್ಟಲಿಂಗ ಕಟ್ಟಿಕೊಂಡವರು ಮಾತ್ರ ಭಕ್ತರು, ಉಳಿದವರು ಭಕ್ತರಲ್ಲ, ಭವಿಗಳು ಎಂದು ದೂರುವ 'ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ' ಸಂಕುಚಿತ ಆಲೋಚನೆಗಳನ್ನು ಏನೆಂದು ಕರೆಯುವುದು ? ಅಂಬಿಗರ ಚೌಡಯ್ಯ, ಹೆಂಡದ ಮಾರಯ್ಯ, ತುರುಗಾಹಿ ರಾಮಣ್ಣ, ಮಾದರ ದೂಡಯ್ಯ, ಒಕ್ಕಲಿಗ ಮುದ್ದಯ್ಯ, ಸೂಳೆ ಸಂಕವ್ವೆ, ಸಂಬೋಳಿ ಆನಾಗಿದೇವ, ಮಡಿವಾಳ ಮಾಚಯ್ಯ ಎಂಬಿತ್ಯಾದಿ ವೃತ್ತಿ ಸೂಚಕಗಳು ಜಾತಿ ಸೂಚಕಗಳು ಕ್ರಮೇಣ ಸಂಕುಚಿತ ಅರ್ಥದ ದ್ವೀಪಗಳಾಗಿ ಮಡುಗಟ್ಟಿ ಮತ್ತೆ ಜಾತಿಯ ಭೂತ ಹೆಗಲೇರುತ್ತದೆಂಬ ಪ್ರಜ್ಞೆ ಆ ಹೊತ್ತಿನ ಯಾರಿಗೂ ಇದ್ದಂತಿರಲಿಲ್ಲ. ಇವತ್ತಿಗೂ ಕೂಡ ಅಂಕಿತನಾಮಗಳಲ್ಲಿ ಜಾತಿಸೂಚಕಗಳು ವಿಜೃಂಭಿಸುತ್ತಿವೆ. ಇಂತಹ ಸೂಚಕಗಳನ್ನು ಇಟ್ಟುಕೊಂಡೇ ಸರ್ವಸಮಾನತೆಯ ಸಮಾಜ ನಿರ್ಮಾಣದ ಮಾತಾಡುವುದು ಯಾವ ನ್ಯಾಯ ? ಇಲ್ಲಿನ ಆಶ್ಚರ್ಯವೆಂದರೆ, ಕೀಳರಿಮೆ ಅನುಭವಿಸುತ್ತಿರುವ ಜಾತಿ ಪಂಗಡಗಳು ಆರ್ಥಿಕ, ಸಾಮಾಜಿಕ, ಸವಲತ್ತುಗಳಿಗಾಗಿ ತಮ್ಮ ಐಡೆಂಟಿಟಿಯನ್ನು ಜಾತಿಸೂಚಕಗಳಿಂದ ವ್ಯಕ್ತಪಡಿಸಲೇ ಬೇಕಾದ ಸಂದರ್ಭ ಏರ್ಪಟ್ಟಿರುವುದು. ಬಸವ ಚಳವಳಿಯ ಹಂತದಲ್ಲಿ ಮೇಲ್‌ಸ್ತರದ ಆಲೋಚನೆಗೂ 'ಕೆಳ' ಎನಿಸಿ ಕೊಂಡ ಸ್ತರದ ಆಲೋಚನೆಗೂ ಎಲ್ಲೋ ಒಂದು ಕಡೆ ಬಿರುಕು ಏರ್ಪಟ್ಟಿರಬೇಕು. ಇದು ಸಿದ್ಧಾಂತ ರೂಪುಗೊಳ್ಳುವ ಸಂದರ್ಭದಲ್ಲೋ, ಸಿದ್ಧಾಂತಗಳು ಕಾರ್ಯರೂಪಕ್ಕೆ ತೊಡಗುವ ಸಂದರ್ಭದಲ್ಲೋ ಆಗಿದ್ದಿರಬೇಕು. ಪುರೋಹಿತ ಶಾಹಿಯನ್ನು ಯಶಸ್ವಿಯಾಗಿ ಎದುರಿಸಿದಂತೆ ರಾಜಶಾಹಿಯನ್ನು ಎದುರಿಸಲು ಬಸವ ಚಳವಳಿಗೆ ಸಾಧ್ಯವಾಗಿರಲಿಕ್ಕಿಲ್ಲ. ಅನೂಚಾನವಾಗಿ ನಡೆದುಕೊಂಡು ಬಂದ ಸಂಪ್ರದಾಯದ ಬೃಹತ್ ವೃಕ್ಷದ ಬೇರುಗಳು ಅಲ್ಲಾಡತೊಡಗಿದಂತೆ ಮೇಲ್ಜಾತಿವರ್ಗಗಳು ಪ್ರಭುತ್ವದ ನೆರವು ಪಡೆದವು. ಪ್ರಭುತ್ವದ ಚಂಚಲ ಮನಸ್ಸನ್ನು ವಿಕೃತ ಗೊಳಿಸಿದವು. ವೈದಿಕಶಾಹಿ ಮತ್ತು ರಾಜಶಾಹಿಗಳು ಚಳವಳಿಯನ್ನು ಹತ್ತಿಕ್ಕಲಾರಂಭಿಸಿದವು.

ಅಂತರ್ಜಾತಿ ಮದುವೆಯಿಂದ ವರ್ಣ ಸಂಕರಗೊಳ್ಳುತ್ತಿದ್ದಂತೆಯೇ ಈ ಬುಡಮೇಲುಕೃತ್ಯಗಳು ವಿನಾಶಕಾರಿ ಹಂತ ತಲುಪಿದುವು. ಒಂದು ಹಂತ ಮೀರಿದ ತರುವಾಯ ಶರಣರು ನಾಯಕರ ಯಾವ ಮಾತನ್ನೂ ಕೇಳುವ ಸ್ಥಿತಿಯಲ್ಲಿಲ್ಲದ್ದರಿಂದ ಪರಸ್ಪರ ಹಿಂಸಾಚಾರ ಅನಿವಾರ್ಯವೆಂಬಂತೆ ಭುಗಿಲೆದ್ದಿತು. ಒಂದು ಪಕ್ಷ ಪ್ರಭುತ್ವವು ಚಳವಳಿಗೆ ಒತ್ತಾಸೆಯಾಗಿ ನಿಂತಿದ್ದರೆ ? ಪ್ರಭುತ್ವವು ಯಾವತ್ತಿಗೂ ಪರಿವರ್ತನಕ್ಕೆ, ಮಾನವತೆಯ ಸದಾಶಯಕ್ಕೆ ಕೈ ಜೋಡಿಸಿಯೇ ಇಲ್ಲವೆಂಬ ಐತಿಹಾಸಿಕ ಸತ್ಯ ಅರ್ಥವಾದರೆ ಇದಕ್ಕೆ ಉತ್ತರವೂ ಲಭ್ಯವಾದೀತು. ಮಾನವತೆಯ ಸಂದೇಶಗಳು ಕ್ರಮೇಣ ಶಿಷ್ಯರ, ಅನುಯಾಯಿಗಳ ವ್ಯಾಖ್ಯಾನಗಳಿಗೆ ಸಿಕ್ಕು ಜಡ ಸಂಪ್ರದಾಯವಾಗಿ ಪರಿಣಮಿಸಿದ್ದು, ನವ ವೈದಿಕಶಾಹಿ ಯಾದದ್ದು ಶರಣಚಳವಳಿಯ ಬಹುದೊಡ್ಡ ನಷ್ಟ.

ಬಸವಣ್ಣನವರು ಜಾತಿರಹಿತ ಹಾಗೂ ವರ್ಗರಹಿತ ಸಮಾಜ ನಿರ್ಮಿಸಲು ಯತ್ನಿಸಿದ್ದರೆಂಬ ವೈಭವೀಕರಣ ಹೇಳಿಕೆಗಳಲ್ಲಿ ಅಂಥ ಸತ್ಯಾಂಶ ಕಾಣಿಸದು. ಜಾತಿರಹಿತ ಸಮಾಜವೆಂಬುದು ಒಂದು ಸುಂದರ ಕನಸು. ಜಾತಿರಹಿತ ಎಂದು ಹೇಳಬೇಕಾದಾಗಲೂ 'ಜಾತಿ' ಎಂಬ ಪದದ ಹಂಗಿಗೆ ಒಳಗಾಗಲೇಬೇಕಷ್ಟೇ. ಬಸವಾದಿ ಪ್ರಮಥರು ಸರ್ವ ಜಾತಿಗಳನ್ನೂ ಆಧರಿಸಿದರು. ಆದರೆ ವರ್ಗಗಳ ತಾರತಮ್ಯದ ಬಗ್ಗೆ ಅಷ್ಟಾಗಿ ತಲೆಕೆಡಿಸಿಕೊಳ್ಳಲಿಲ್ಲ, ಒಂದರ್ಥದಲ್ಲಿ ಅವರು ವರ್ಗಗಳೊಂದಿಗೆ ರಾಜಿ ಮಾಡಿಕೊಂಡುಬಿಟ್ಟರು. 'ಉಳ್ಳವರು ಶಿವಾಲಯವ ಕಟ್ಟಿಸಿದರೆ ಕಟ್ಟಿಸಲಿ, ನಾನೇನ ಮಾಡಲಿ ಬಡವ' ಎಂಬ ಅಸಹಾಯಕತೆಯಷ್ಟೇ ಅವರಲ್ಲಿ ಉಳಿದದ್ದು. ಎಲ್ಲಕ್ಕಿಂತ ಮುಖ್ಯವಾಗಿ ಭವಿ - ಭಕ್ತ ಎಂಬ ತಾನೇ ನಿರ್ಮಿಸಿಕೊಂಡ ವರ್ಗ ತಾರತಮ್ಯದಲ್ಲಿ ಶರಣ ಚಳವಳಿ ಸಿಕ್ಕಿಕೊಂಡು ಒದ್ದಾಡಬೇಕಾಯಿತು. 'ಕೂಡಲಸಂಗಂಗಲ್ಲದೆ ಮತ್ತೊಂದಕ್ಕೆ ರಗಿದಡೆ ಕಿವಿ ಮೂಗ ಕೊಯ್ವನು' ಎಂಬ ಮಾತೇ ಚಳವಳಿಯ ಸಂಕುಚಿತತೆಯ ದಿಕ್ಕನ್ನು ಧ್ವನಿಸುತ್ತದೆ. 'ಲಾಂಛನಕ್ಕೆ ಶರಣಾ'ಗಬೇಕೆಂಬ ತುರ್ತು ಅವರ ಅಂದಿನ ಅಗತ್ಯವಾಗಿತ್ತು. ನಿಮ್ನವರ್ಗದವರನ್ನು ಒಂದುಗೂಡಿಸುವ, ತಾರತಮ್ಯ ಹೋಗಲಾಡಿಸುವ ಆತುರದಲ್ಲಿ ಕೆಲವು ಅಪಚಾರಗಳು ನಡೆದವು. ಶಿವಭಕ್ತನಲ್ಲದವನು ಶರಣ ಚಳವಳಿಯ ವ್ಯಾಪ್ತಿಗೆ ಬರಲಾಗಲಿಲ್ಲ. ಅನ್ನದಾಸೋಹದ ಪ್ರಯೋಜನ ಪಡೆಯಲು ಹಲವು ಅಪಾತ್ರರು ಲಿಂಗ ಕಟ್ಟಿಕೊಂಡು ಶಿವಭಕ್ತರಂತೆ ನಟಿಸಿದರು. ಬಹುಶಃ ಇಂಥವರೇ ಪಿತೂರಿ ನಡೆಸುವವರ ಪರವಾಗಿ ಅಂದರೆ ಗೂಢಚಾರರಾಗಿ ಕೆಲಸ ಮಾಡಿದ್ದಿರಬಹುದು. ಜಂಗಮ ಪರಿಕಲ್ಪನೆ ಉತ್ಕೃಷ್ಟವಾದದ್ದೇನೋ ಸರಿ. ಆದರೆ ಕ್ರಮೇಣ ಈ ತತ್ವವು ಸೋಮಾರಿಗಳಿಗೆ, ಹೊಟ್ಟೆಬಾಕರಿಗೆ, ವ್ಯವಸ್ಥಿತ ನೆಲೆವೀಡಾದದ್ದಂತೂ ಬಹುದೊಡ್ಡ ಆಘಾತವೇ ಸರಿ. ಬಸವಾದಿ ಶರಣರು ಮಾನವನ, ಶರಣನೆನಿಸಿಕೊಂಡವನ ಹೃದಯ ವೈಶಾಲ್ಯದಲ್ಲಿ, ಅಂತರಂಗ, ಬಹಿರಂಗ ಶುದ್ಧಿಯಲ್ಲಿ ಅಪಾರ ನಂಬಿಕೆಯಿಟ್ಟವರು. ಇಂಥ ಶ್ರೇಷ್ಠ ನಂಬಿಕೆಗಳನ್ನು ಬಹುಶಃ ಹಲವರು ದುರುಪಯೋಗಪಡಿಸಿಕೊಂಡಿರಲಿಕ್ಕೆ ಸಾಧ್ಯ. ಎಲ್ಲ ಕಾಲದಲ್ಲೂ ಇಂಥವು ಘಟಿಸುವ ಸಾಧ್ಯತೆ ನಿಚ್ಚಳವಿರುವಾಗ ಹನ್ನೆರಡನೆಯ ಶತಮಾನದ ಅಂಥ ಸಾಂಘಿಕ ಚಳವಳಿಯಲ್ಲಿ ಏನೆಲ್ಲ ನಡೆದಿರಬಹುದು ! ಇನ್ನೂ ವಿಸ್ತರಿಸಿ ಹೇಳುವುದಾದರೆ, ಎಲ್ಲ ಕೆಳಜಾತಿವರ್ಗಗಳು ಶರಣ ಚಳವಳಿಯ ಅಡಿಗೆ ಬಂದಿತ್ತೆನ್ನುವುದಾದರೆ ಈ ಹೊತ್ತು ಕರ್ನಾಟಕದಲ್ಲಿ ಕೆಳವರ್ಗ, ಕೆಳಜಾತಿಗಳ ಸುಳಿವೇ ಇರಕೂಡದಿತ್ತು. ಆದರೆ ಹಾಗಾಗಿದೆಯೇ ? ವಿಶ್ವಮಾನವ ಧರ್ಮ ಪ್ರತಿಪಾದಕ ಬಸವಣ್ಣನವರು ಬಸವೇಶ್ವರರಾಗಿ ಸೀಮಿತ ಜನಸಮೂಹದ 'ಗುರು'ವೆನಿಸಿಕೊಂಡದ್ದು, ಬಸವಪ್ರಣೀತ ಮಾನವ ಧರ್ಮವು ಹಿಂದೂ ಧರ್ಮದ ಒಂದು ಉಪಜಾತಿಯಾಗಿ ಸೇರಿಹೋದದ್ದೂ ಇವೆಲ್ಲ ಎಂಥ ವಿಷಾದಕರ ಸಂಗತಿಗಳು. ಇವೆಲ್ಲ ಬಸವಕ್ರಾಂತಿಯ ಸೋಲೆನ್ನದೆ ಬೇರೆ ಮಾರ್ಗವೇ ಇಲ್ಲ.

ಶರಣರ ಧಾರ್ಮಿಕ, ಸಾಮಾಜಿಕ, ಕ್ರಾಂತಿ ವಿಫಲಗೊಂಡರೂ ಸಾಹಿತ್ಯಕ ಕ್ರಾಂತಿ ಸಫಲವಾಯಿತೆಂಬು ದರಲ್ಲಿ ಎರಡು ಮಾತಿಲ್ಲ. ಹಾಗೆ ನೋಡಿದರೆ ವಚನರಚನೆ ಶರಣರ ಆನುಷಂಗಿಕ ಧ್ಯೇಯ. ಸಾಹಿತ್ಯ ರಚನೆ ಅವರ ಪ್ರಾಥಮಿಕ ಗುರಿಯಲ್ಲ. ಇಷ್ಟಾದರೂ ವಿಶ್ವಸಾಹಿತ್ಯಕ್ಕೆ ಭಾರತೀಯ ಸಾಹಿತ್ಯದ ಕೊಡುಗೆಗಳಲ್ಲಿ ನಿಸ್ಸಂಶಯವಾಗಿ ವಚನ ವಾಙ್ಮಯ ಸೇರುತ್ತದೆ. ಎಲ್ಲ ರೀತಿಯಲ್ಲೂ ವಚನಸಾಹಿತ್ಯ ತನ್ನ ಕಾಲಕ್ಕೆ ಕ್ರಾಂತಿಕಾರಕವಾದುದು. ಅಂದಿನ ಬಹುದೊಡ್ಡ ಸಾಹಿತ್ಯ ಸಮಾರಾಧನೆಯಲ್ಲಿ ಪಾಲ್ಗೊಂಡ ಜನಸಾಮಾನ್ಯರು ಮತ್ತಾವ ಕಾಲದಲ್ಲೂ ಕಾಣಸಿಗುವುದಿಲ್ಲ. ಹಳಗನ್ನಡದ ಕ್ಲಿಷ್ಟತೆ, ಸಂಕೀರ್ಣತೆಗಳನ್ನು ನಡುಗನ್ನಡದ ಸರಳತೆಯನ್ನಾಗಿ ಪರಿವರ್ತಿಸಿದ ಕೀರ್ತಿ ಬಸವಕ್ರಾಂತಿಗೇ ಸಲ್ಲಬೇಕು. ಅದುವರೆಗಿನ ಸಾಹಿತ್ಯವು ಧರ್ಮ ಪ್ರತಿಪಾದನೆಗೆ ಬಳಕೆಯಾಗುತ್ತಿದ್ದರೂ ಶರಣರು ಕೂಡ ಧಾರ್ಮಿಕ ಆಧ್ಯಾತ್ಮಿಕ ತಿಳಿವಿಗೆ ಸಾಹಿತ್ಯವನ್ನು ಬಳಸಿಕೊಂಡಿದ್ದರೂ ಅವರು ಬಳಸಿಕೊಂಡ ರೀತಿ ಪೂರ್ಣ ಭಿನ್ನ. ಅಚ್ಚಗನ್ನಡದ ಕಿಚ್ಚು ನಿಜವಾಗಿ ವಚನಕಾರರಿಂದ ಆರಂಭಗೊಂಡಿತು. ಬದುಕಿನ ತತ್ವಜ್ಞಾನ, ಆಧ್ಯಾತ್ಮದ ಉನ್ನತ ವಿಚಾರಲಹರಿ, ತಾರ್ಕಿಕ ದ್ವಂದ್ವ, ಸ್ವಾನುಭವಗಳ ರೂಪಕ ಪ್ರತಿಮಾ ವಿಧಾನ ಎಲ್ಲವೂ ಕನ್ನಡದಲ್ಲಿ ಹೊಸ ರೀತಿಯಲ್ಲಿ ಹೊಸ ಕಾಣ್ಕೆಯಲ್ಲಿ ಒಡಮೂಡಿದವು. ಪಾರಮಾರ್ಥಿಕ ಸಂಗತಿಗಳು ಈ ಮಟ್ಟಿಗಿನ ಸರಳತೆಯಲ್ಲಿ ಕಾಣಿಸಿಕೊಂಡದ್ದು ಕನ್ನಡದ ಪುಣ್ಯ.

ಚಳವಳಿಯ ಕಾಳಜಿ ಮತ್ತು ಸಾಹಿತ್ಯದ ಆಕೃತಿ - ಇವೆರಡೂ ಒಂದು ಸಮನ್ವಯದ ನೆಲೆಯಲ್ಲಿ 'ರೈಲ್ವೆಹಳಿ' ಗಳಂತೆ ಜೊತೆಗೂಡಿ ಹೋಗಿರುವುದು ಬಸವಕ್ರಾಂತಿಯ ವಿಶೇಷತೆ. ತಮ್ಮ ಕ್ರಾಂತಿಯ ಪ್ರಣಾಳಿಕೆಗಳಿಗೆ ಕಲೆಗಾರಿಕೆಯ ಸ್ಪರ್ಶ ನೀಡುತ್ತ, 'ಆನು ಒಲಿದಂತೆ ಹಾಡುವೆ' ಎಂಬ ಧೀರೋದಾತ್ತ ನಿಲುವನ್ನು ತೋರಿದ್ದು ಬೆರಗನ್ನುಂಟು ಮಾಡುತ್ತದೆ. ಹೀಗಾಗಿಯೇ ಅವರು ಆತ್ಮಚರಿತ್ರಾತ್ಮಕ ಹಾಗೂ ಸಂಕಥನಗಳ ಮಾದರಿಯಲ್ಲಿ ಸಾಹಿತ್ಯ ಸೃಷ್ಟಿಸಿದ ಮೊದಲಿಗರೆನಿಸಿಕೊಳ್ಳುತ್ತಾರೆ. ಅಕ್ಕಮಹಾದೇವಿಯಂತೂ ಎಲ್ಲ ವಚನಕಾರರಿಗಿಂತ ಭಿನ್ನವಾದ ನೆಲೆಯಲ್ಲಿ ನಿಂತು ತನ್ನ ಆತ್ಮಚರಿತ್ರೆಯನ್ನು ಆಧ್ಯಾತ್ಮಿಕ ಪರಿವೇಷದೊಳಗೇ ಸಂಯೋಜಿಸುತ್ತಾಳೆ.

ಒಟ್ಟಾರೆ ಬಸವಕ್ರಾಂತಿ, ಆ ಮೂಲಕ ಸಾರ್ವತ್ರೀಕರಣ ಕ್ಕೊಳಗಾದ ಶರಣಕ್ರಾಂತಿ ಅಥವಾ ವಚನ ಕ್ರಾಂತಿ, ತನ್ನ ನೆಲೆ-ನಿಲುವು-ಒಲವುಗಳ ಪ್ರಖರತೆಯಿಂದಾಗಿ ಇಂದಿಗೂ ಮುಂದಿಗೂ ಹಲವು ತೆರದಲ್ಲಿ 'ಪ್ರಾಯೋಗಿಕ ಆಕರ'ವೆನಿಸಿ ಕೊಳ್ಳುತ್ತದೆ. ಇಂಥ ಒಂದು ವಿಪ್ಲವದಲ್ಲಿ ಜಯದ ಅಂಶಗಳಿದ್ದರೆ ಅದು ಅಂದಿನ ಅನುಭಾವಿ ಮಹನೀಯರ ನಿಸ್ವಾರ್ಥ ಬದುಕಿಗೆ ಸಲ್ಲಬೇಕು. ಆದರೆ ಸೋಲಿನ ಕಹಿ ನಿಜಕ್ಕೂ ನಮ್ಮ ಜವಾಬ್ದಾರಿ. ಪರಿವರ್ತನಕ್ಕೆ ಒಗ್ಗೊಡದ, 'ಕಲ್ಯಾಣ' ರಾಜ್ಯಕ್ಕೆ ಸಹಕರಿಸದ ನಮ್ಮೊಳಗಿನ ಕ್ಷುದ್ರತೆಯೆ ಸೋಲಿನ ಹೊಣೆಗಾರಿಕೆಯನ್ನು ಹೊರಬೇಕು.

ಅಂದಿಗೂ ಇಂದಿಗೂ ಕಾಲದ, ಬೌದ್ಧಿಕ ನೆಲೆಗಳ ಮಹದಂತರವಿದೆ. ಹೀಗಾಗಿ ಈ ಹೊತ್ತಿನ ವಿಚಾರಗಳ ಬೆಳಕಿನಲ್ಲಿ ಸೋಲು ಗೆಲುವುಗಳ ಪಟ್ಟಿ ಮಾಡುವುದು ಅಸಾಧುವೆನಿಸಿಬಿಡುತ್ತದೆ. ಬಸವ ಕ್ರಾಂತಿಯ ಬಗ್ಗೆ ಏನು ಹೇಳಿದರೂ ಹೇಗೆ ಹೇಳಿದರೂ ಐತಿಹಾಸಿಕ ತಿಳಿವಳಿಕೆಯ ಪರಿಮಿತತೆಯನ್ನು ಒಪ್ಪಲೇಬೇಕು. ಆದರೆ ಒಂದಂತೂ ಸ್ಪಷ್ಟ : ಸೋಲು ಕೂಡ ಗೆಲುವಾಗಿ ಕಾಣಿಸುವುದೇ ಬಸವಕ್ರಾಂತಿಯ ಬಹುದೊಡ್ಡ ಮಾರ್ಮಿಕತೆ.

ಡಾ|| ಎಚ್. ಎಸ್. ಮಂಜುರಾಜ್
ಕನ್ನಡ ಪ್ರಾಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ - ೫೭೧ ೬೦೨

## ಪ್ರಾಚ್ಯದಲ್ಲಿ ದೇವಾನುದೇವತೆಗಳು



ಅಲ್ಲಿ ಆ ರಂಗೂನಿನಲ್ಲಿ ತಿಳಿಯಿತೆನಗೆ
ದೇವಾನುದೇವತೆಗಳು - ಭಗವಂತನ ಹಾಗೆಯೇ ಎಂದು,
ಬಡ ಮಾನವನ ಕಡು ವೈರಿ ಅವರೆಂದು
ದೇವಾನುದೇವತೆಗಳು
ಹಾಯಿಸಿದ್ದರು ಹಾಲುಗಲ್ಲಿನ ಮೈಯ
ಬಿಳಿಹಲ್ಲಿನ ಕಿರಿ ತಿಮಿಂಗಿಲಗಳ ಹಾಗೆ,
ದೇವಾನುದೇವತೆಗಳು - ಹೊನ್ನ ಬಣ್ಣದ ಶೂಲಗಳು,
ಹುಟ್ಟುವ ತಪ್ಪಿಗೆ
ಸುತ್ತುಗಟ್ಟುವ ನಾಗರ ದೇವತೆಗಳು,
ಬರಿಯ ಚಿರಂತನದ
ಚಣಗಳ ಕಾಕ್‌ಟೇಲು ಕೂಟವನವಲೋಕಿಸುತ
ಮೆಲುನಗುವ ಮಾಟಮೈಯ ಬತ್ತಲೆಯ ಬುದ್ಧಗಳು-
ತನ್ನಾ ಕರಾಲ ಕ್ರೂಜೆಗೋಲಿರುವ ಕ್ರಿಸ್ತನ ಹಾಗೆ,
ಆ ಎಲ್ಲರೂ ಏನನ್ನೂ ಮಾಡಬಲ್ಲವರು,
ತಮ್ಮ ದೇವಲೋಕವನ್ನೆ ನಮ್ಮ ಮೇಲೆ ಹೊರಿಸಬಲ್ಲರು,
ವಿಕಟ ಹಿಂಸೆಯಿಂದಲೋ ಕೋವಿಯಿಂದಲೋ
ಏನೆಲ್ಲವ-
ಭಕ್ತಿಭಾವವ ಖರೀದಿಸುವರು ನಮ್ಮ ನೆತ್ತರನೆ ಉರಿಸುವರು,
ತಮ್ಮ ಹೇಡಿತನವ ಹುದುಗಿಡಲು
ಮನುಜರು ಮಾಡಿದಾ ಪ್ರಚಂಡ ದೇವಾನುದೇವತೆಗಳು,
ಅಲ್ಲಿ ಆ ಕಡೆ ಎಲ್ಲವೂ ಹಾಗೆಯೆ ನಡೆದಿತ್ತು,
ಇಹದಲ್ಲೆಲ್ಲ ದಿವ್ಯಲೋಕದ ಕಮರಡರಿತ್ತು,
ಇಳೆಯೆಲ್ಲ ದಿವ್ಯ ಸರಕುಗಳಿಂದ ಕಿಕ್ಕಿರಿದಿತ್ತು.

* * *

ಇನ್ನೂ ಇಪ್ಪತ್ತರ ಹರೆಯದವನಾಗಿದ್ದಾಗಲೆ ಪಾಬ್ಲೋ ನೆರೂದ, ಮಹಿಳೆ ಮತ್ತು ಬ್ರಹ್ಮಾಂಡ ತನಗೆ ಆವಿಷ್ಕಾರಗೊಂಡ ಬಗ್ಗೆ ಕವಿತೆ ಸೃಷ್ಟಿಸಿ ಲ್ಯಾಟಿನ್ ಅಮೆರಿಕದಾದ್ಯಂತ ಹೆಸರುಗಳಿಸಿದರು. ಕವನ ಕಟ್ಟುವುದು ಕೇವಲ ಪ್ರತಿಷ್ಠಿತರ ಏಕಾಂತದ ಹವ್ಯಾಸವಲ್ಲ; ಮುಗ್ಧ ಜನರೊಡನೆ ನಾವು ಕಲ್ಪಿಸಿಕೊಳ್ಳುವ ಸೌಹಾರ್ದತೆಯನ್ನು ಅದು ಅಭಿವ್ಯಕ್ತಿಸುತ್ತದೆ ಎಂಬುದು ಅವರ ನಿಲುವಾಯಿತು. ಸಾಮಾಜಿಕ ಕಮ್ಮಟದಲ್ಲಿ ಕವಿತೆ ಹುಟ್ಟುತ್ತದೆಯೆಂಬುದನ್ನು ಮನಗಂಡರು. ಮಾನವ ಸಮುದಾಯದ ಭವಿಷ್ಯವನ್ನೂ ಧ್ಯೇಯೋದ್ದೇಶಗಳನ್ನೂ ಅರ್ಥೈಸಿಕೊಳ್ಳಲು ಇತಿಹಾಸ ಹಾಗೂ ನಿಸರ್ಗದ ಘಟನೆಗಳು ಕೀಲಿಕೈಯಾಗುತ್ತವೆಂದೂ ತಿಳಿದರು.

೧೯೭೦ರಲ್ಲಿ ಸಾಲ್ವಡಾರ್ ಅಯೆ(ಲೆ)ಂಡೆಯವರ ಮಾರ್ಕ್ಸ್‌ವಾದಿ ಸರ್ಕಾರ ಸ್ಥಾಪನೆಯಾದಾಗ ನೆರೂದ ಅದರ ರಾಯಭಾರಿಯಾಗಿ ಸ್ಪೇನ್ ದೇಶಕ್ಕೆ ತೆರಳಿದರು. ೧೯೭೧ರಲ್ಲಿ ಅವರ ಕವಿತೆಗೆ ನೊಬೆಲ್ ಪ್ರಶಸ್ತಿ ಪ್ರದಾನ ಮಾಡಿದಾಗ, ಕವಿಯು ಸಾಮಾನ್ಯ ಜನರ ಮುಖವಾಣಿಯಾಗಿ ಪಾತ್ರವಹಿಸುತ್ತಾನೆ ಎಂಬರ್ಥದಲ್ಲಿ ಅದನ್ನು ಸ್ವೀಕರಿಸಿದರು. 'ನನ್ನ ಜೀವನದಲ್ಲಿ ಕವಿತ್ವ ಬೇರೆ, ರಾಜಕೀಯ ಕ್ರಿಯಾಶೀಲತೆ ಬೇರೆ ಎಂದು ಯಾವತ್ತೂ ಭಾವಿಸಿದವನಲ್ಲ' ಎಂದು ಸಾರಿದರು.

ನೆರೂದ ೧೯೭೩ ಸೆಪ್ಟೆಂಬರ್ ೨೩ರಂದು ಅಸು ನೀಗಿದರು. ಅವರ ಸ್ಮಶಾನಯಾತ್ರೆಯೆ ಮಿಲಿಟರಿ ಸರ್ವಾಧಿಕಾರದ ವಿರುದ್ಧ ನಡೆದ ಮೊಟ್ಟಮೊದಲ ಸಾರ್ವಜನಿಕ ಪ್ರತಿಭಟನೆಯಾಗಿ ಮಾರ್ಪಟ್ಟಿತ್ತು. ಪಿನೋಷೆಯ ಹಲ್ಲೆಕಾರರು ನೆರೂದ ಅವರ ಮನೆಗೆ ನುಗ್ಗಿ ಅವರ ಪುಸ್ತಕ, ಕಾಗದ ಪತ್ರಗಳನ್ನು ಧ್ವಂಸ ಮಾಡಿದರು. ಅಮೆರಿಕಾ ನೇತೃತ್ವದಲ್ಲಿ ಪಿನೋಶೆ 'ಪ್ರಜಾಪ್ರಭುತ್ವ' ಸ್ಥಾಪಿತವಾದ್ದು ಹಾಗೆ.

**ಪಾಬ್ಲೋ ನೆರೂದ (೧೯೬೪)**
**ಕನ್ನಡಕ್ಕೆ : ಎಸ್. ಗುರುದತ್**

## ವಾಮನನ ಪುನರಾಗಮನ



'ಶಾಂತಿ' ಎಂಬ ಕೂಗು ಜನಸಂದಣಿಯಲಿ
ಹೆಪ್ಪುಗಟ್ಟಿದ ಹಿಂಸೆ ಕತ್ತಲಲಿ ಕಾಯುವುದು
ಹಸನಾಗಿದ್ದ ರಸ್ತೆಯಲಿ ರಂಗೋಲಿ ರಕ್ತ
'ಗಾಂಧಿ ಮಾತುಗಳಿಗಿಲ್ಲಿ ಅಡಗಿಕೊಳ್ಳಲೂ ಸ್ಥಳವಿಲ್ಲ'
ಹೌದು ; ನಾವು 'ಶಾಂತಿ ಪ್ರಿಯರು',
ಇದು ಅಶ್ರುವಾಯು, ಗೋಲಿಬಾರ್‌ಗಿಂತ ಕಡಿಮೆಯೇನಲ್ಲ
ಶಾಂತಿ ಪಾಲಕರನು ನಮ್ಮ ಜನ ಕೊಲ್ಲದೆ ಬಿಟ್ಟಿಲ್ಲ

ಎಲ್ಲರಲೂ ಆಸೆಯ ಹಲ್ಲುಗಳು
ಕಚ್ಚಿ ತಿಂದದ್ದು ಮಾನವೀಯತೆಯ ಮಾಂಸ
ಇಲ್ಲಿಯೇ ಶಕುನಿಗಳ ಜನನ
ವೇದ ಘೋಷಗಳ ಅನುರಣನ....
ರಂಗ ಸಜ್ಜಿಕೆ ಸಿದ್ಧಗೊಳುವುದು
ಬೆಚ್ಚಗೆ ಮುಚ್ಚಿದ್ದ ಬೆಂಕಿ ಕೆದಕಲು
ರಾಮನಿಗೊಂದು ಹೊಸ ಪಾತ್ರವೀಗ ;
ಬೆನ್ನಿನ ಬತ್ತಳಿಕೆಯೊಳಗೆ ಬಾಣಗಳಿಲ್ಲ
ಮನುವಿನ ಮಂತ್ರಗಳೇ ತುಂಬಿವೆ

ದಣಿದ ಸೂರ್ಯನಿಗೆ ವಿಶ್ರಾಂತಿ
ಕೊನೆಗೊಮ್ಮೆ ಕಡಲು ಕೊನೆಗಾಣುವುದು
ನ್ಯಾಯ ನಿದ್ದೆ ಹೋಗಿ, ಮೋಸಕ್ಕೀಗ ಕರ್ತವ್ಯ
ಮುದ್ದು ಕಂದಮ್ಮಗಳ ಕೈಯಲ್ಲಿ ಕತ್ತಿ ಅಲಗು
ವೈದಿಕರ ಕೇಂದ್ರದಂತಿದ್ದ
ವಾಮದೇವ ಬರುತ್ತಿದ್ದಾರೆ ದಾರಿ ಬಿಡಿ
ಪಾದ ಹೊರಲು ನಿಮ್ಮ ತಲೆ ಕೊಡಿ.....

**ತುರುವೀಹಾಳ ಚಂದ್ರು**



## ಸಮಾನತೆ ?

ಎಲ್ಲರೂ
ಎಲ್ಲಿಯೂ
ಸರಿಸಮಾನರಲ್ಲ !
ತಿರುಪತಿ ತಿಮ್ಮಪ್ಪನ
ಸನ್ನಿಧಾನದಲ್ಲಿಯೂ
ಉಳ್ಳವರಿಗೊಂದು
'ಸ್ಪೆಷಲ್ ಕ್ಯೂ'
ಉಂಟು !?!

**ಕ. ಬ. ವೀರಣ್ಣ ಕಣ್ಣಾಗಾಲ**
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ರಾಜರಾಜೇಶ್ವರಿ ನಗರ
ಬೆಂಗಳೂರು - ೫೬೦ ೦೩೯

# ವೈದಿಕ ಜನರ ವಿನೋದ ವಿಹಾರಗಳು

ವೈದಿಕ ಜನರು ಜೀವನದ ವಾಸ್ತವಿಕತೆಗಳಿಂದ ದೂರವಾದ ಪಾರಮಾರ್ಥಿಕ ಜೀವನದಲ್ಲಿಯೇ ಲೀನವಾಗಿದ್ದರು ಎಂದು ನಾವು ತಿಳಿಯಬೇಕಾಗಿಲ್ಲ. ವೇದಗಳು ಕೇವಲ ಧರ್ಮ ಮತ್ತು ತಾತ್ವಿಕ ಚಿಂತನೆಗಳಿಂದ ಕೂಡಿದ ಕೃತಿಗಳಲ್ಲ, ಅವು ಜನಸಾಮಾನ್ಯರ ಜೀವನ ಚಿತ್ರಣಗಳಾಗಿವೆ. ವೈದಿಕ ಜನರ ದಿನಚರಿಗಳಲ್ಲಿ ದುಡಿಯುವುದು, ತಿನ್ನುವುದು, ಪ್ರಾರ್ಥನೆ, ಯಜ್ಞಯಾಗಾದಿಗಳ ಜೊತೆಗೆ ಮನರಂಜನೆ, ವಿನೋದ ಹಾಗೂ ವಿಹಾರಗಳು ಸೇರಿದ್ದವು.

ಪಗಡೆಯಾಟ ವೈದಿಕ ಜನರ ಅತ್ಯಂತ ಜನಪ್ರಿಯ ವಿನೋದವಾಗಿತ್ತು. ಅದರಲ್ಲಿ ಮನರಂಜನೆ ಮತ್ತು ಜೂಜಾಟಗಳು ಸಮ್ಮಿಳನಗೊಂಡಿದ್ದವು. ಒಂದು ಸಂಪೂರ್ಣ ಸೂಕ್ತವೇ (ಋ.ವೇ. X ೩೪) ಅದಕ್ಕೆ ಮೀಸಲಾಗಿದೆ. ಜೂಜಾಟವು ನಿಂದನೀಯ ವ್ಯಸನ ಎಂದು ಅನೇಕ ಕಡೆ ಹೇಳಲಾಗಿದೆ. ಜೂಜುಕೋರರ ಕಪಟದ ಆಟಗಳನ್ನು ಬೇರೆ ಬೇರೆ ಸಂದರ್ಭದಲ್ಲಿ ಉಲ್ಲೇಖಿಸಲಾಗಿದೆ. ತಂದೆಯು ಮಗನನ್ನು ಜೂಜಾಟದಿಂದ ದೂರವಿಡುವಂತೆ, ದೇವರು ತನ್ನ ಭಕ್ತರನ್ನು ಎಲ್ಲ ವಿಧದ ಪಾಪ ಕಾರ್ಯಗಳಿಂದ ಸಂರಕ್ಷಿಸಬೇಕೆಂದು ದೇವರನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಇನ್ನೊಂದುಕಡೆ ಜೂಜಿನಲ್ಲಿ ತನ್ನ ಸಮಸ್ತವನ್ನೂ ಕಳೆದುಕೊಂಡ ಒಬ್ಬನು ತನ್ನನ್ನು ಸೋಲಿಸಿದವನ ಮೇಲೆ ಸೇಡು ತೀರಿಸಿಕೊಳ್ಳುವ ಚಿತ್ರಣವಿದೆ (ಅದೇ. ೪೨.೯). ಈ ಅಕ್ಷ ಸೂತ್ರದಲ್ಲಿ ಜೂಜಾಟದ ಚಟದಿಂದ ಅನಾಥನಾದವನು ತನ್ನ ಬಂಧುಬಾಂಧವರಿಗೆ ಬೇಡವಾದವನಾಗಿ, ಸಾಲಗಾರರ ಹಿಡಿತದಿಂದ ದಿಗ್ಬಂಧನಕ್ಕೊಳಗಾಗಿರುವ ಚಿತ್ರಣವಿದೆ. ಅದೇ ಸೂಕ್ತದಲ್ಲಿ, ಪಗಡೆಯಾಡುವ ಚಟದ ಹಂಬಲ ಎಷ್ಟು ಪ್ರಬಲವಾದುದೆಂದರೆ ಚಟದ ಅಮಲಿಗೆ ಬಲಿಯಾದವನು ಬೇರೆಯವರು ಆಡುವುದನ್ನು ಕಂಡ ಕೂಡಲೆ ಅದರತ್ತ ಧಾವಿಸುತ್ತಾನೆ ಎಂದು ಹೇಳಲಾಗಿದೆ. ಜನಸಾಮಾನ್ಯರು ಆಡುವ ಪಗಡೆಗೆ ಬಳಸುವ ಸಾಧನ 'ಬಿ ಭೀಟಕ' ಮರದ ತುಂಡುಗಳಾಗಿದ್ದುವು. ಅವು ಅನಂತರ ಕಾಲದಲ್ಲಿ ಬಳಸಲಾಗುತ್ತಿದ್ದದಂತದ ಅಥವಾ ಬೆಲೆಬಾಳುವ ಸಾಧನಗಳಾಗಿರಲಿಲ್ಲ. ಪಗಡೆಯಾಡುವವರು ಒಮ್ಮೊಮ್ಮೆ ತಮ್ಮ ಹೆಂಡಂದಿರನ್ನೇ ಪಣವಾಗಿ ಇಡುತ್ತಿದ್ದಂತೆ ಉಲ್ಲೇಖಗೊಂಡಿದೆ. ಪಾಂಡವರು ದ್ರೌಪದಿಯನ್ನು ಪಣವಾಗಿ ಒಡ್ಡಲು ಪ್ರೇರಣೆ ವೇದಗಳಿಂದಲೇ ದೊರೆತಂತೆ ಕಾಣುತ್ತದೆ.

ಪ್ರಸಿದ್ಧವಾದ ಮಂಡೂಕ ಸೂತ್ರವು (ಅದೇ. ೧.೧೦೩) ಅತ್ಯಂತ ವಿಡಂಬನಾತ್ಮಕ ಸೂಕ್ತವೆಂದು ಕೆಲವರು ಭಾವಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ವೇದ ಮಂತ್ರೋಚ್ಚಾರಣೆಯು ಕಪ್ಪೆಗಳ ವಟಗುಟ್ಟುವಿಕೆಯ ಅನುಕರಣೆಯಂತೆ ಕಂಡುಬರುತ್ತದೆ. ಸೋಮ ಪಾನೋನ್ಮತ್ತರಾದವರು ವೇದ ಮಂತ್ರಗಳನ್ನು ಉಚ್ಚರಿಸುವುದು ಅಪಹಾಸ್ಯಕ್ಕೆ ಕಾರಣವಾಗಿದ್ದು ಕಪ್ಪೆಗಳ ವಟಗುಟ್ಟುವಿಕೆಗೆ ಹೋಲಿಸುವಂತಿರುತ್ತಿತ್ತು. ಮ್ಯಾಕ್ಸ್ ಮುಲ್ಲರ್ ಪ್ರಕಾರ ಇದು ಸರಳ ಶುದ್ಧ ವಿಡಂಬನೆಯಾಗಿದೆ. ಒಂದು ಕಪ್ಪೆ ಹಸುವಿನಂತೆ ಅಂಬಾ ಎಂದರೆ ಇನ್ನೊಂದು ಕಪ್ಪೆ ಮೇಕೆಯಂತೆ ಬ್ಯಾ ಬ್ಯಾ ಎನ್ನುತ್ತದೆಯಾದ್ದರಿಂದ ಮೇಲಿನಂತೆ ವ್ಯಾಖ್ಯಾನಿಸಲಾಗಿದೆ. ಕಪ್ಪೆಗಳು ಕೃಷಿಗೆ ಅಗತ್ಯವಾದ ಮಳೆಯನ್ನು ತರುವುದರಿಂದ ಅವುಗಳನ್ನು



ಬ್ರಾಹ್ಮಣರಿಗೆ ಹೋಲಿಸಲಾಗಿದೆ. ಅವರ ಪ್ರಕಾರ ಕಪ್ಪೆಗಳನ್ನು ಬ್ರಾಹ್ಮಣರಿಗೆ ಹೋಲಿಸಲಾಗಿದೆಯೇ ವಿನಹ ಬ್ರಾಹ್ಮಣರನ್ನು ಕಪ್ಪೆಗಳಿಗೆ ಹೋಲಿಸಲಾಗಿಲ್ಲ. ಆದ್ದರಿಂದ ಇದು ವಿಡಂಬನೆಯಲ್ಲ ಎಂದು ವಾದಿಸಲಾಗಿದೆ. ಅದೇನೇ ಇರಲಿ ಬ್ರಾಹ್ಮಣರ ಮಂತ್ರೋಚ್ಚಾರ ಮತ್ತು ಕಪ್ಪೆಗಳ ವಟಗುಟ್ಟುವಿಕೆಯನ್ನು ಅಕ್ಕಪಕ್ಕದಲ್ಲಿಟ್ಟು ಹಾಡಿದ ಕವಿ ನಿಜವಾಗಿಯೂ ರಸಿಕನೆಂಬುವುದರಲ್ಲಿ ಅನುಮಾನವಿಲ್ಲ.

'ಗೌಡಿ', 'ಮಾಧ್ವಿ' ಮತ್ತು 'ಪೃಷ್ಟಿ'ಗಳಿಂದ ಭಟ್ಟಿ ಇಳಿಸಿದ ಮದ್ಯಗಳನ್ನು ವೇದಗಳಲ್ಲಿ ಖಂಡಿಸಲಾಗಿದೆ. ಈ ಬಗೆಯ ಮದ್ಯವನ್ನು ಸಾಮಾನ್ಯರಂತೆ ಬ್ರಾಹ್ಮಣರೂ ಕುಡಿಯುತ್ತಿದ್ದಿರಬೇಕು. ಆದ್ದರಿಂದಲೇ ಈ ಖಂಡನೀಯ ಕೃತ್ಯಕ್ಕೆ ಬ್ರಾಹ್ಮಣರಿಗೆ ಉಗ್ರ ಶಿಕ್ಷೆ ವಿಧಿಸಲಾಗುತ್ತಿತ್ತು. ಋಗ್ವೇದದಲ್ಲಿ ಸುರಾಪಾನದ ಬಗ್ಗೆ ಅಲ್ಲಲ್ಲಿ ಉಲ್ಲೇಖಗಳಿವೆ. ಅದನ್ನು ಯಾವ ವಸ್ತುವಿನಿಂದ ಮಾಡುತ್ತಿದ್ದರು ಎಂಬ ಬಗ್ಗೆ ಸ್ಪಷ್ಟ ಮಾಹಿತಿ ಇಲ್ಲ. ಸುರಾಪಾನ ಮಾಡಿದವರಿಗೆ ನಿರ್ದಿಷ್ಟ ಶಿಕ್ಷೆ ಯಾವುದೂ ಸೂಚಿತವಾಗಿಲ್ಲ. ಆದರೆ ಕೆಲವು ಕಡೆ ಅಂತಹ ಅಭ್ಯಾಸವನ್ನು ಕೀಳಾಗಿ ಪರಿಗಣಿಸಲಾಗಿದೆ.

ಬಿ. ವಿ. ವೀರಭದ್ರಪ್ಪ

ಮತ್ತು ತರಿಸುವ ಎಲ್ಲಾ ಪಾನೀಯಗಳನ್ನು ಋಗ್ವೇದದಲ್ಲಿ ಖಂಡಿಸಿಲ್ಲ. ಅಲ್ಲಿ ಸೋಮಪಾನಕ್ಕೆ ಬಹು ಪ್ರಧಾನ ಸ್ಥಾನ ನೀಡಲಾಗಿದೆ. ಋಗ್ವೇದದ ಒಂಭತ್ತನೆಯ ಮಂಡಲವು ಸಂಪೂರ್ಣವಾಗಿ ಸೋಮದ ಪ್ರಶಂಸೆಗಾಗಿಯೇ ಮೀಸಲಾಗಿದೆ. ಸೋಮ ಎಂಬುದು ಒಂದು ಗಿಡ ಅಥವಾ ಬಳ್ಳಿಯಾಗಿದ್ದು, ಅದು ಯಾವುದು ಎಂಬುದು ಇಂದಿಗೂ ಖಚಿತವಾಗಿಲ್ಲ. ಆದರೂ ಈ ಗಿಡದಿಂದ ತೆಗೆದ ರಸವನ್ನು ಯಜ್ಞಗಳಲ್ಲಿ ಬಳಸಲಾಗುತ್ತಿತ್ತು ಮತ್ತು ಅದನ್ನು ಕುಡಿಯುವುದು ಯಜಮಾನನು ಅನುಸರಿಸಲೇ ಬೇಕಾದ ವಿಧಿಗಳಲ್ಲಿ ಒಂದಾಗಿತ್ತು. ಅದು ಬಹುಶಃ ಸಮಾಜದ ಮೇಲ್ವರ್ಗದವರಿಗೆ ಮೀಸಲಾದ ಪಾನೀಯವಾಗಿತ್ತು.

ಸುರಾ ಎಂಬ ಪಾನೀಯವನ್ನು ಜನಸಾಮಾನ್ಯರು ವಿಶೇಷವಾಗಿ ಸೇವಿಸುತ್ತಿದ್ದರು. ಈ ಕಾರಣಕ್ಕಾಗಿ ಅದನ್ನು ಸ್ವಲ್ಪ ಮಟ್ಟಿಗೆ ಕೀಳಾಗಿ ಪರಿಗಣಿಸಲಾಗಿತ್ತು. ಋಗ್ವೇದದಲ್ಲಿ ಸುರೆಯು ಬುದ್ಧಿಯನ್ನು ಚುರುಕುಗೊಳಿಸುವ ಶಕ್ತಿದಾಯಕ ಪಾನೀಯವೆಂದು ಪರಿಗಣಿಸಿ ಅದನ್ನು ಸೇವಿಸುತ್ತಿದ್ದಂತೆ ಕಂಡುಬರುತ್ತದೆ (ಅದೇ. I. ೧೧೬.೭). ಸುರಾಪಾನ ಮಾಡಿದ ಜನ ಮದೋನ್ಮತ್ತರಾಗಿ ದುಷ್ಕೃತ್ಯಗಳನ್ನೆಸಗಿದಂತೆ ಹೇಳಲಾಗಿದೆ (ಅದೇ. VII. ೮೬.೬). ಅದು ಒಮ್ಮೊಮ್ಮೆ ಕುಡಿದವನಿಗೆ ಮತ್ತು ಬರಿಸಿ ಅವನು ಅಶ್ಲೀಲವಾಗಿ ವರ್ತಿಸುವಂತೆ ಮಾಡುತ್ತಿತ್ತು (ಅದೇ. VIII. ೨. ೧೨). ಸುರಾಪಾನ ರಸಿಕರ ಜೀವನ ಶೈಲಿಯಾಗಿತ್ತು ಎಂದು ಒಂದುಕಡೆ ಹೇಳಲಾಗಿದೆ.

**ಸಂಗೀತ, ನೃತ್ಯ :** ಅಥರ್ವವೇದ ಕಾಲದಲ್ಲಿ ಗಾನ, ವಾದ್ಯ, ಸಂಗೀತ ಹಾಗೂ ನೃತ್ಯಗಳು ಜನಪ್ರಿಯ ಮನರಂಜನೆಯ ಮಾಧ್ಯಮಗಳಾಗಿದ್ದುವು. ವಾದ್ಯಗಳಲ್ಲಿ 'ಆಘಾಟಿ' (ಕರತಾಲ)ಯನ್ನು ನೃತ್ಯಕ್ಕೆ ಪಕ್ಕವಾದ್ಯವನ್ನಾಗಿ ನುಡಿಸಲಾಗುತ್ತಿತ್ತು.

**ಓಟದ ಪಂದ್ಯ :** ಓಟದ ಸ್ಪರ್ಧೆಯಲ್ಲಿ ವ್ಯಾಪಕ ವ್ಯವಸ್ಥೆ

ಮಾಡಲಾಗುತ್ತಿತ್ತು. ರಥದ ಓಟದ ಸ್ಪರ್ಧೆಯೂ ನಡೆಯುತ್ತಿದ್ದಂತೆ ತಿಳಿದುಬರುತ್ತದೆ. ಕುದುರೆಯ ಓಟದ ಸ್ಪರ್ಧೆಯೂ ರೂಢಿಯಲ್ಲಿತ್ತು. ಅರ್ಧ ವೃತ್ತಾಕಾರದ ಓಟದ ಮೈದಾನಗಳಿರುತ್ತಿದ್ದುವು. ಓಟದ ಪಂದ್ಯಗಳು ಕೆಲವು ಧಾರ್ಮಿಕ ಹಬ್ಬಗಳ ಮುಖ್ಯ ಭಾಗಗಳಾಗಿದ್ದುವು. ಅವು ರಾಜಸೂಯ ಯಾಗದಲ್ಲಿ ಗಮನಾರ್ಹ ಕಾರ್ಯಕ್ರಮಗಳಾಗಿದ್ದುವು. ಸಾರ್ವಜನಿಕ ಜೀವನದಲ್ಲಿ ಓಟದ ಪಂದ್ಯಗಳಿಗೆ ಬಹು ಪ್ರಾಮುಖ್ಯತೆಯನ್ನೂ ನೀಡಲಾಗಿತ್ತು. ಅವುಗಳ ವಿಜಯಕ್ಕಾಗಿ ಮಾಟ ಮಂತ್ರಗಳನ್ನೂ ಆಚರಿಸಲಾಗುತ್ತಿತ್ತು.

**ಆಹಾರ, ಪಾನೀಯ :** ಅಥರ್ವವೇದದಲ್ಲಿ ಅನೇಕ ಧಾನ್ಯಗಳನ್ನು ಆಹಾರಕ್ಕಾಗಿ ಬಳಸಲಾಗುತ್ತಿತ್ತು ಎಂಬುದರ ಬಗ್ಗೆ ಉಲ್ಲೇಖಗಳಿವೆ. ಅವುಗಳಲ್ಲಿ ಬಹುಮುಖ್ಯವಾದುವೆಂದರೆ, 'ವ್ರೀಹಿ', 'ಧಾನ್ಯ', 'ಯವ', 'ಗೋಧೂಮ', 'ಮಾಷ', 'ಮಸೂರ', 'ತಿಲ', 'ಸರ್ಷಪ' ಇತ್ಯಾದಿ. ಅಲ್ಲದೆ ನವನೀತ, ದಧಿ, ತಿಲ, ಘೃತ, ಮಾಂಸ ಇತ್ಯಾದಿಗಳ ಉಲ್ಲೇಖಗಳೂ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಮದ್ಯವನ್ನು ಖಂಡಿಸಲಾಗುತ್ತಿದ್ದಿತಾದರೂ ಜನಸಾಮಾನ್ಯರು ಅದನ್ನು ವ್ಯಾಪಕವಾಗಿ ಸೇವಿಸುತ್ತಿದ್ದರು. ಅದನ್ನು ಚರ್ಮದ ಚೀಲಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಮಾಂತ್ರಿಕರು ತಮ್ಮ ನಿಗೂಢ ಮಾಟ ಮಂತ್ರ ಹಾಗೂ 'ಅಭಿಚಾರ'ಗಳಿಗಾಗಿ ವಿವಿಧ ಆಹಾರ ಮತ್ತು ಪಾನೀಯಗಳನ್ನು ಸೇವಿಸುತ್ತಿದ್ದರು. ಸಾಮಾನ್ಯವಾಗಿ ಮದ್ಯ ಸೇವನೆಯನ್ನು ಖಂಡಿಸಲಾಗುತ್ತಿದ್ದಿತಾದರೂ ಪ್ರೇಮಿಗಳು ಒಟ್ಟುಗೂಡುವುದಕ್ಕಾಗಿ ಮಾಡುವ ಅಭಿಚಾರ ಪ್ರಕರಣಗಳಲ್ಲಿ ಆ ನಿರ್ಬಂಧವನ್ನು ತೆಗೆದುಹಾಕಲಾಗಿತ್ತು (ಕೌ.ಸೂ. ೩೬.೧೩.೧೪; ೧೨.೬.೯).

**ಒಗಟುಗಳು :** ಅಥರ್ವವೇದದ ಜನಪ್ರಿಯ ವಿನೋದಗಳಲ್ಲಿ 'ಕುಂತಾಪ' ಮಂತ್ರಗಳನ್ನು ಹೆಸರಿಸಲೇಬೇಕು (ಅ.ವೇ. XX.೧೨೭.೩೬). ಯಜ್ಞಗಳ ಆಚರಣೆಗೆ ಸಂಬಂಧಿಸಿದ ಸಾಮೂಹಿಕ ಪ್ರಾರ್ಥನೆಗಳಾದ ಅವು ಮತ್ತು ಅವುಗಳ ಉತ್ತರಗಳು ಭಾಗಶಃ ಒಗಟುಗಳು ಮತ್ತು ಭಾಗಶಃ ಅಶ್ಲೀಲ ಹಾಡುಗಳು ಹಾಗೂ ತಮಾಷೆಗಳಾಗಿವೆ. ಬ್ಲೂಮ್‌ಫೀಲ್ಡ್ ಮತ್ತು ವಿಂಟರ್‌ನಿಜ್‌ರು ಹೇಳಿರುವಂತೆ ಅವು ಆ ಸಂದರ್ಭದಲ್ಲಿ ಜನರನ್ನು ಸಂತೋಷಗೊಳಿಸಲು ಹಾಗೂ ದಕ್ಷಿಣೆಯನ್ನು ಎತ್ತಲು ಸಾಧನಗಳಾಗಿರಬೇಕು. ಅವು ಚೆನ್ನಾಗಿ ತಿನ್ನಲು ಮತ್ತು ಕುಡಿಯಲು ಪ್ರೇರಕವಾಗಿ ನಂತರ ಹೊಲಸು ಹಾಸ್ಯ ಮತ್ತು ಅಸಭ್ಯ ನಡೆನುಡಿಗಳಿಗೆ ದಾರಿ ಮಾಡಿಕೊಡುವಂತಹವಾಗಿರಬೇಕು.

**ಉಡುಪು :** ಇಂದು ನಾವು, ಪುರುಷರು ಹಾಗೂ ಸ್ತ್ರೀಯರು ಅಂದು ತೊಡುತ್ತಿದ್ದ ಉಡುಪುಗಳಲ್ಲಿ ಸ್ಪಷ್ಟ ವ್ಯತ್ಯಾಸವನ್ನು ಗುರುತಿಸುವ ಸ್ಥಿತಿಯಲ್ಲಿಲ್ಲ. ಅವರ ಉಡುಪು ಒಳತೊಡುಗೆ, ಹೊರತೊಡುಗೆ ಹಾಗೂ ಎದೆತೊಡುಗೆ ಎಂದು ಮೂರು ರೀತಿ ಇತ್ತು. ಒಳ ಉಡುಗೆಯಾಗಿ ಉಪಯೋಗಿಸುತ್ತಿದ್ದ 'ನೀವಿ' ಎಂಬುದರ ಉಲ್ಲೇಖವಿದೆ. 'ಉಪವಸನ' ಎಂಬುದು ಆಧುನಿಕ ವೇಲ್ (ಮೇಲುದ)ಗೆ ಸಮಾನವಾದುದಾಗಿತ್ತು. 'ವಾವ್ರಿ' ಎಂಬುದು ಮೇಲುಡುಗೆಯಾಗಿದ್ದಂತೆ ಕಾಣಿಸುತ್ತದೆ. 'ಉಷ್ಣೀಷ'



(ತಲೆಯುಡಿಗೆ) ಮತ್ತು 'ಉಪಾನಹ' (ಚಪ್ಪಲಿ)ಗಳು ಅವರ ಉಡುಪಿನ ಭಾಗಗಳಾಗಿದ್ದುವು. 'ಕುರೀರ', 'ಕುಂಬ', 'ಕಿರೀಟ'ಗಳು ಕೆಲವು ರೀತಿಯ ತಲೆಯುಡಿಗೆಗಳು ಅಥವಾ ತಲೆಯ ಆಭರಣಗಳಾಗಿದ್ದಂತೆ ಕಾಣುತ್ತವೆ. ಇವುಗಳಲ್ಲಿ ಯಾವುವು ಪುರುಷರ ಉಡುಗೆಗಳು, ಯಾವುವು ಸ್ತ್ರೀಯರವು ಎಂಬುದು ಸ್ಪಷ್ಟವಿಲ್ಲ. ಉಡುಪುಗಳ ವಸ್ತು ಉಣ್ಣೆ, ಹತ್ತಿ, ರೇಷ್ಮೆ ಮತ್ತು 'ಶನ' (ನಾರು) ಆಗಿದ್ದಂತೆ ತೋರುತ್ತದೆ. ಉಣ್ಣೆಯ ವಸ್ತ್ರಗಳನ್ನು 'ಕಂಬಲ' ಎಂದು ಕರೆಯುತ್ತಿದ್ದರು. ಅದು ಕಂಬಳಿಯಂತೆ ಹೊದೆಯಲು ಮಾತ್ರ ಉಪಯೋಗವಾಗುತ್ತಿತ್ತೆ ಅಥವಾ ಬಟ್ಟೆಯಾಗಿ ತೊಡಲು ಸಹ ಬಳಕೆಯಾಗುತ್ತಿತ್ತೆ ಎಂಬುದು ಸ್ಪಷ್ಟವಿಲ್ಲ.

**ಒಡವೆಗಳು :** ಚಿನ್ನದ ಆಭರಣಗಳನ್ನು ವ್ಯಾಪಕವಾಗಿ ಬಳಸುತ್ತಿದ್ದಂತೆ ಕಾಣುತ್ತದೆ. 'ನಿಷ್ಕ', 'ರುಕ್ಮ' ಮತ್ತು 'ಮಣಿ'ಗಳನ್ನು ಆಭರಣಗಳನ್ನಾಗಿ ಉಪಯೋಗಿಸುತ್ತಿದ್ದರು. ನಿಷ್ಕ ಬಹುಶಃ ಕೊರಳು ಸರವಾಗಿರಬಹುದು. 'ರುಕ್ಮ' ಪದದ ಅರ್ಥ ಸ್ಪಷ್ಟವಿಲ್ಲ.

**ಕ್ಷೌರ :** ಆ ಕಾಲದ ಜನ ಸ್ವಚ್ಛತೆಯ ಬಗ್ಗೆ ಜಾಗೃತರಾಗಿದ್ದರು. ಸ್ನಾನ ಮತ್ತು ಸುಗಂಧ ವಸ್ತುಗಳ ಬಳಕೆ ರೂಢಿಯಲ್ಲಿದ್ದುವು. 'ಲಾಕ್ಷ' ಎಂಬುದರ ಉಲ್ಲೇಖವಿದೆ. ಅದನ್ನು ಕೂದಲು ಬಣ್ಣವನ್ನಾಗಿ ಬಳಸುತ್ತಿದ್ದರೆ ಎಂಬುದು ಸ್ಪಷ್ಟವಿಲ್ಲ. ಅವರು ತಮ್ಮ ಕೂದಲ ಬಗ್ಗೆ ಬಹಳ ಕಾಳಜಿ ವಹಿಸುತ್ತಿದ್ದರು. ಕೆಲವು ಬಳ್ಳಿಗಳ ರಸವನ್ನು ಕೂದಲು ಪುಷ್ಟವಾಗಿ ಬೆಳೆಯಲು ಬಳಸುತ್ತಿದ್ದರು. 'ಶಮಿ' ವೃಕ್ಷದ ಗಾಢ ವಾಸನೆ ಕೂದಲು ಬೀಳಲು ಕಾರಣ ಎಂದು ಭಾವಿಸಿದ್ದರು. ಆ ವೃಕ್ಷವನ್ನು ಸಾಂತ್ವನಗೊಳಿಸಲು ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದರು. ತಲೆ ಕೂದಲು ಕುದುರೆ ಬಾಲದಂತೆ ಮತ್ತು ಬಿದಿರ ಮೆಳೆಯಂತೆ ಸಮೃದ್ಧವಾಗಿ ಬೆಳೆಯಲು ಪ್ರಾರ್ಥನೆ ಸಲ್ಲಿಸಲಾಗುತ್ತಿತ್ತು. ಆಧುನಿಕ ಬಾಚಣಿಕೆಗೆ ಪರ್ಯಾಯವಾದ ಕೃತಕ ಮುಳ್ಳಿನ ಇಕ್ಕಣಿಕೆಯಂತಹ ವಸ್ತುವನ್ನು ಮಹಿಳೆಯರು ಬಳಸುತ್ತಿದ್ದರು. ತನ್ನ ತಂದೆಯ ತಲೆಯ ಮೇಲೆ ಮತ್ತು ತನ್ನ ಗುಪ್ತಾಂಗದ ಮೇಲುಭಾಗದಲ್ಲಿ ಬಿದ್ದು ಹೋದ ಕೂದಲು ಪುನಃ ಸಮೃದ್ಧವಾಗಿ ಬೆಳೆಯುವಂತೆ ಮಾಡಿದ ಅಪಾಲಾಳ ಕಥೆ ಸ್ವಾರಸ್ಯವಾಗಿದೆ. ಋಗ್ವೇದದ ಎಂಟನೆಯ ಮಂಡಲದ ೯೧ನೆಯ ಸೂಕ್ತವನ್ನು ರಚಿಸಿದವಳು ಅತ್ರಿ ಋಷಿಯ ಮಗಳಾದ ಅಪಾಲಾ ಎಂಬ ಕವಯಿತ್ರಿ. ಅವಳನ್ನು ಮೂರು ಸಮಸ್ಯೆಗಳು ಕಾಡಿಸುತ್ತಿದ್ದುವು. ಅವಳ ಗುಹ್ಯ ಭಾಗದಲ್ಲಿ ಯಾವುದೋ ಚರ್ಮರೋಗದಿಂದ ಕೂದಲು ಬೆಳೆದಿರಲಿಲ್ಲ, ಅವಳ ತಂದೆಯ ತಲೆಯು ಕೂದಲಿಲ್ಲದೆ ಬೋಳಾಗಿತ್ತು ಮತ್ತು ಅವನ ಹೊಲದಲ್ಲಿ ಬೆಳೆಗೆ ರೋಗ ಬಿದ್ದಿತ್ತು. ಈ ಮೂರು ರೋಗಗಳ ನಿವಾರಣೆಗಾಗಿ ಅವಳು ಒಂದು ಮಾಂತ್ರಿಕ ಕ್ರಿಯೆಯನ್ನು ಆಚರಿಸಿದಳು. ಸೋಮಲತೆಯನ್ನು ಆಕೆ ತನ್ನ ಹಲ್ಲಿನಲ್ಲಿ ಜಗಿದು ಉತ್ಪತ್ತಿಯಾದ ಸೋಮರಸವನ್ನು ಆಕೆ ತನ್ನ ಬಾಯಿಂದ ನೇರವಾಗಿ ಇಂದ್ರನಿಗೆ ಕೊಟ್ಟಳು. ಈ ಸೂಕ್ತವನ್ನು ಆಧರಿಸಿದ ಶಾಟ್ಯಾಯನ ಬ್ರಾಹ್ಮಣದ ಒಂದು ಕಥೆಯಲ್ಲಿ ಇದರಿಂದ ಸಂತೃಪ್ತನಾದ ಇಂದ್ರನು ಅವಳ ಮೂರು ಇಷ್ಟಾರ್ಥಗಳನ್ನೂ ನೆರವೇರಿಸಿದನೆಂದು ಹೇಳಿದೆ. ಪರಿಣಾಮವಾಗಿ ಅವಳ ಮೈಯಲ್ಲಿ ಸೂರ್ಯಕಾಂತಿ ಮೂಡಿತು, ತಂದೆಯ ತಲೆ ಕೂದಲು ಸೊಂಪಾಗಿ ಬೆಳೆಯಿತು ಮತ್ತು ಅವನ ಹೊಲದಲ್ಲಿ ಬೆಳೆ ಸಮೃದ್ಧಿಯಾಗಿ ಬೆಳೆಯಿತು ಎಂದು ಹೇಳಿದೆ (ಋ.ವೇ. VIII. ೯೧; *ಡಾ// ಜಿ. ರಾಮಕೃಷ್ಣ* **ಭಾರತೀಯ ವಿಜ್ಞಾನದ ಹಾದಿ**).

* * *

**ನೈತಿಕ ಮೌಲ್ಯಗಳು :** ವೈದಿಕ ಜನರು ಸಹ ರಕ್ತ ಮಾಂಸಗಳಿಂದ ಕೂಡಿದ ಸಾಮಾನ್ಯ ಮಾನವರು ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಅವರು ತಮ್ಮದೇ ಆದ ಶಕ್ತಿ ಮತ್ತು ದೌರ್ಬಲ್ಯಗಳ ಸಹಜ ವಾರಸುದಾರರಾಗಿದ್ದರು. ಒಂದು ಕಡೆ ತಾತ್ವಿಕ ಚಿಂತನೆಗಳಲ್ಲಿ ತೊಡಗಿದ ಬುದ್ಧಿಜೀವಿಗಳನ್ನು, ಇನ್ನೊಂದು ಕಡೆ ಸಹಜ ಮಾನವ ಪ್ರವೃತ್ತಿಗಳಿಂದ ಕೂಡಿದ ಸ್ತ್ರೀ ಪುರುಷರನ್ನು ನಾವು ನೋಡುತ್ತೇವೆ. ಅಲ್ಲಿ ಕಳ್ಳರು, ದರೋಡೆಕೋರರು, ಸೂಳೆಯರು, ವಿಟಪುರುಷರು ಮುಂತಾದ ನೀಚ ಪ್ರವೃತ್ತಿಯವರೂ ಕಂಡುಬರುತ್ತಾರೆ. ಜೂಜುಕೋರರು,

ದಾಂಪತ್ಯ ಜೀವನದಲ್ಲಿ ಅಪ್ರಾಮಾಣಿಕರು, ಅನೈತಿಕ ಸಂಬಂಧವನ್ನುಳ್ಳವರು, ಗುಪ್ತ ಪ್ರೇಮಿಗಳು, ಅನೈತಿಕ ಗರ್ಭಧರಿಸಿ ಗರ್ಭಪಾತ ಮಾಡಿಸಿಕೊಳ್ಳುವವರು ಇತ್ಯಾದಿ ಎಲ್ಲ ಪ್ರಕರಣಗಳು ಅಲ್ಲಿ ದಾಖಲಾಗಿವೆ. ವೇದಗಳು ಉದಾತ್ತ ಚಿಂತನೆಗಳ ಜೊತೆಗೆ ಇಂತಹ ವಾಸ್ತವಿಕ ಸಂಗತಿಗಳನ್ನೂ ಉಲ್ಲೇಖಿಸಿವೆ. ಋಗ್ವೇದವು ಏನೆಲ್ಲಾ ವಿಷಯಗಳನ್ನು ಹೊಂದಿದ್ದರೂ ನೀತಿಬೋಧನೆಯ ಪಠ್ಯಪುಸ್ತಕ ಮಾತ್ರ ಖಂಡಿತ ಅಲ್ಲ ಎಂಬ ವಿಂಟರ್‌ನಿಜ್‌ನ ಮಾತು ವಾಸ್ತವವಾಗಿದೆ. ಅನೈತಿಕ ವರ್ತನೆಗಳ ಉಲ್ಲೇಖಗಳು ಸಂಹಿತೆಯ ಉದ್ದಕ್ಕೂ ಹರಡಿಕೊಂಡಿವೆ. ಓದುಗರ ಅನುಕೂಲಕ್ಕಾಗಿ ಅವುಗಳನ್ನು ಇಲ್ಲಿ ಒಂದೆಡೆ ಸಂಗ್ರಹಿಸಲಾಗಿದೆ.

ಗಂಡು ಹೆಣ್ಣುಗಳ ಸತತ ಆಕರ್ಷಣೆ ಅನೇಕ ಭಾಗಗಳಲ್ಲಿ ದಾಖಲಾಗಿದೆ. ಉದಯ ಸೂರ್ಯನು ಸುಂದರ ಉಷೆಯನ್ನು ಹಿಂಬಾಲಿಸುತ್ತಿದ್ದಾನೆ ಎಂಬ ಮಾತು ತರುಣರು ಸುಂದರಾಂಗಿಯರನ್ನು ಹಿಂಬಾಲಿಸುವ ದೃಶ್ಯವನ್ನು ನೆನಪಿಗೆ ತರುತ್ತದೆ. ಯಮ - ಯಮಿಯರ ಸಂವಾದ ಸೂಕ್ತವೂ ಕಾಮೋನ್ಮತ್ತಳಾದ ಹೆಣ್ಣು ಪುರುಷನೊಡನೆ ಅವನು ತನ್ನ ಸಹೋದರನಾಗಿದ್ದರೂ ಸಹ - ಸುಖಾನುಭವ ಪಡೆಯಲು ಹೇಗೆ ತವಕಿಸುತ್ತಾಳೆ ಎಂಬುದನ್ನು ಚಿತ್ರಿಸುತ್ತದೆ. ಋಗ್ವೇದದ ಪ್ರಸಿದ್ಧ ಅಕ್ಷ ಸೂತ್ರದಲ್ಲಿ ಒಬ್ಬ ಜೂಜಿನ ಆಟಕ್ಕೆ ಬಲಿಯಾದವನು, ಸೂಳೆಯು ತನ್ನ ಮಿಂಡನನ್ನು ಆಕರ್ಷಿಸುವಂತೆ ಪಗಡೆಯಾಟವು ತನ್ನನ್ನು ಸೆಳೆಯುತ್ತಿದೆ ಎಂದು ಪ್ರಲಾಪಿಸುತ್ತಾನೆ. ಒಂದುಕಡೆ ಒಬ್ಬ ವಿಧವೆಯು ಮಲಗುವ ಮುನ್ನ ತನ್ನ ಗಂಡನ ಸೋದರನ ಮೈ ನೇವರಿಸುವ ಚಿತ್ರ ಇದೆ (ಋ.ವೇ. X. ೪೦.೨). ಇದರಿಂದ ಆ ಕಾಲದಲ್ಲಿ ಎಲ್ಲ ವಿಧವೆಯರೂ ಸಂಯಮದ ಜೀವನ ನಡೆಸುತ್ತಿರಲಿಲ್ಲ ಎಂದು ತಿಳಿಯುತ್ತದೆ. ಅನಂತರದ ಕಾಲದಲ್ಲಿ ಮಕ್ಕಳಿಲ್ಲದ ವಿಧವೆ ತನ್ನ ಮೈದುನನಿಂದ ಮಕ್ಕಳನ್ನು ಪಡೆಯುವ ಅವಕಾಶವನ್ನು ಪಡೆದಿದ್ದಳು ಎಂಬುದನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದು. ಆ ಪದ್ಧತಿಯನ್ನು 'ನಿಯೋಗ' ಎಂದು ಕರೆಯುತ್ತಿದ್ದರು. ಋಗ್ವೇದದ ಒಂದು ಸೂಕ್ತವು ವ್ಯಭಿಚಾರವನ್ನು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ (ಅದೇ. X.೪೦.೬). ಅಕ್ಷ ಸೂತ್ರದಲ್ಲಿ ಒಬ್ಬ ಜೂಜುಕೋರ ಆಟದಲ್ಲಿ ತನ್ನ ಹಣವನ್ನೆಲ್ಲಾ ಕಳೆದುಕೊಂಡರೆ ಅವನ ಹೆಂಡತಿಯ ಮೈಮೇಲೆ ಅನ್ಯರು ಕೈ ಹಾಕುತ್ತಿದ್ದರು ಎಂದು ಹೇಳಲಾಗಿದೆ. ಕೆಲವು ಸಂದರ್ಭಗಳಲ್ಲಿ ಒಬ್ಬನ ಹೆಂಡತಿಯು ಇನ್ನೊಬ್ಬನ ವ್ಯಭಿಚಾರಕ್ಕೆ ಗುರಿಯಾಗುತ್ತಿದ್ದಳು ಎಂದು ಹೇಳಲು ಇದು ಸಾಕ್ಷಿಯಾಗಿದೆ. ದುರಾಚಾರಿಯಾದ ಹೆಣ್ಣು ತನ್ನ ಗಂಡನನ್ನು ಧಿಕ್ಕರಿಸಿ ವ್ಯಭಿಚಾರಿಯಾಗುತ್ತಿದ್ದ ಪ್ರಸಂಗಗಳೂ ಉಂಟು.

ಅಕ್ರಮವಾಗಿ ಗರ್ಭಧಾರಣೆಯಾಗಿದ್ದರೆ ಗರ್ಭಪಾತ ಮಾಡಿಸುವುದನ್ನು ಒಂದು ಕಡೆ ನಾವು ನೋಡುತ್ತೇವೆ (ಅದೇ. II. ೨೯.೧). ಈ ರೀತಿ ಗರ್ಭಪಾತ ಮಾಡಿಸಿದಾಗ ಆ ಭ್ರೂಣವನ್ನು ದೂರದ ಸ್ಥಳದಲ್ಲಿ ಬಿಸಾಡಲಾಗುತ್ತಿತ್ತು. ಒಂದು ಕಡೆ ಮದುವೆಯಾಗದ ಹದಿಹರೆಯದವಳಿಗೆ ಮಗುವಾದುದನ್ನು ಸೂಚಿಸಿದೆ (ಅದೇ. VII. ೪೬. ೨೪). ಇನ್ನೊಂದು ಕಡೆ ಒಬ್ಬ ವಿಧವೆಯು ಪುರುಷನಿಗಾಗಿ ಅಥವಾ ಹಣಕ್ಕಾಗಿ ಅನ್ಯರ ಮನೆಯನ್ನು ಪ್ರವೇಶಿಸುವ ಚಿತ್ರವಿದೆ (ಅದೇ. I. ೧೨೪.೭). ಜೀವನದುದ್ದಕ್ಕೂ ಅವಿವಾಹಿತರಾಗಿಯೇ ಉಳಿದ ಹೆಂಗಸರು ಗುಪ್ತ ಪ್ರಣಯದಲ್ಲಿ ತೊಡಗುವುದನ್ನೂ ನಾವು ನೋಡಬಹುದು. ಹಣ ಗಳಿಸುವ ಸಲುವಾಗಿ ವಿಧವೆಯರೂ ಜೂಜು ಕೇಂದ್ರಗಳಿಗೆ ಆಗಾಗ ಭೇಟಿಯಾಗುತ್ತಿದ್ದರು. ತರುಣ ತರುಣಿಯರು ಪರಸ್ಪರ ಪ್ರೇಮಾಲಿಂಗನಕ್ಕಾಗಿ ಮುಗಿಬೀಳುವುದನ್ನು ಸಹ ನೋಡಬಹುದು ( ಅದೇ. X. ೩೦.೫, ೬). ಆ ಋಕ್ಕನ್ನು ಗಮನಿಸಿದರೆ ಅದು ವಿವಾಹ ದೃಷ್ಟಿಯಿಂದಾದ ಕ್ರಿಯೆಯಲ್ಲವೆಂದು ಮನವರಿಕೆಯಾಗುತ್ತದೆ. ಅದು ಹದಿಹರೆಯದ ತರುಣ ತರುಣಿಯರ ನಡುವಿನ ಮುಕ್ತ ಪ್ರೇಮ ಪ್ರಕರಣ ಎಂದು ತಿಳಿದುಬರುತ್ತದೆ. ಲೈಂಗಿಕ ಸಂದರ್ಭಗಳಲ್ಲಿ ಅತ್ಯಂತ ಆಘಾತಕಾರಕವಾದುದೆಂದರೆ ತಂದೆ ಮಗಳ ನಡುವಿನ ಅಕ್ರಮ ಲೈಂಗಿಕ ಸಂಬಂಧವಾಗಿದೆ (ಅದೇ. X. ೬೧. ೫, ೭). ಪೂಷನ್ ತನ್ನ ಸ್ವಂತ ತಂಗಿಯಾದ ಉಷಸ್‌ಳ ಮಿಂಡನೆಂದು ಜನರು ತೀರ್ಮಾನಿಸುವುದನ್ನು ಒಂದು ಸೂಕ್ತ ಉಲ್ಲೇಖಿಸುತ್ತದೆ (ಅದೇ. VI. ೫೫.೪).

ಅಥರ್ವವೇದದಲ್ಲೂ ನಾನಾ ಬಗೆಯ ಅನೈತಿಕ ಕೃತ್ಯಗಳ ವಿವರಗಳು ದಾಖಲಾಗಿವೆ. ಕಳ್ಳತನ ಮಾಡುವವರನ್ನು 'ತಸ್ಕರ', 'ಸ್ತೇನ' ಇತ್ಯಾದಿ ಹೆಸರುಗಳಿಂದ ಕರೆಯಲಾಗಿದೆ. ಕಳವು ಮಾಡುವ ವಸ್ತುಗಳಲ್ಲಿ ಹಸು ಪ್ರಧಾನವಾಗಿತ್ತು. ಸತ್ತ ಗಂಡನ ಹೆಣದೊಡನೆ ಅವನ ವಿಧವೆಯನ್ನು ಜೀವಂತ ಸುಡುವುದು ಸಹ ಅದರಲ್ಲಿ ದಾಖಲಾಗಿದೆ (ಅ. ವೇ. XVIII. ೩.೧). ಅದು ಎಷ್ಟರ ಮಟ್ಟಿಗೆ ಸ್ವಯಂ ಇಚ್ಛೆಯಿಂದ ನಡೆಯುತ್ತಿತ್ತು ಎಂಬುದು ಸ್ಪಷ್ಟವಿಲ್ಲ.

ಕೆಲವರು ತಮ್ಮ ಸ್ವಂತ ಕೈಯಿಂದ ತಮ್ಮ ತಂದೆ ತಾಯಿಯರನ್ನು ಮತ್ತು ಸೋದರರನ್ನು ಕೊಲ್ಲುತ್ತಿದ್ದರು ಎಂದು ಹೇಳಲಾಗಿದೆ (ಅ. ವೇ. ೫. ೩೫.೪). ಅನೇಕ ಖಂಡನಾರ್ಹ ಪದ್ಧತಿಗಳು ಅಲ್ಲಿ ದಾಖಲಾಗಿವೆ. ಅಂಥವುಗಳಲ್ಲಿ ಪಗಡೆಯಾಟ, ಅನ್ಯಸ್ತ್ರೀ ಸಂಗ ಮುಖ್ಯವಾದವುಗಳಾಗಿವೆ. ವೇಶ್ಯಾ ಪದ್ಧತಿ ಸಾಮಾನ್ಯವಾಗಿದ್ದಂತೆ ಕಂಡುಬರುತ್ತದೆ. ಮದ್ಯಪಾನ, ಮಾಂಸಾಹಾರ, ಸ್ತ್ರೀ ಸಂಗ ಅಪರಾಧಗಳೆಂದೇನೂ ಪರಿಗಣಿಸಿರಲಿಲ್ಲ, ಆದರೆ ಆ ಚಟಗಳಿಂದ ದೂರವಿರುವುದು ಗೌರವಾರ್ಹವೆಂದು ಅಥರ್ವವೇದ ತಿಳಿಸುತ್ತದೆ.

ಬಿ. ವಿ. ವೀರಭದ್ರಪ್ಪ
ಬಿ - ೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ನಾಗೇಶಿಯ ನವ್ಯ ಕತೆ

ಡಿ. ಆರ್. ಬಾಲು

ನಾನು ಇಂಜಿನಿಯರಿಂಗ್ ಕಾಲೇಜೊಂದರ ರಸಾಯನಶಾಸ್ತ್ರ ವಿಭಾಗದಲ್ಲಿ ಅಧ್ಯಾಪಕನಾಗಿದ್ದೇನೆ. ಅದೇ ಕಾಲೇಜಿನ ಭೌತಶಾಸ್ತ್ರ ವಿಭಾಗದಲ್ಲಿ ಮೇಸ್ಟರಾಗಿರುವ ನಾಗೇಶಿ ನನ್ನ ಆಪ್ತ ಮಿತ್ರರಲ್ಲೊಬ್ಬ. ನಾವಿಬ್ಬರೂ ಕೂಡಿ ದಿನಾಲೂ ಸಂಜೆ ಹೊತ್ತು ತಿರುಗಾಡಲು ಹೋಗಿ ಬರುವುದುಂಟು. ಎಂದಿನಂತೆಯೇ ಅಂದೂ ಸಂಜೆ ಸುಮಾರು ಆರು ಘಂಟೆ ಹೊತ್ತಿಗೆ ಅವನ ಮನೆಗೆ ಹೋದೆ. ಎಂದೂ ಈ ವೇಳೆಗಾಗಲೇ ಸಿಂಗಾರ ಗಿಂಗಾರ ಎಲ್ಲ ಮುಗಿಸಿ ಹೊರಡಲು ಸಿದ್ಧನಾಗಿರುವವನು ಇಂದು ಯಾಕೋ ಇನ್ನೂ ಮುಖ ಸಹ ತೊಳೆಯದೆ ತನ್ನ ಕೋಣೆಯಲ್ಲಿ ಬೆತ್ತದ ಕುರ್ಚಿಯೊಂದರಲ್ಲಿ ಕೂತು ಮಂಕು ಬಡಿದವನಂತೆ ಸೂರನ್ನೇ ದಿಟ್ಟಿಸುತ್ತ ಸಿಗರೇಟು ಸೇದ್ತಿದ್ದ.

''ಯಾಕೋ ಇನ್ನೂ ತಯಾರಾಗಿಲ್ಲ ? ಆಗಲೆ ಆರು ಹೊಡೆದು ಐದು ನಿಮಿಷ ಕಳೀತು. ಎದ್ದು ಮುಖ ತೊಳೆದು ಬಟ್ಟೆ ಬದಲಾಯಿಸು. ಹೊರಡೋಣ'' ಅಂದೆ.

''ಹೊರಡೋಣಂತೆ ಕೂತ್ಕೊ, ಏನಂಥ ಅವಸರ ?'' ಎಂದು ತನ್ನ ಎದುರಿಗಿದ್ದ ಕುರ್ಚಿ ತೋರಿಸಿದ.

''ಅವಸರ ಅಂತಲ್ಲ. ಸಂಜೆ ಹೊತ್ತು ಮನೆ ಒಳಗೆ ಕೂತಿರೋಕೆ ನನಗೆ ಬೇಸರ'' ಅಂದೆ.

''ಅರೆ ಹೋದರಾಯಿತು ಕೂತ್ಕೊಳ್ಳಯ್ಯ'' ಎಂದು ಗದರಿಸಿ, ನಾನು ತೆಪ್ಪಗೆ ಕುಳಿತ ಅನಂತರ ''ಲೇ ಇವಳೇ'' ಎಂದು ಕೂಗು ಹಾಕಿ, ಅಡಿಗೆ ಮನೆಯಿಂದ 'ಏನು ?' ಎಂದು ಪ್ರತಿಕ್ರಿಯೆ ಕೇಳಿಬಂದಾಗ ''ಅದು ರೆಡಿಯಾಗಿದ್ರೆ ತೊಗೊಂಡು ಬಾ'' ಎಂದು ಜೋರು ದನಿಯಲ್ಲಿ ಅಪ್ಪಣೆ ಮಾಡಿದ.

ಈಗ ಯಾವುದೋ ಒಂದು ತಿಂಡಿ ಇಲ್ಲಿಗೆ ಬರಲಿದೆ ಎಂದು ಊಹಿಸಲು ನನಗೇನೂ ಕಷ್ಟವಾಗಲಿಲ್ಲ. ಅದು ಯಾವ ತಿಂಡಿಯಾಗಿರಬಹುದು ? ಬೋಂಡ ? ವಡೆ ? ಬಜ್ಜಿ ? ಪಕೋಡ ? ಚಕ್ಲಿ ? ಬಗೆ ಬಗೆಯ ತಿಂಡಿ ತಿನಿಸುಗಳು ನನ್ನ ಕಲ್ಪನೆಯಲ್ಲಿ ಮೂಡಿದವು. ಇಷ್ಟರಲ್ಲೆ ನಾಗೇಶಿಯ ಅರ್ಧಾಂಗಿ ಒಂದು ತಟ್ಟೆಯ ತುಂಬ ಬಿಸಿ ಬಿಸಿ ಆಂಬೊಡೆಗಳನ್ನು ತಂದು ಅವನ ಬರೆಯುವ ಮೇಜಿನ ಮೇಲಿಟ್ಟು ಹೋದಳು. ಆಂಬೊಡೆ ಕಣ್ಣಿಗೆ ಬಿದ್ದಾಕ್ಷಣ ನನ್ನ ಬಾಯಲ್ಲಿ ನೀರೂರಿತಾದರೂ ''ಈಗ ಇದೆಲ್ಲ ಯಾಕೆ ಮಾಡಿಸ್ದೆ ನಾಗೇಶಿ. ನಾನು ಇಲ್ಲಿಗೆ ಬರೋಕೆ ಮುಂಚೆ ತಿಂಡಿ ತಿಂದ್ಕೊಂಡೇ ಬಂದೆ. ಈಗ ಇದನ್ನೂ ಇಳಿಸಿದರೆ ರಾತ್ರಿ ಊಟ ಸೇರೊಲ್ಲ'' ಎಂದು ಸಂಕೋಚದ ಸೋಗು ಹಾಕಿದೆ.

''ಪರವಾಗಿಲ್ಲ ತೊಗೊಳ್ಳಯ್ಯ, ನಾಲ್ಕು ಆಂಬೊಡೆ ತಿಂದುಬಿಟ್ರೆ ನಿನ್ನ ಹಸಿವೇನೂ ಹಾಳಾಗೋಲ್ಲ'' - ನಾಗೇಶಿ ಒತ್ತಾಯಿಸಿದ. ''ಏನು ವಿಶೇಷ ಇವತ್ತು ? ನಿನ್ನ ಹುಟ್ಟಿದ ಹಬ್ಬಾನಾ ?'' ಅಂದೆ. ''ಏಽಽ ಹಾಗೇನಿಲ್ಲ, ಸುಮ್ಮನೆ, ತಿನ್ನಬೇಕು ಅನ್ನಿಸ್ತು, ಮಾಡಿಸ್ದೆ'' ಅಂದ ನಾಗೇಶಿ.

ನಾನು ತಟ್ಟೆಯಲ್ಲಿದ್ದ ಆಂಬೊಡೆಗೆ ಕೈ ಹಾಕುವುದರಲ್ಲಿದ್ದೆ, ಅಷ್ಟರಲ್ಲಿ ನಾಗೇಶಿ ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಕೆಲವು ಹಾಳೆಗಳನ್ನು ಕೈಗೆತ್ತಿಕೊಂಡು ''ಈಗ ನಾನೊಂದು ಕೆಲಸ ಮಾಡ್ತೀನಿ. ನೀನು ಆಂಬೊಡೆ ತಿಂತಾ ಇರೋವಾಗ ನಾನು ಇತ್ತೀಚೆಗೆ ಬರೆದ ಕತೇನ ಒಂದು ಸರ್ತಿ ಗಟ್ಟಿಯಾಗಿ ಓದ್ತೀನಿ. ಶ್ರದ್ಧೆಯಿಂದ ಕೇಳಿಸ್ಕೊ. ಮಧ್ಯೆ ಮಧ್ಯೆ ಅಥವಾ ಕೊನೆಯಲ್ಲಿ ನಿನ್ನ ಟೀಕೆಗಳನ್ನೋ



ಅನಿಸಿಕೆಗಳನ್ನೋ ಹೇಳಬಹುದು'' ಅಂದ.

ಅಯ್ಯೋ ಗ್ರಹಚಾರವೇ, ಅನ್ನಿಸಿ ಆಂಬೊಡೆಯ ಮೇಲಿನ ಆಸೆಯೆಲ್ಲಾ ಕ್ಷಣಾರ್ಧದಲ್ಲಿ ಜರ್ರನೆ ಇಳಿದು ಹೋಯಿತು. ''ನಾಲ್ಕು ಆಂಬೊಡೆ ತಿನ್ನಿಸಿ ನನ್ನ ಒಂದು ಸಂಜೆಯನ್ನು ಹಾಳುಮಾಡುವ ಯೋಜನೆ ಹಾಕಿದಾನಲ್ಲ ಕದೀಮ'' ಎಂದು ಮನಸ್ಸಿನಲ್ಲೆ ಅವನನ್ನು ಶಪಿಸಿದೆ.

ನಾಗೇಶಿ ಕತೆ ಬರೆದು ಪತ್ರಿಕೆಗಳಿಗೆ ಕಳಿಸುತ್ತಿರುವುದು ಇದೇ ಮೊದಲಸಲವೇನಲ್ಲ. ಮೂರು ತಿಂಗಳಿಗೋ ಆರು ತಿಂಗಳಿಗೋ ಒಮ್ಮೆ ಸಂಜೆ ಹೊತ್ತು ಅಡ್ಡಾಡಿ ಬರುವುದನ್ನು ಬಿಟ್ಟು, ರಾತ್ರಿ ನಿದ್ದೆಗೆಟ್ಟು ಕತೆ ಬರೆದು ಕಳಿಸ್ತಾನೇ ಇದಾನೆ. ಈ ಪರಿಶ್ರಮದ ಫಲ - ಅವನು ಒಂದೊಂದು ಕತೆ ಬರೆದ ನಂತರವೂ ಅವನ ತೂಕ ಒಂದು ಕೆ.ಜಿ. ಹೆಚ್ಚುತ್ತದೆಯೇ ಹೊರತು ಕೀರ್ತಿ ಮಾತ್ರ ಒಂದು ಚೂರೂ ಬೆಳೆದಿಲ್ಲ.

ಆದ್ದರಿಂದಲೇ ಹೇಳಿದೆ, ''ಅಲ್ವೊ ನಾಗೇಶಿ, ನೀನೇನೋ ಪಾಪ ಕಷ್ಟ ಪಟ್ಟು ಕತೆಗಳ ಮೇಲೆ ಕತೆಗಳನ್ನು ಬರೆದು ಪತ್ರಿಕೆಗಳವರಿಗೆ ಕಳಿಸ್ತಾನೇ ಇದೀಯ. ಆದರೆ ಆ ಪತ್ರಿಕೆಗಳವರಿಗೆ ನಿನ್ನ ಸಾಹಿತ್ಯ ಕೃತಿಗಳು ಬೇಕಿಲ್ಲವಲ್ಲಪ್ಪ. ನೀನು ಕಳಿಸುವ ಪ್ರತಿಯೊಂದು ಕತೆಯೂ ಕಳಿಸಿದ ಒಂದು ತಿಂಗಳೊಳಗೆ ಚಾಚೂ ತಪ್ಪದೆ ಸಂಪಾದಕರ ವಿಷಾದ ಪತ್ರ ಹೊತ್ತು ಹಿಂದಿರುಗಿ ಬಂದು ಬಿಡತ್ತಲ್ಲಪ್ಪ. ಇದರಿಂದ ಏನು ಸಾಧಿಸಿದಂತಾಯಿತು ? ಇದೆಲ್ಲ ವ್ಯರ್ಥ ಪರಿಶ್ರಮ ಅನ್ನಿಸೊಲ್ವೆ ನಿನಗೆ ? ಅದಕ್ಕೆ ಬದಲು ಸಂಜೆ ಹೊತ್ತು ಅಡ್ಡಾಡಿ ಬಂದ್ರೆ ನಿನ್ನ ಮೈಯಲ್ಲಿನ ಬೊಜ್ಜಾದ್ರು ಸ್ವಲ್ಪ ಮಟ್ಟಿಗೆ ಕರಗಬಹುದು ಅಲ್ವೇ ? ನೀನೇ ಯೋಚಿಸಿ ನೋಡು.'' ಅವನಿಗೆ ಬೊಜ್ಜೂ ಇಲ್ಲ ಅನ್ನಿ.

ನನ್ನ ಹಿತೋಪದೇಶ ಅವನಿಗೆ ಹಿಡಿಸಲಿಲ್ಲಾಂತ ಕಾಣುತ್ತೆ. ನನ್ನನ್ನೇ ಒಂದು ಕ್ಷಣ ದುರುಗುಟ್ಟಿ ನೋಡಿ, ಕೈಲಿದ್ದ ಸಿಗರೇಟಿನಿಂದ ಬರಬರನೆ ನಾಲ್ಕು ದಮ್ ಎಳೆದು, ಉಳಿದ ತುಂಡನ್ನು ಕಿಟಕಿಯ ಮೂಲಕ ಹೊರಗೆ ಬಿಸಾಡಿ, ನನ್ನ ಮುಖಕ್ಕೆ ನೇರವಾಗಿ ಹೊಗೆ ಉಗುಳಿ ''ನೀನು ಹೇಳಿದ್ದು ಸುಳ್ಳು ಅಂತ ನಾನು ಹೇಳಲ್ಲ ಕಣಯ್ಯ. ಇದುವರೆಗೂ ನನ್ನ ಒಂದು ಕತೆಯೂ ಪ್ರಕಟವಾಗಿಲ್ಲ ನಿಜ, ಆದರೆ ಈ ಸರ್ತಿ ಹಾಗಾಗಲಾರದು. ಆಗೋಕೆ ಸಾಧ್ಯವೇ ಇಲ್ಲ. ಏಕೆಂದರೆ ಈ ಸರ್ತಿ ನಾನು ಎಂಥಾ ಕತೆ ಬರೆದು ಕಳಿಸ್ತಿದೀನಿ ಅಂದ್ರೆ, ಯಾವ ಸಂಪಾದಕನಿಗಾದರೂ ಅದು ಹಿಡಿಸಲೇಬೇಕು, ಅದನ್ನು ಅವನು ಪ್ರಕಟಿಸಲೇಬೇಕು. ಬೇಕಾದರೆ ಕಾದು ನೋಡು'' ಎಂದು ಭಾವಾವೇಶದಲ್ಲಿ ಬಡಬಡಿಸಿದ.

''ಅಷ್ಟು ಭರವಸೆ ಇದೆಯಾ ?''

''ಖಂಡಿತವಾಗಿಯೂ,'' ಎಂದು ಉದ್ಗರಿಸಿ ನಾಗೇಶಿ ಮುಂದುವರೆಸಿದ, ''ಯಾಕೇಂದ್ರೆ ಇದುವರೆಗೆ ನಾನು ಬರೇ ಸಾಂಪ್ರದಾಯಿಕ ಕತೆಗಳನ್ನೇ ಬರೀತಿದ್ದೆ. ಅದೇ ನಾನು ಮಾಡಿದ ದೊಡ್ಡ ತಪ್ಪು ನೋಡು. ನವ್ಯ ಕತೆಗಳನ್ನು ಬರೆಯೋದೆ ಈಗಿನ ಫ್ಯಾಶನ್ ಅಂತ ಇತ್ತೀಚೆಗೆ ನನಗೆ ಜ್ಞಾನೋದಯವಾಯ್ತು. ಕಾಲಕ್ಕೆ ತಕ್ಕಂತೆ ನಾವು, ನಮ್ಮ ಬರವಣಿಗೆ ಎಲ್ಲ ಬದಲಾಗಬೇಕಲ್ವೇ ? ಅದಕ್ಕೆ ಹಳೆಯ ಜಾಡನ್ನು ತೊರೆದು ಹೊಸ ಜಾಡನ್ನು ತುಳೀಬೇಕೂಂತ ತೀರ್ಮಾನಿಸಿ ಈ ಕತೆ ಬರಿದಿದೀನಿ. ಈ ಕತೆ ಇದೆಯಲ್ಲ ಅದು ವಸ್ತು, ನಿರೂಪಣೆ, ಶೈಲಿ, ತಂತ್ರ ಎಲ್ಲ ದೃಷ್ಟಿಯಿಂದಲೂ ಅಪ್ಪಟ ನವ್ಯ. ಅತಿ ನವ್ಯ ಅಂತಲೂ ಹೇಳಬಹುದು. ಕಾಮ, ಪ್ರೇಮ, ಮಣ್ಣಿನ ವಾಸನೆ, ಪರಕೀಯ ಪ್ರಜ್ಞೆ, ಅನಾಥ ಪ್ರಜ್ಞೆ, ಮೌಲ್ಯಗಳ ಘರ್ಷಣೆ, ಸಂಕೇತ, ಪ್ರತಿಮೆ, ನನ್ನ ಕತೆಯಲ್ಲಿ ಇವೆಲ್ಲ ಇವೆ. ಇದಕ್ಕಿಂತ ಹೆಚ್ಚಿಗೆ ಇನ್ನೂ ಏನೇನೋ ಇದೆ'' ಎಂದು ಹೇಳಿ ಪರಮ ವಿಶ್ವಾಸದಿಂದ ತಲೆಯಲ್ಲಾಡಿಸಿದ.

ನನಗೆ ಈಗ ಕಾದಿರುವ ಕಠಿಣ ಶಿಕ್ಷೆಯಿಂದ ಹೇಗಾದರೂ ಪಾರಾಗಬೇಕು ಅಂದುಕೊಂಡು ''ಅಷ್ಟು

ಆತ್ಮವಿಶ್ವಾಸ ಇದ್ದ ಮೇಲೆ ನನ್ನ ಅಭಿಪ್ರಾಯ ಯಾಕೆ ಕೇಳ್ಬೇಕು ? ಅದರ ಅವಶ್ಯಕತೆ ಇಲ್ಲ ಕಳಿಸಿಬಿಡು'' ಅಂದೆ.

''ನನಗೇನೋ ಪೂರಾ ಆತ್ಮವಿಶ್ವಾಸವಿದೆ ಕಣಯ್ಯ. ಆದರೂ ನವ್ಯ ಕಥಾ ರಚನೆಯಲ್ಲಿ ಇದು ನನ್ನ ಪ್ರಥಮ ಪ್ರಯತ್ನ ನೋಡು. ಅದಕ್ಕೇ ನಿನ್ನ ಎದುರಿಗೆ ಒಂದುಸರ್ತಿ ಓದಿ.....''

ನಾನು ಅವನನ್ನು ತಡೆದು ''ನನಗೆ ನವ್ಯ ಕತೆಗಳು ಸುಲಭವಾಗಿ ಅರ್ಥವಾಗೊಲ್ಲ, ನಾಗೇಶಿ. ಅದೇನೋ ಮಣ್ಣಿನ ವಾಸನೆ, ಗೊಬ್ಬರ ವಾಸನೆ, ಬೆವರಿನ ವಾಸನೆ, ಅನಾಥ ಪ್ರಜ್ಞೆ ಅಂತ ನೀನು ಏನೇನೋ ಹೇಳಿದ್ಯಲ್ಲ. ಅದೆಲ್ಲ ನನ್ನ ತಲೆಗೆ ಹತ್ತಲ್ಲಪ್ಪ'' ಎಂದು ಹೇಳಿ ಮತ್ತೆ ಜಾರಿಕೊಳ್ಳಲು ಯತ್ನಿಸಿದೆ.

ಆದರೆ ಹಾಳಾದವನು ಬಿಡಬೇಕಲ್ಲ! ''ಅದಕ್ಯಾಕೆ ಇಷ್ಟು ಚಿಂತೆ ? ಅರ್ಥವಾಗದಿದ್ರೆ ಸಂಕೋಚ ಬಿಟ್ಟು ಕೇಳು. ಬಿಡಿಸಿ ಹೇಳೋಕೆ ನಾನಿದೀನಿ'' ಎಂದು ಥೇಟ್ ತರಗತಿಯಲ್ಲಿ ತನ್ನ ವಿದ್ಯಾರ್ಥಿಗಳಿಗೆ ಹೇಳುವ ಧಾಟಿಯಲ್ಲಿ ಹೇಳಿ, ನನಗೆ ತಪ್ಪಿಸಿಕೊಳ್ಳಲು ಬೇರೆ ಉಪಾಯಗಳನ್ನು ಹುಡುಕಲು ಅವಕಾಶವನ್ನೇ ಕೊಡದೆ ''ಸರಿ, ಇನ್ನು ಶುರು ಮಾಡ್ತೀನಿ. ಸುಮ್ಮನೆ ಸಮಯ ಹಾಳು ಮಾಡುವುದು ಬೇಡ'' ಎಂದು ತನ್ನ ಕತೆಯ ವಾಚನವನ್ನು ಪ್ರಾರಂಭಿಸಿಯೇಬಿಟ್ಟ. ನಿರ್ವಾಹವಿಲ್ಲದೆ ನಾನು ತಟ್ಟೆಯಿಂದ ಒಂದು ಆಂಬೊಡೆ ತೆಗೆದು ತಿನ್ನಲಾರಂಭಿಸಿದೆ. ಹತ್ತು ಸೆಕೆಂಡು ಕಳೆದಿರಲಿಲ್ಲ, ಅಷ್ಟರಲ್ಲಿ ನಾಗೇಶಿ ಥಟ್ಟನೆ ತನ್ನ ವಾಚನವನ್ನು ನಿಲ್ಲಿಸಿ ''ಹೇಗಿದೆ ?'' ಎಂದು ಕೇಳಿದಾಗ ನಾನು ಒಂದು ಕ್ಷಣ ಗೊಂದಲದಲ್ಲಿ ಸಿಕ್ಕಿಬಿದ್ದೆ. ''ಭಾಳ ರುಚಿಯಾಗಿದೆ'' ಅಂದುಬಿಟ್ಟೆ.

''ಏನು ರುಚಿಯಾಗಿರೋದು ನಿನ್ನ ತಲೆ ? ನಾನು ಕೇಳಿದ್ದು ನನ್ನ ಕತೆಯ ಹೆಸರು ಹೇಗಿದೆ ಅಂತ. ಆಂಬೊಡೆ ಹೇಗಿದೆ ಅಂತಲ್ಲ,'' ನಾಗೇಶಿ ಸಿಡುಕಿದ.

''ಓ, ಐ ಆಮ್ ಸಾರಿ, ನಾನು ಸರಿಯಾಗಿ ಕೇಳಿಸಿಕೊಳ್ಳಲಿಲ್ಲ. ದಯವಿಟ್ಟು ಇನ್ನೊಂದು ಸರ್ತಿ ಓದ್ತಿಯಾ ?''

''ಹ್ಞೂಂ ! ಕತೆಯ ಕಡೆಗೂ ಸ್ವಲ್ಪ ಗಮನ ಇರಲಿ'' ಎಂದು ಬಿಗಿಯಾಗಿ ಹೇಳಿ ''ಆಂಗ್ರಿ ಯಂಗ್ ಮ್ಯಾನ್ ಪ್ರೇಮಕುಮಾರನ ಜೀವನದಲ್ಲಿ ಮೂವತ್ತು ನಿಮಿಷಗಳು'' ಎಂದು ಕತೆಯ ಶಿರೋನಾಮೆಯನ್ನು ಇನ್ನೊಮ್ಮೆ ಗಟ್ಟಿಯಾಗಿ ಓದಿ ''ಏನು ಅನ್ನಿಸುತ್ತೆ? ತುಂಬಾ ಗಮನಾರ್ಹವಾಗಿದೆ ಅಲ್ವಾ ?'' ಎಂದು ಹುಬ್ಬು ಹಾರಿಸಿ ಕೇಳಿದ.

''ಖಂಡಿತವಾಗಿಯೂ'' ಅಂದೆ.

''ಈಗ ಕತೆ ಓದ್ತೀನಿ ಕೇಳಿಸ್ಕೊ'' ಎಂದು ಹೇಳಿ ಆರಂಭಿಸಿದ; ತುಟಿಗಳ ನಡುವೆ ಉರಿಯುತ್ತಿರುವ ಚಾರ್‌ಮಿನಾರ್ ಸಿಗರೇಟ್, ಬಲಗೈಯಲ್ಲಿ ಫಿಲಂಫೇರ್ ಪತ್ರಿಕೆ, ಎಡಗೈಯಲ್ಲಿ ನೀರಿನ ಬಕೆಟ್. ಪ್ರೇಮಕುಮಾರ ತನ್ನ ವಠಾರದ ಹಿತ್ತಲಲ್ಲಿನ ಬಹಿರ್ದೇಶ ಪ್ರದೇಶದೊಳಗೆ ಕಾಲಿಟ್ಟ. ಒಳಗಿನ ದುರ್ನಾತ ಗಪ್ಪನೆ ಮೂಗಿಗೆ ಬಡಿಯಲು ಹೊಟ್ಟೆ ತೊಳಸಿ ಬಂದು ಅಸಹ್ಯದಿಂದ ಉಗಿದು ಬಲ ಗೈಲಿದ್ದ ಪತ್ರಿಕೆಯನ್ನು ಮೂಗಿಗೆ ಅಡ್ಡಲಾಗಿ ಹಿಡಿದ......

ಇದ್ದಕ್ಕಿದ್ದಂತೆ ನನಗೂ ಹೊಟ್ಟೆ ತೊಳಸಿ ಬಂದಂತಾಗಿ ''ಥೂ, ಸಾಕು ನಿಲ್ಸೊ'' ಎಂದು ಅರಚಿದೆ. ವಯಕ್ ಎಂಬ ಧ್ವನಿ ನನ್ನ ಗಂಟಲಿಂದ ಹೊರಹೊಮ್ಮಿತು. ''ಯಾಕೋ ? ಏನಾಯಿತೋ ?''

''ಇನ್ನೇನು ಮತ್ತೆ? ನಾನು ಆಂಬೊಡೆ ತಿಂತಾ ಇರೋವಾಗ ನೀನು ಬಹಿರ್ದೇಶ ಗಿಹಿರ್ದೇಶ ಅಂತ ಏನೇನೋ ಹೇಳಿದ್ರೆ, ನನಗೆ ವಾಕರಿಕೆ ಬರದೆ ಇರುತ್ತೋ ?''

''ಸರಿಹೋಯಿತು ಬಿಡು. ನನ್ನ ಹೆಂಡತಿನೂ ಹೀಗೇ ಹೇಳಿದಳು. ಅಲ್ಲ, ನಿಮಗೆಲ್ಲ ಕಕ್ಕಸು ಅಂದ್ರೆ ಅದು ಯಾಕೆ ಇಷ್ಟು ಹೇಸಿಗೆ ? ನನಗೆ ಅರ್ಥವಾಗ್ತಿಲ್ಲಪ್ಪ. ನೀವೆಲ್ಲ ದಿನಾಗಲೂ ಅಲ್ಲಿಗೆ ಹೋಗೊಲ್ವೆ ? ಅದು ನಮ್ಮ ದೈನಂದಿನ ಜೀವನದಲ್ಲಿ ಒಂದು ಉಪಯುಕ್ತವಾದ ಸ್ಥಳ ಅಲ್ವೆ ? ನಮ್ಮ ಎಷ್ಟೋ ಆಸೆ ಆಕಾಂಕ್ಷೆಗಳು, ಕನಸುಗಳು, ಯೋಜನೆಗಳು, ವಿಚಾರಗಳು ಎಲ್ಲವೂ ಹುಟ್ಟುವುದೂ ಸಾಯುವುದೂ ಆ ಪ್ರಶಸ್ತ ಬಹಿರ್ದೇಶದಲ್ಲೇ ಅಲ್ವೇ ? ಮಹಾನ್ ಮಹಾನ್ ವಿಜ್ಞಾನಿಗಳಿಗೂ, ಲೇಖಕರಿಗೂ,

ದಾರ್ಶನಿಕರಿಗೂ ಉತ್ಕೃಷ್ಟ ವಿಚಾರಗಳು ಹೊಳೆಯುವುದು ಅವರುಗಳು ಬಹಿರ್ದೇಶದಲ್ಲಿ ಕೂತಿರುವಾಗಲೆ ಎಂಬ ಸತ್ಯ ನಿನಗೆ ಗೊತ್ತೋ ? ಅದಕ್ಕೆ ನಾನು ಅಂತಹ ಒಂದು ಪ್ರದೇಶವನ್ನೇ ನನ್ನ ಕತೆಯ ಕಾರ್ಯಸ್ಥಾನವನ್ನಾಗಿ ಆರಿಸಿಕೊಂಡಿದೀನಿ. ಇದುವರೆಗೂ ಯಾವ ನವ್ಯಕತೆಗಾರನೂ ಹಾಗೆ ಮಾಡಿಲ್ಲ. ಆ ದೃಷ್ಟಿಯಿಂದ ನನ್ನ ಈ ತಂತ್ರ ಬಹಳ ಅಪೂರ್ವವಾದದ್ದು ಗೊತ್ತಾ ?'' - ಒಂದು ಪುಟ್ಟ ಉಪನ್ಯಾಸವನ್ನೇ ಬಿಗಿದ ನಾಗೇಶಿ.

''ಹಾಗೆಂದ್ರೆ, ನಿನ್ನ ಕತೆ ಆರಂಭದಿಂದಲೂ ಕೊನೆಯವರೆಗೂ......''

''ಹೌದು, ಕತೆಯ ಇಡೀ ಕ್ರಿಯೆ ಘಟಿಸುವುದು ಅಲ್ಲೇ, ಮೂವತ್ತು ನಿಮಿಷಗಳಲ್ಲಿ'' ನಾಗೇಶಿ ನಡುವೆ ಬಾಯಿ ಹಾಕಿ ಹೇಳಿದ.

ನನಗೆ ನಗು ತಡೆಯಾಗಲಿಲ್ಲ. ''ಥೂ ! ಆ ಅಸಹ್ಯ ಜಾಗದಲ್ಲಿ ನಡೆಯುವ ಕ್ರಿಯೆಯನ್ನು ಇಟ್ಟುಕೊಂಡೆ ಕತೆ ಬರಿದಿದೀಯ ?'' ಎಂದು ಹೇಳಿ ಕಿಸಕಿಸನೆ ನಕ್ಕುಬಿಟ್ಟೆ.

ನಾಗೇಶಿಗೆ ರೇಗಿತು. ''ಬೆಪ್ಪುತಕ್ಕಡಿ ! ಇಲ್ಲಿ ಕ್ರಿಯೆ ಅಂದ್ರೆ ಮಾನಸಿಕ ಕ್ರಿಯೆ ಅಂತ ಅರ್ಥ. ದೈಹಿಕ ಕ್ರಿಯೆ ಅಲ್ಲ, ತಿಳ್ಕೋ, ನೀನು ನವ್ಯಕತೆಗಳನ್ನು ಹೆಚ್ಚಿಗೆ ಓದಿಲ್ಲ ಅಂತ ಕಾಣುತ್ತೆ. ಬಹುಪಾಲು ನವ್ಯಕತೆಗಳಲ್ಲಿ ನಡೆಯುವುದು ಬರೇ ಮಾನಸಿಕ ಕ್ರಿಯೆ ಮಾತ್ರ. ಈ ಕತೆಗಳ ನಾಯಕರು ಅದು ಮಾಡಬೇಕು, ಇದು ಮಾಡಬೇಕು, ಹಾಗಿರಬೇಕು, ಹೀಗಿರಬೇಕು ಅಂತ ಅಂದ್ಕೊಳ್ತಾರೆಯೇ ಹೊರತು ನಿಜವಾಗಿಯೂ ಅವರು ಏನೂ ಮಾಡೊಲ್ಲ. ಅವರುಗಳ ಅನಿಸಿಕೆಗಳೇ ಕತೆಯ ವಸ್ತು. ಅದರ ನಿರೂಪಣೆಯೇ ಕತೆ'' ಎಂದು ನನಗೆ ಪಾಠ ಹೇಳಿ, ಮತ್ತೊಂದು ಸಿಗರೇಟು ಹೊತ್ತಿಸಿ ''ಸರಿ, ಇನ್ನು ಕತೆಯನ್ನು ಮುಂದುವರಿಸುವ'' ಅಂದ.

ಮಾನ್ಯ ಓದುಗರೇ, ನಾಗೇಶಿಯ ಕತೆಯನ್ನು ಪದಶಃ ಇಲ್ಲಿ ಪುನರ್‌ರಚಿಸಿ ನಿಮಗೆ ತೂಕಡಿಕೆ ಬರಿಸುವ ಉದ್ದೇಶವಾಗಲಿ ಅಥವಾ ನಿಮ್ಮ ಮೆದುಳನ್ನು ಚಿತ್ರಹಿಂಸೆಗೆ ಗುರಿಪಡಿಸುವ ಕ್ರೂರ ಆಸೆಯಾಗಲಿ ನನಗಿಲ್ಲ. ಆದುದರಿಂದ ಸುಮಾರು ಮೂವತ್ತು ಪುಟಗಳ ಈ 'ಕತೆ'ಯನ್ನು ನನ್ನದೆ ಮಾತುಗಳಲ್ಲಿ ಸಂಕ್ಷಿಪ್ತವಾಗಿ ಹೇಳಿ ಮುಗಿಸಿ ಅದರಲ್ಲಿನ ಕೆಲವು ವಿಶೇಷಾಂಶಗಳನ್ನು ಮಾತ್ರ ನಿಮ್ಮ ಗಮನಕ್ಕೆ ತರಬಯಸುತ್ತೇನೆ.

ಸರ್ಕಾರಿ ಕಚೇರಿಯೊಂದರಲ್ಲಿ ಕೆಳದರ್ಜೆಯ ಗುಮಾಸ್ತನಾಗಿ ಕೊಳೆಯುತ್ತಿರುವ ಇಪ್ಪಂತ್ತೆಂಟರ ಹರಯದ ಪೀಚುಕಾಯದ ಪ್ರೇಮಕುಮಾರನೇ ಈ ಕತೆಯ ನಾಯಕ. ಕತೆಯ ಹೆಸರೇ ಸೂಚಿಸುವಂತೆ ಇವನೊಬ್ಬ ಕೋಪಾವಿಷ್ಟ ಯುವಕ. ಇವನ ಸಿಟ್ಟು ಅಂತಿಂಥ ಸಿಟ್ಟಲ್ಲ, ಪ್ರಚಂಡ ಸಿಟ್ಟು. ಇವನಿಗೆ ತನ್ನ ಅಪ್ಪನ ಮೇಲೆ, ಅಣ್ಣನ ಮೇಲೆ, ಭಾವನ ಮೇಲೆ, ಮೇಲಧಿಕಾರಿಯ ಮೇಲೆ, ಸಹೋದ್ಯೋಗಿಗಳ ಮೇಲೆ, ಏಕೆ ಇಡೀ ಸಮಾಜದ ಮೇಲೆ ವಿಪರೀತ ಸಿಟ್ಟು. ಅವರೆಲ್ಲರನ್ನೂ ತೀವ್ರವಾಗಿ ದ್ವೇಷಿಸುತ್ತಾನೆ. ಕಕ್ಕಸಿನಲ್ಲಿ ಕುಳಿತು ಅವರುಗಳನ್ನೆಲ್ಲ ಅವಾಚ್ಯವಾಗಿ (ಮನಸ್ಸಿನಲ್ಲೆ) ಪದೇ ಪದೇ ತೆಗಳುತ್ತಾನೆ, ಅವರಿಗೆಲ್ಲಾ ಎಂತೆಂತಹ ಶಾಸ್ತಿ ಆಗಬೇಕೆಂದು ತೀರ್ಮಾನಿಸುತ್ತಾನೆ. ಉಗಿತ, ಒದೆತ ಎಲ್ಲಾ ಸೇರಿರುತ್ತವೆ ಅದರಲ್ಲಿ. ಇವನ ಸಹೋದ್ಯೋಗಿ ನಳಿನಿ ಮಾತ್ರ ಇದಕ್ಕೆಲ್ಲಾ ಅಪವಾದ, ಕಾರಣ ಇವನು ಅವಳನ್ನು ಮನಸಾರೆ ಪ್ರೇಮಿ(ಕಾಮಿ)ಸುತ್ತಾನೆ. ಅವಳ ಬಗ್ಗೆಯೂ ತುಸು ಅಸಮಾಧಾನವಿಲ್ಲದಿಲ್ಲ. ಏಕೆಂದರೆ ಈಚೆಗೆ ಅವಳು ಅವನನ್ನು ಅಷ್ಟಾಗಿ ಲಕ್ಷ್ಯ ಮಾಡುತ್ತಿಲ್ಲವಂತೆ. ಇವನ ಮತ್ತೊಬ್ಬ ಸಹೋದ್ಯೋಗಿ ಮಹೇಶನ ಜೊತೆ ಚೆಲ್ಲು ಹರೀತಾಳಂತೆ.

ಪ್ರೇಮಕುಮಾರ ಮಲಬದ್ಧತೆಯಿಂದ ಪೀಡಿತನಾಗಿರುವುದು ಕತೆಯ ಒಂದು ಗಣನೀಯ ಅಂಶ. ಈ ಕತೆಯಲ್ಲಿ ಮಲಬದ್ಧತೆ ವ್ಯಾಧಿಯನ್ನು ಸಾಂಕೇತಿಕವಾಗಿ ಬಳಸಲಾಗಿದೆ ಎಂಬ ಸಂಗತಿ ನನ್ನ ಮಂಕು ತಲೆಗೆ ಅರಿವಾದದ್ದು ಸ್ವತಃ ನಾಗೇಶಿಯೇ ನನಗೆ ಹೇಳಿದ ನಂತರವೇ. ನಾಯಕ ತನ್ನ ಮನಸ್ಸಿನ ತುಮುಲ, ತಳಮಳ, ಬೇಗುದಿ, ಪಿರಿಪಿರಿ, ಸಿಟ್ಟು ಇತ್ಯಾದಿಗಳನ್ನು ಹೊರಗೆಡಹುವುದರಲ್ಲಿ ಅಶಕ್ತನಾಗಿದ್ದಾನಂತೆ. ಅವನ ನಿಸ್ಸಹಾಯಕತೆಗೆ ಸಂಕೇತವಾಗಿದೆಯಂತೆ ಈ 'ಮಲಬದ್ಧತೆ.' ಈ ಸಂಕೇತ ನಿಜಕ್ಕೂ ಬ್ರಿಲಿಯಂಟ್ ಆಗಿದೆ ಅಲ್ವಾ, ಎಂದು ನಾಗೇಶಿ ನನ್ನನ್ನು ಕೇಳಿದಾಗ ಇಲ್ಲ ಎಂದು ಹೇಳಲು ನನಗೆ ಧೈರ್ಯ ಬರಲಿಲ್ಲ.

ಕತೆಯ ಮಧ್ಯಭಾಗದಲ್ಲಿ ಅಂದರೆ ಪ್ರೇಮಕುಮಾರ ಒಳಗೆ ಪ್ರವೇಶಿಸಿ ಹದಿನೈದು ನಿಮಿಷಗಳು ಕಳೆದ ನಂತರ ಅವನು ಫಿಲಂಫೇರ್ ಪತ್ರಿಕೆಯ ಹಾಳೆಗಳನ್ನು ತಿರುವಿ ಹಾಕುತ್ತಾ ಒಂದು ದೀರ್ಘ ಸ್ವಗತದಲ್ಲಿ ತೊಡಗುತ್ತಾನೆ. ಆತ್ಮಮರುಕದಿಂದ ತುಂಬಿದ ಈ ಸ್ವಗತವನ್ನು ಲೇಖಕ ತನ್ನ ಸ್ವಂತ ಅನುಭವಗಳ ಆಧಾರದ ಮೇಲೆ ಬರೆದಂತಿದೆ. ಕಾರಣ ನಾಗೇಶಿಯಂತೆಯೇ ಪ್ರೇಮಕುಮಾರನೂ ಒಬ್ಬ ಅಸಾಧಾರಣ ಪ್ರತಿಭಾಶಾಲಿ ಯುವಕನಂತೆ. ತಕ್ಕ ಅವಕಾಶ, ಉತ್ತೇಜನ ದೊರೆತಲ್ಲಿ ಈ ದೇಶದ ಅತ್ಯುತ್ತಮ ಚಿತ್ರ ಸಾಹಿತಿ, ನಿರ್ದೇಶಕ ಎಂದು ನಿರೂಪಿಸಬಲ್ಲ ಸಾಮರ್ಥ್ಯ ಉಳ್ಳವನಂತೆ. ಆದರೆ ಈ 'ದರಿದ್ರ' ಭಾರತ ದೇಶದಲ್ಲಿ ತರುಣ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹ ನೀಡುವವರು ಯಾರಿದ್ದಾರೆ ? ಆದುದರಿಂದ ಪ್ರೇಮಕುಮಾರ ಜಿಗುಪ್ಸಿತನಾಗಿ ತನ್ನ ಈ 'ಅನಿಷ್ಟ' ತಾಯ್ನಾಡನ್ನು ತೊರೆದು ಹಾಲಿವುಡ್, ಫ್ರಾನ್ಸ್, ಜೆಕೋಸ್ಲವಾಕಿಯಾ ಮುಂತಾದ ಯಾವುದಾದರೂ ಪರದೇಶಕ್ಕೆ ತೆರಳಿ ತನ್ನ ಅದೃಷ್ಟವನ್ನು ಪರೀಕ್ಷಿಸಬೇಕು ಎಂಬ ತೀರ್ಮಾನಕ್ಕೆ ಬಂದಿದ್ದಾನೆ. ಈ ಸ್ವಗತದಲ್ಲಿ ನಾಯಕನ ಪರಕೀಯ ಪ್ರಜ್ಞೆ, ಹತಾಶ ಪ್ರಜ್ಞೆ ಇತ್ಯಾದಿ ಪ್ರಜ್ಞೆಗಳು ತುಂಬಾ ಮನೋಜ್ಞವಾಗಿ ಮೂಡಿಬಂದಿವೆ ಎಂಬುದಾಗಿ ವಿಮರ್ಶಕರು ಬರೆಯಬಹುದು ಎಂದು ನಾಗೇಶಿ ನನಗೆ ಹೇಳಿದ.

ಕತೆಯ ಕೊನೆಯ ಐದು ನಿಮಿಷಗಳು ಅರ್ಥಾತ್ ಕ್ಲೈಮ್ಯಾಕ್ಸ್ (ನಾಗೇಶಿಯ ಪ್ರಕಾರ) ಅದ್ಭುತವಾಗಿದೆ. ಪ್ರೇಮಕುಮಾರನಿರುವ ಭಾಗಕ್ಕೆ ಅಂಟಿಕೊಂಡಂತೆಯೇ ಇರುವ ಇನ್ನೊಂದು ಬಹಿರ್ದೇಶ ಸ್ಥಾನದಿಂದ ಇದ್ದಕ್ಕಿದ್ದಂತೆ ಹೆಣ್ಣೊಬ್ಬಳ ಧ್ವನಿ ಕೇಳಿಬರುತ್ತದೆ. ದಿಲ್ ತೋ ಪಾಗಲ್ ಹೈ, ದಿಲ್ ದಿವಾನಾ ಹೈ.... ಗುನುಗುನಿಸುತ್ತಿರುವವಳು ತನ್ನ ಪಕ್ಕದ ಮನೆಯ ಶ್ಯಾಮರಾಯನ ಮಗಳು ಸರೋಜಳೇ ಎಂದು ಸುಲಭವಾಗಿ ಗುರುತಿಸುತ್ತಾನೆ ನಮ್ಮ ಕಥಾನಾಯಕ. ಗೋಡೆಯಾಚೆ ಒಂದು ಹರೆಯದ ಹೆಣ್ಣು ! ಪ್ರೇಮನ ನರನಾಡಿಗಳಲ್ಲಿ ರೋಮಾಂಚನದ ಒಂದು ಲಹರಿ ಹರಿಯುತ್ತದೆ. ಇವನು ಹೀಗೆ ಹಗಲುಗನಸಿನ ಸುಖವನ್ನು ಸವಿಯುತ್ತಿರಬೇಕಾದರೆ ಹೊರಗಡೆಯಿಂದ ಇವನ ಭಾವ ದಬದಬನೆ ಬಾಗಿಲು ಬಡಿದು ''ಏನೋ ಮಹಾರಾಯ ? ದಿನವೆಲ್ಲ ಒಳಗೇ ಕೂತುಬಿಡ್ತಿಯೋ ಹೇಗೆ ? ಹೊರಗೆ ಬಾರೋ, ನಾನೂ ಹೋಗ್ಬೇಕು'' ಎಂದು ಅರಚಬೇಕೇ ? ಇದು ಸಾಲದೆಂಬಂತೆ ಭಾವನ ಆರ್ಭಟವನ್ನು ಕೇಳಿಸಿಕೊಂಡ ಸರೋಜ ಕಿಸಕಿಸನೆ ನಗಬೇಕೆ ? ಪ್ರೇಮನಿಗೆ ವಿಪರೀತ ಅಪಮಾನವಾಗಿ ತನ್ನ ಭಾವನ ಮೇಲೂ ಸರೋಜಳ ಮೇಲೂ ಅಸಾಧ್ಯ ರೋಷ ಉಕ್ಕಿ ಬರುತ್ತದೆ. ಎಷ್ಟು ಅಂದರೆ ಆ ಕ್ಷಣವೇ ಅವರಿಬ್ಬರನ್ನೂ ಕೊಂದು ಹಾಕಿಬಿಡಬೇಕೆಂಬ ತೀವ್ರ ಹಂಬಲ ಉಂಟಾಗುತ್ತದೆ. ಅದು ಶಕ್ಯವೇ ? ಆದುದರಿಂದ ಗೋಡೆಯ ಮೇಲೆ ತೆವಳುತ್ತಿರುವ ಜಿರಲೆಯೊಂದನ್ನು ಗಬಕ್ಕನೆ ಹಿಡಿದು, ತನ್ನ ಹವಾಯಿ ಚಪ್ಪಲಿಯಿಂದ ಆ ಬಡಪ್ರಾಣಿಯನ್ನು ಹೊಡೆದು ಸಾಯಿಸಿ ತನ್ನ ರೊಚ್ಚನ್ನು ತೀರಿಸಿಕೊಳ್ಳುತ್ತಾನೆ. ಕತೆ ಹೀಗೆ ಮುಕ್ತಾಯಗೊಳ್ಳುತ್ತದೆ. ಇಲ್ಲಿ ಜಿರಲೆಯನ್ನು ಪ್ರತಿಮೆಯಾಗಿಯೂ, ಜಿರಲೆಯ ಖೂನಿಯನ್ನು ಸಾಂಕೇತಿಕವಾಗಿಯೂ ಬಳಸಲಾಗಿದೆ ಎಂಬುದನ್ನು ಓದುಗರು ಸುಲಭವಾಗಿ ಗ್ರಹಿಸುತ್ತಾರೋ ಇಲ್ಲವೋ ಎಂದು ನಾಗೇಶಿ ಆತಂಕದಲ್ಲಿ ಸಂದೇಹ ವ್ಯಕ್ತಪಡಿಸಿದಾಗ ನಾನು ''ಆತಂಕ ಬೇಡ, ನಮ್ಮ ಓದುಗರು ಅಷ್ಟು ಪೆದ್ದರೇನಲ್ಲ. ಖಂಡಿತ ಅರ್ಥ ಮಾಡ್ಕೊಳ್ತಾರೆ'' ಎಂದು ಆಶ್ವಾಸನೆ ನೀಡಿದೆ. ಸರಿ ತಾನೇ ?

ಮಾನ್ಯ ಓದುಗರೇ, ಮೇಲಿನ ಕಥಾ ಸಾರಾಂಶವನ್ನು ಓದಿ ಮೂಲಕತೆಯನ್ನೇ ಆಮೂಲಾಗ್ರ ಓದಬೇಕೆಂಬ ಆಸಕ್ತಿ ನಿಮ್ಮಲ್ಲಿ ಕೆಲವರಿಗೆ ಉಂಟಾಗಿದ್ದಲ್ಲಿ ಆ ಸುಯೋಗ ನಿಮಗೆ ಸುಲಭವಾಗಿ ಸಿಗಲಾರದು ಎಂದು ತಿಳಿಸಲು ಖೇದವಾಗುತ್ತದೆ. ಕಾರಣ ಈಗಾಗಲೇ ನಾಗೇಶಿಯ ಇತರ ಕತೆಗಳಂತೆ ಈ ಕತೆಯೂ ಅಸ್ವೀಕೃತವಾಗಿ ಅವನ ಅಪ್ರಕಟಿತ ಕಥಾ ಸಂಕಲನದಲ್ಲಿ ಸೇರಿ ಅವನ ಮೇಜಿನ ಡ್ರಾಯರಿನಲ್ಲಿ ಕೊಳೆಯುತ್ತಿದೆ. ಹಾಗೂ ಅದನ್ನು ಓದಲೇಬೇಕೆಂಬ ಆಗ್ರಹ ನಿಮಗಿದ್ದಲ್ಲಿ ನಿಮಗಿರುವುದು ಒಂದೇ ದಾರಿ. ಈ ಕೂಡಲೇ ತಾವು ಎಲ್ಲ ಕನ್ನಡ ಪತ್ರಿಕೆಗಳ ಸಂಪಾದಕರಿಗೆ ''ನಾಗೇಶಿಯವರ ಕತೆಗಳನ್ನು ನೀವು ಪ್ರಕಟಿಸಲೇಬೇಕು. ಇಲ್ಲದಿದ್ದಲ್ಲಿ ಇನ್ನು ಮುಂದೆ ನಾವು ನಿಮ್ಮ ಪತ್ರಿಕೆಯನ್ನು ಮೂಸಿಯೂ ನೋಡುವುದಿಲ್ಲ'' ಎಂಬ ಬೆದರಿಕೆ ಹಾಕಿ ಪತ್ರಗಳ ಮೇಲೆ ಪತ್ರಗಳನ್ನು ಬರೆಯಬೇಕು. ನಿಮ್ಮ ಬೆದರಿಕೆಗೆ ಅಂಜಿ ಅವರು ನಾಗೇಶಿಯ ಕತೆಗಳನ್ನು ಪ್ರಕಟಿಸಿದರೂ ಪ್ರಕಟಿಸಬಹುದು.

ಡಿ. ಆರ್. ಬಾಲು
ಡಿ - ೪೨, ಸ್ಟಾಫ್ ಕ್ವಾರ್ಟರ್ಸ್, ರೀಜನಲ್ ಇಂಜಿನಿಯರಿಂಗ್ ಕಾಲೇಜ್
ಕಲ್ಲಿಕೋಟೆ- ೬೭೩ ೬೦೧, ಕೇರಳ

# ಗ್ರಹಣಗಳ ಪುರಾತನ ದಾಖಲೆಗಳು

ಡಾ॥ ಬಿ. ಎಸ್. ಶೈಲಜಾ

೧೯೮೦ರ ಫೆಬ್ರವರಿ ೧೬ರಂದು ಚಂದ್ರನ ನೆರಳು ಕರ್ನಾಟಕದ ಮಧ್ಯಭಾಗವನ್ನು ಹಾದುಹೋಯಿತು. ವಿಜ್ಞಾನಿಗಳು ಈ ಸದವಕಾಶವನ್ನು ಉಪಯೋಗಿಸಿಕೊಂಡು ವೈವಿಧ್ಯಮಯ ಪ್ರಯೋಗಗಳನ್ನು ನಡೆಸಿದರು. ಪ್ರೊಫೆಸರ್ ಎಂ. ಚಿದಾನಂದ ಮೂರ್ತಿಯವರು ಈ ಸಂದರ್ಭವನ್ನು ಉಪಯೋಗಿಸಿಕೊಂಡದ್ದು ಬೇರೊಂದು ರೀತಿಯಲ್ಲಿ. ಗ್ರಹಣದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಭಾವಗಳನ್ನು ಅವರು ಗುರುತಿಸಿದರು. ಅವರ ಸಮೀಕ್ಷೆ ೧೯೮೨ರಲ್ಲಿ ಪ್ರಕಟವಾಯಿತು (ನನ್ನ ಕಣ್ಣಿಗೆ ಅದು ಬಿದ್ದಿದ್ದು ೧೯೯೬ರಲ್ಲಿ). ಅದರಲ್ಲಿಯ ಒಂದು ಅಧ್ಯಾಯ ನನ್ನನ್ನು ಆಕರ್ಷಿಸಿತು. ಅದರಲ್ಲಿ ಸಿಕ್ಕಿದ ಎರಡು ಅಣಿ ಮುತ್ತುಗಳು ಇಲ್ಲಿವೆ :

ಸುರಕರಿ ಸೊಕ್ಕಿ ಪೊಕ್ಕು ಸುರಗಂಗೆಯನೆಯ್ದೆ ಕಲಂಕಿ ಪಂಕಜೋ

ತ್ಕರ ಮನದೆತ್ತಿ ಕಿಳ್ತು ಪಿಡಿದಿರ್ದೊಡೆ ತೋರುವ ಪಂಕಕಂದಮೋ

ತ್ವರಿತದೆ ತುಂಬಿಗಳ್ ಮುಸುರಿಕೊಂಡ ವಿಕಾಸಿತ ಕೈರವಾಸ್ಯಮೋ

ಸುರುಚಿರ ನೀಳ ಕುಂತಳ ಸಮಾವೃತ ಪೂರ್ವದಿಗಂಗನ್ಯಾಸಮೋ ॥

''ಐರಾವತವು ಸುರಗಂಗೆಯ ನೀರನ್ನು ಕದಡಿ ರಾಡಿ ಮಾಡಿ ಅಲ್ಲಿದ್ದ ಕಮಲಗಳನ್ನು ಕಿತ್ತು ಎತ್ತಿ ಹಿಡಿದ ಕೆಸರು ತುಂಬಿದ ಗಡ್ಡೆಯೋ, ದುಂಬಿಗಳು ಪೂರ್ತಿ ಮುಸುರಿದ ಕೈರವ ಪುಷ್ಪವೋ, ಕಪ್ಪು ಮುಂಗೂದಲು ಮುಸುಕಿದ ಪೂರ್ವ ದಿಗಂಗನೆಯ ಮುಖವೋ.''

ಇದು ಚಂದ್ರಗ್ರಹಣದ ವರ್ಣನೆ - ಬಾಹುಬಲಿ ಪಂಡಿತನ (ಕ್ರಿ. ಶ. ೧೩೫೨) **ಧರ್ಮನಾಥ ಪುರಾಣ**ದಿಂದ ಆಯ್ದದ್ದು. ಚಂದ್ರ ಕ್ರಮೇಣ ಕ್ರೂರಾಕಾರ ರಾಹುವಿಗೆ ಆಹುತಿಯಾದ. ''ಸರ್ವಗ್ರಾಸಿಯಾಗಳೆ ಕತ್ತಲೆಯ ಮೊತ್ತಮೆತ್ತಲುಂ ಬಿತ್ತರಿಸೆ ತಾರಗೆಗಳಿನಿಮಿನಿಯೆನುತ್ತುಂ ಪೊಳೆಯಲ್......'' ಸರ್ವಗ್ರಾಸಿ ಗ್ರಹಣದಿಂದಾಗಿ ಕತ್ತಲೆ ದಟ್ಟವಾಗಿ ನಕ್ಷತ್ರಗಳು ಗೋಚರಿಸಿದವು.....

ಈ ವರ್ಣನೆಯ ಸಂದರ್ಭ - ರಾಜ ಪೂರ್ಣ ಚಂದ್ರನನ್ನು ವೀಕ್ಷಿಸುತ್ತಿದ್ದುದು. ಚಂದ್ರನು ಶಕ್ತ, ಸುಂದರ, ಕಲ್ಪತರುವಿನ ಸೋದರ, ಲಕ್ಷ್ಮಿಯ ಅಣ್ಣ, ಸಮುದ್ರ ಪುತ್ರ. ಅಂತಹವನು ರಾಹುವಿನ ಆಕ್ರಮಣಕ್ಕೊಳಗಾದ. ಚಂದ್ರನಿಗೇ ಹೀಗಾದ ಮೇಲೆ ಸಾಮಾನ್ಯ ಮನುಷ್ಯರ ಪಾಡೇನು ? ಎಂದು ಚಿಂತಿಸಿದ ರಾಜ ಜೀವನದ ನಶ್ವರತೆಯನ್ನು ಗುರುತಿಸಿದ. ವೈರಾಗ್ಯ ತಳೆದು ಧರ್ಮನಾಥ ತೀರ್ಥಂಕರನಾದ.

ಅದೇ ಶತಮಾನದ ಇನ್ನೊಂದು ರಚನೆ ಮಧುರ ಎಂಬ ಕವಿಯದು. ಇದೇ ಸಂದರ್ಭ - ರಾಜ ಗ್ರಹಣವನ್ನು ವೀಕ್ಷಿಸುತ್ತಿದ್ದಾನೆ. -''ರಾಹುವಿಗೆ ಒಳಗಾದ ಚಂದ್ರಬಿಂಬ ಕೆಂಪಾದ ಬೆಂಕಿಗೆ ತಾಗಿದ ಬೆಳ್ದಾವರೆಯಂತಾಯಿತು.'' ತಾರಾಪತಿಯಾದ ಚಂದ್ರ ರಾಹುವಿಗೆ ಸೆರೆಯಾದ; ತಾರೆಗಳನ್ನು ದುಃಖಕ್ಕೀಡುಮಾಡಿದ.

''ತಳ್ವದೆ ತವರಿಪ ರಾಹುಗೆ

ಬಳ್ವಳ ಬಳಸಿರ್ದ ತಾರೆ ಮಸುಳಿಸೆ ಚಂದ್ರಂ

ಕೇಳ್ವೋದನೆಂದೊಡಿಳೆಯೊಳ್

ಕೇಳ್ವರ್ ಮರುಳಲ್ತೆ ಚಂದ್ರತಾರಾಬಲಮಂ ॥''

ಪರಿಪೂರ್ಣೇಂದುವಿಗೇ ಈ ಪರಾಭವ ! ಭಾಪುರೇ ವಿಧಿ ! ಎಂದು ರಾಜ ಆಶ್ಚರ್ಯ ಪಟ್ಟ. ಹೀಗಿರುವಾಗ ಜನ ಚಂದ್ರಬಲ ತಾರಾಬಲಗಳನ್ನು ಕೇಳಿಸಿದರೆ ಅವರನ್ನು ಹುಚ್ಚರೆಂದು ಕರೆಯಬೇಕು ಎಂದುಕೊಂಡ ರಾಜ ವೈರಾಗ್ಯಪರನಾದ.

ಹೀಗೆ ಈ ಇಬ್ಬರೂ ಕವಿಗಳು ವೈರಾಗ್ಯದ ಅಂಕುರಕ್ಕೆ ಚಂದ್ರಗ್ರಹಣವನ್ನೇ ಬಳಸಿರುವುದು ಕಾಕತಾಳೀಯವೇ ? ಎಂಬ ಆಲೋಚನೆ ನನ್ನಲ್ಲಿ ಮೂಡಿತು. ವಾಸ್ತವವಾಗಿ



ರಾಜನಿಗೆ ವೈರಾಗ್ಯ ಮೂಡಲು ಚಂದ್ರಗ್ರಹಣವೇ ಬೇಕಾಯಿತೇ ? -ಇದಕ್ಕೆ ಉತ್ತರ ದೊರಕಲಿಲ್ಲ.

ಆದರೆ ತಾವು ಕಂಡು ಆನಂದಿಸಿ, ಅನುಭವಿಸಿದ ಚಂದ್ರಗ್ರಹಣದ ಅದ್ಭುತ ಕವಿಗಳ ಲೇಖನಿಯಿಂದ ಹೊರಹೊಮ್ಮಿದ ಚಮತ್ಕಾರ ಇರಬಹುದು ಎಂಬುದು ಸಮಂಜಸವಾಗಿ ಕಂಡಿತು. ಇದು ಹೊಸತೇನಲ್ಲ. ಇಂಗ್ಲಿಷ್ ಮತ್ತಿತರ ಭಾಷೆಗಳಲ್ಲಿ ಇಂತಹ ಅನೇಕ ದೃಷ್ಟಾಂತಗಳಿವೆ.

ತೀರಾ ಇತ್ತೀಚೆಗೆ ಶ್ರೀಮತಿ ನೀಳಾದೇವಿಯವರದೊಂದು ಕಾದಂಬರಿಯೊಂದನ್ನು ಓದುತ್ತಿದ್ದೆ. ಅದರ ಹೆಸರು ಮರೆತುಹೋಗಿದೆಯಾದರೂ ಒಂದು ಸಂದರ್ಭದ ವಿವರಣೆ ನನ್ನ ತಲೆಯಲ್ಲುಳಿದಿದೆ. ನವವಧುವೊಬ್ಬಳು ಸಂಪ್ರದಾಯಸ್ಥ ಅತ್ತೆಯ ಆಜ್ಞೆಗನುಸಾರವಾಗಿ ಬೆಳಗಿನ ಝಾವದ ಚಳಿಯಲ್ಲಿ ನದಿಯಲ್ಲಿ ಮುಳುಗಿ ಏಳಬೇಕಾದ ಪ್ರಸಂಗ. ನೀವು ಸುಲಭವಾಗಿ ಊಹಿಸಬಹುದಾದ ಈ ಸಂದರ್ಭ ಚಂದ್ರಗ್ರಹಣದ್ದು. ಸೂರ್ಯೋದಯದ ಕೆಂಪು ಪೂರ್ವದಲ್ಲಿ ಮೂಡುತ್ತಿದ್ದಾಗ, ಗ್ರಹಣ ಮುಕ್ತ ಚಂದ್ರ ಪಶ್ಚಿಮದಂಚಿನಲ್ಲಿ ''ಬೆಳ್ಳಿಯ ತಟ್ಟೆ''ಯಂತೆ ಹೊಳೆಯುತ್ತಿದ್ದ ಎಂದು ಲೇಖಕಿ ವರ್ಣಿಸಿದ್ದಾರೆ.

ಈ ಬಗೆಯ ವರ್ಣನೆಯನ್ನು ಸಾಹಿತ್ಯ ಕೃತಿಯಲ್ಲಿ ಅಳವಡಿಸಲು, ಸ್ವಾನುಭವ ಅತಿ ಅವಶ್ಯಕ. ಸೂರ್ಯಗ್ರಹಣವನ್ನಾಗಲೀ, ಚಂದ್ರಗ್ರಹಣವನ್ನಾಗಲೀ ವೀಕ್ಷಿಸಿ ಬೆರಗಾದ ಕವಿ ಅದರ ಅದ್ಭುತ ಸೌಂದರ್ಯವನ್ನು ನೆನಪಿನಲ್ಲಿ ಸೆರೆಹಿಡಿದಿಟ್ಟುಕೊಂಡಿದ್ದೇ ಆದರೆ ಎಂದೋ ಒಂದು ದಿನ ಅದು ಆ ಲೇಖನಿಯಿಂದ ಹೊರಬೀಳುವುದರಲ್ಲಿ ಆಶ್ಚರ್ಯವೇ ಇಲ್ಲ.

ಈ ಬಗೆಯ ಉಲ್ಲೇಖನಗಳನ್ನು ಬಳಸಿ, ಚಾರಿತ್ರಿಕ ದಿನಾಂಕಗಳನ್ನು ಪತ್ತೆ ಮಾಡುವ ಉಪಾಯ ಹೊಸದೇನಲ್ಲ. ಅಪೂರ್ವ ಎನಿಸುವ ಪೂರ್ಣ ಸೂರ್ಯಗ್ರಹಣವನ್ನು ವಿವರಿಸಿದ್ದರೆ, ದಿನಾಂಕವನ್ನು ಖಚಿತವಾಗಿಯೇ ಹೇಳಬಹುದು. ಪ್ರೊಫೆಸರ್ ಚಿದಾನಂದ ಮೂರ್ತಿಯವರ ಪುಸ್ತಕ ಈ ದಿಸೆಯಲ್ಲಿ ನನಗೆ ಹೊಸ ದಿಕ್ಕನ್ನೇ ದೊರಕಿಸಿಕೊಟ್ಟಿತು. - ಇನ್ನೊಂದು ಅಪೂರ್ವ ನಿಧಿಯನ್ನೂ ತೋರಿಸಿಕೊಟ್ಟಿತು. ಅವೇ ಶಾಸನಗಳು.

ಶಾಸನಗಳಿಗೂ ಗ್ರಹಣಗಳಿಗೂ ನಿಕಟವಾದ ಸಂಬಂಧವಿದೆ. ಇದು ಶಾಸನಗಳನ್ನು ಅಧ್ಯಯನ ಮಾಡಿರುವವರಿಗೆ ಹೊಸ ವಿಷಯವೇನಲ್ಲ. ಸ್ಥೂಲವಾಗಿ ಗ್ರಹಣದ ದಾಖಲೆಗಳನ್ನು ಎರಡು ವರ್ಗಗಳನ್ನಾಗಿ ವಿಂಗಡಿಸಬಹುದು. ಆತ್ಮಬಲಿಯ ದಾಖಲೆಗಳು ಒಂದು ಬಗೆಯದು. ದಾನ ದತ್ತಿ ನೀಡಿಕೆ ಕುರಿತದ್ದು ಇನ್ನೊಂದು. ಎರಡೂ ನೇರವಾಗಿ ಗ್ರಹಣವನ್ನೇ ವಿವರಿಸುವಂತಹುದಲ್ಲ ಎಂಬುದನ್ನು ನೆನಪಿಡಬೇಕು.

ಸೌರ ಎಂಬ ಪಂಗಡದ ಸೂರ್ಯಾರಾಧಕರು ಆತ್ಮ ಸಮರ್ಪಣೆ ಮಾಡಿಕೊಳ್ಳಲು ಸೂರ್ಯಗ್ರಹಣದ ದಿನಗಳನ್ನೇ ಆರಿಸಿಕೊಳ್ಳುತ್ತಿದ್ದರು. ಹನ್ನೆರಡನೆಯ ಶತಮಾನದ ಕೆಲವು ಶಾಸನಗಳು ಶಿಕಾರಿಪುರ, ಸೊರಬ, ಹಾನಗಲ್, ಹಿರೇಕೆರೂರ ಈ ಭಾಗಗಳಲ್ಲಿ ದೊರಕುವಂತಹವುಗಳಲ್ಲಿ ಆತ್ಮಬಲಿಯ ಪ್ರಸ್ತಾಪವಿದೆ. ಕ್ರಿ. ಶ. ೧೧೨೦ರ ಅಕ್ಟೋಬರ್ ೨೧ರ ಗ್ರಹಣದಂದು ಬೀಚಿಗ ಎಂಬಾತ ಅಗ್ನಿ ಪ್ರವೇಶ ಮಾಡಿದ ಶಾಸನ ಹಿರೇಕೆರೂರು ತಾಲ್ಲೂಕಿನ ನಾಗವಂದ ಗ್ರಾಮದಲ್ಲಿದೆ. ಇದೇ ರೀತಿ ಸೊರಬ ತಾಲ್ಲೂಕಿನ ಮೂಗೂರಿನ ಶಾಸನ, ಹಾನಗಲ್ ತಾಲ್ಲೂಕಿನ ಬಾಳೂರು ಗ್ರಾಮ, ತಿಳವಳ್ಳಿ ಗ್ರಾಮದ ಎರಡು ಶಾಸನಗಳು ಆತ್ಮಬಲಿಯನ್ನು ವಿವರಿಸುತ್ತವೆ. ಒಂದೆರಡು ಸಂದರ್ಭಗಳಲ್ಲಿ ಬೆಂಕಿಗೆ ಹಾರುತ್ತಿರುವ ಚಿತ್ರಗಳೂ ಇವೆ.

ವಿಕ್ರಮಶಕೆಯ ಸಂಖ್ಯೆಯ ಆಧಾರದ ಮೇಲೆ, ಸಂವತ್ಸರ ಹಾಗೂ ಮಾಸಗಳ ಹೆಸರಿನಿಂದ ದಿನಾಂಕಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ದಿನಗಳಲ್ಲಿ ಗ್ರಹಣ ನಡೆದಿತ್ತೆ ಇಲ್ಲವೇ ಎಂಬುದನ್ನು ಖಗೋಳ ವೈಜ್ಞಾನಿಕ

ಲೆಕ್ಕಾಚಾರಗಳಿಂದ ಪರಿಶೀಲಿಸಬಹುದು. ಇದಕ್ಕೆ ಕಂಪ್ಯೂಟರ್‌ಗಳು ಬೇಕೇ ಬೇಕು ಎಂದೇನಿಲ್ಲ. ಸುಮಾರು ೧೫೦ ವರ್ಷಗಳ ಹಿಂದೆ ಜರ್ಮನಿಯ ಖ್ಯಾತ ಖಗೋಳಜ್ಞ ಒಪೊಲ್ಜರ್ ಎಂಬಾತ ಯಾವುದೇ ಗಣಕ ಯಂತ್ರಗಳ ಸಹಾಯವಿಲ್ಲದೇ ಕ್ರಿ. ಪೂ. ೧೧೦೦ರಿಂದ ಕ್ರಿ. ಶ. ೨೬೦೦ದವರೆಗಿನ ಎಲ್ಲ ಗ್ರಹಣಗಳ ದಿನಾಂಕವನ್ನು ಲೆಕ್ಕ ಮಾಡಿ ದೊಡ್ಡ ಪಟ್ಟಿ ತಯಾರಿಸಿದ, ಅಲ್ಲದೆ ಚಂದ್ರನ ನೆರಳು ಬೀಳುವ ಭೂಭಾಗದ ನಕ್ಷೆಗಳನ್ನೂ ತಯಾರಿಸಿದ. ಈ ಪುಸ್ತಕ ಈಗಲೂ ಬಳಕೆಯಲ್ಲಿದೆ.

ಇತ್ತೀಚೆಗೆ ಮೀಸ್ ಎಂಬ ಖಗೋಳ ವಿಜ್ಞಾನಿ ಇದೇ ಬಗೆಯ ಲೆಕ್ಕಾಚಾರಗಳನ್ನು ಕಂಪ್ಯೂಟರ್ ಬಳಸಿ ನಡೆಸಿದ್ದಾರೆ. ನಾಸಾ ಪ್ರಕಟಿಸಿರುವ ಈ ಬೃಹತ್ ಸಂಪುಟವನ್ನು ಒಪೊಲ್ಜರ್‌ನ ಮೇರು ಕೃತಿಯ ಆಧುನಿಕ ಮುದ್ರಣ ಎನ್ನಬಹುದು. ಕಂಪ್ಯೂಟರ್ ಬಳಸಿರುವ ಕಾರಣ ಇದರ ವೈವಿಧ್ಯತೆಯೂ ಹೆಚ್ಚಿದೆ. ಯಾವ ಭೂಭಾಗಕ್ಕೆ ಹೆಚ್ಚು ಪೂರ್ಣ ಗ್ರಹಣಗಳು ಕಾಣಲಿವೆ, ಯಾವ ಭೂಭಾಗಕ್ಕೆ ಒಂದೂ ಲಭ್ಯವಿಲ್ಲ, ಇಂತಹ ಲೆಕ್ಕಾಚಾರಗಳನ್ನು ಕಂಪ್ಯೂಟರ್ ಮಾಡಬಲ್ಲುದು.

ಈ ಪುಸ್ತಕದ ಸಹಾಯದಿಂದ ಶಾಸನದ ದಿನಾಂಕಗಳನ್ನು ಖಚಿತಪಡಿಸಿಕೊಳ್ಳಬಹುದು. ಅನೇಕ ಶಾಸನಗಳಿಗೆ ಸರಿಯಾದ ದಿನಾಂಕಗಳಿಲ್ಲ. ಏಕೆಂದರೆ ಶಕೆಯ ಅಂಕಿಗಳು ಅಥವಾ ಸಂವತ್ಸರದ ಹೆಸರು ಕಾಣದಂತಾಗಿರಬಹುದು. ಕಲ್ಲುಗಳು ಸೀಳಿರಬಹುದು, ಒಡೆದಿರಬಹುದು (ದನ ಕಟ್ಟುವ ಗೂಟಗಳಾಗಿರುವ ಕಲ್ಲುಗಳಲ್ಲಿ ಅಕ್ಷರಗಳು ಸವೆದಿರಲೂಬಹುದು). ಇಂತಹ ಸಂದರ್ಭಗಳಲ್ಲಿ ಗ್ರಹಣದ ಉಲ್ಲೇಖ ಬಹಳ ಉಪಯೋಗಿಯಾಗಿದೆ. ಎಪಿಗ್ರಾಫಿಕಾದ ಸಂಪುಟಗಳಲ್ಲಿ ''ಈ ವರ್ಷದಲ್ಲಿ ಗ್ರಹಣಗಳೇ ನಡೆದಿಲ್ಲ; ಆದರೆ ಈ ಶಾಸನದಲ್ಲಿ ಗ್ರಹಣ ಎಂಬ ಉಲ್ಲೇಖವಿದೆ'' ಎಂಬ ಟಿಪ್ಪಣಿಗಳು ಕಂಡುಬರುತ್ತವೆ. ಈ ಗೊಂದಲವನ್ನು ಸರಿಪಡಿಸುವುದೂ ಸಾಧ್ಯವಿದೆ.

ನಾನು ಮಿಥಿಕ್ ಸೊಸೈಟಿಯ ಗ್ರಂಥಾಲಯದಲ್ಲಿ ಕೆಲವೊಂದು ಸಂಪುಟಗಳನ್ನು ಮಾತ್ರ ಆಯ್ದು ಪರಿಶೀಲಿಸಿದಾಗ ಇಂತಹ ಇಪ್ಪತ್ತೇಳು ಚಂದ್ರ ಗ್ರಹಣಗಳು ಮತ್ತು ಇಪ್ಪತ್ತೈದು ಸೂರ್ಯಗ್ರಹಣಗಳ ದಿನಾಂಕಗಳು ದೊರೆತವು. ಇವುಗಳಲ್ಲಿ ಗ್ರಹಣದ ವರ್ಣನೆ ಯಾವುದರಲ್ಲೂ ಇಲ್ಲ. ತಾರೀಖಿನ ಜೊತೆಗೆ ನಮೂದಿಸಲಾಗಿರುವುದಷ್ಟೇ. ಸೊರಬ ತಾಲ್ಲೂಕಿನ ಓಟೂರಿನ ಶಾಸನವೊಂದರಲ್ಲಿ ''ವಳಯ ಗ್ರಹಣ'' ಎಂಬುದೊಂದು ಪದವಿದೆ. ಇದನ್ನು annular eclipse ಎಂದು ಅರ್ಥೈಸಿದರೆ, 'ವರ್ಣನೆ' ಎಂದು ಕರೆಯಬಹುದಾದ ಅಂಶ ಇದೊಂದೇ. ಚಂದ್ರಬಿಂಬ ಕೆಲವೊಮ್ಮೆ ಸೂರ್ಯನನ್ನು ಪೂರ್ಣವಾಗಿ ಮರೆಮಾಡದೇ ಇದ್ದಾಗ, ಸೂರ್ಯ ಬಳೆಯಂತೆ ಕಾಣುತ್ತದೆ. ಪೂರ್ಣ ಗ್ರಹಣವಾಗುವುದಿಲ್ಲ. ಇದನ್ನು ಇಂದಿನ ಪುಸ್ತಕದಲ್ಲಿ ಕಂಕಣ ಗ್ರಹಣ ಎಂದು ವ್ಯಾಖ್ಯಾನ ಮಾಡಿರುತ್ತಾರೆ.

ಧಾರವಾಡದ ಹಿರೇಕೆರೂರಿನ ಶಾಸನವೊಂದರಲ್ಲಿ ವಿಕ್ರಮ ಶಕೆಯನ್ನು ೧೦೫೩ ಎಂದು ಸ್ಪಷ್ಟವಾಗಿ ಗುರುತಿಸಿರುವುದರಿಂದ ಅದನ್ನು ಆಧಾರವಾಗಿಟ್ಟುಕೊಳ್ಳಬಹುದು. ದೀಪಾವಳಿಯ ಅಮಾವಾಸ್ಯೆ ಎಂದು ದಿನಾಂಕವನ್ನು ಸೂಚಿಸಿರುವುದರಿಂದ ಅಕ್ಟೋಬರ್ ೪ ಎಂದು ಖಚಿತವಾಗಿ ಹೊಂದಿಸಬಹುದು.

ಸೊರಬದ ಮೂಗೂರಿನ ಆತ್ಮಬಲಿಯ ಶಾಸನದಲ್ಲಿ ತಿಂಗಳ ಹೆಸರು ಮಾತ್ರವಿದೆ. ಮಾಘ ಅಮಾವಾಸ್ಯೆ ಎಂದಿದೆ. ''ಭೂಲೋಕಮಲ್ಲ''ನ (ಇದು ಯಾವುದೇ ರಾಜನ ಗುಣವಾಚಕವೂ ಆಗಬಹುದು !) ಆಳ್ವಿಕೆಯ ಒಂಭತ್ತನೆಯ ವರ್ಷ ಎಂದಿದೆ. ಇಲ್ಲಿ ದಿನಾಂಕ ೧೦೬೮ರ ಫೆಬ್ರವರಿ ೬ ಅಥವಾ ೧೧೮೯ರ ಫೆಬ್ರವರಿ ೧೭ ಇರಬಹುದು ಎಂಬ ಜಿಜ್ಞಾಸೆ ಉಂಟಾಗುತ್ತದೆ. ಎರಡೂ ಮಾಘ ಎಂಬ ತಿಂಗಳೇ ಆಗುತ್ತದೆ.

ಧಾರವಾಡದ ತಿಳವಳ್ಳಿ ಗ್ರಾಮದಲ್ಲಿ ದೊರಕಿರುವ ಶಾಸನದಲ್ಲಿ ಸಂವತ್ಸರದ ಹೆಸರು ರೌದ್ರ. ಈ ಹೆಸರಿನ ಇಸವಿಗಳು ೧೦೮೦, ೧೧೪೦, ೧೨೦೦, ೧೨೬೦ - ಹೀಗೆ ೬೦ ವರ್ಷಗಳ ಅಂತರದಲ್ಲಿರುವುದು ಸಾಧ್ಯ. ೧೦೮೦ರ ಜೂನ್ ೨೦ರಂದು ಪೂರ್ಣಗ್ರಹಣವಾಗಿತ್ತು. ೧೧೪೦ರಲ್ಲಿ ಅಲ್ಲ. ಎಫಿಗ್ರಾಫಿಕಾ ಸಂಪುಟದಲ್ಲಿ ಇದರ ದಿನಾಂಕ ೧೧೪೧ರ ಮಾರ್ಚ್ ೧೦ ಎಂದು ನಮೂದಿತವಾಗಿದೆ. ೧೧೪೧ರ ಗ್ರಹಣ, ಮಾರ್ಚ್ ೨೦ರಂದು, ದುರ್ಮತಿ ಸಂವತ್ಸರಕ್ಕೆ ಸೇರುತ್ತದೆ. ಈ ಗ್ರಹಣದ ಉಲ್ಲೇಖ ಮುಗುಳುಗೆರೆಯ ಶಾಸನದಲ್ಲಿದೆ. ಚೈತ್ರ ಎಂಬ ಹೆಸರೂ ನಮೂದಿತವಾಗಿದೆ.

ಮುಗುಳುಗೆರೆಯಲ್ಲಿ ದೊರಕಿದ ಇನ್ನೊಂದು ಶಾಸನದಲ್ಲಿ ಸಂವತ್ಸರದ ಹೆಸರು ವಿರೋಧಿಕೃತ್, ಗ್ರಹಣ ಎಂಬ ಎರಡು ಅಂಶಗಳು ಮಾತ್ರ ಇವೆ. ಎಫಿಗ್ರಾಫಿಕಾ ಸಂಪುಟ ೧೪೩೧ ? ಎಂದು ಪ್ರಶ್ನಾರ್ಥಕ ಚಿಹ್ನೆ ಹಾಕಿದೆ. ೧೩೧೧, ೧೩೭೧ ಹಾಗೂ ೧೪೩೧ - ಈ ಮೂರು ವಿರೋಧಿಕೃತ್ ಸಂವತ್ಸರಗಳಲ್ಲಿ ೧೪೩೧ ಆಗಸ್ಟ್ ೮ರಂದು ಗ್ರಹಣವಾಗಿದ್ದರಿಂದ ಅದನ್ನೇ ಶಾಸನದ ದಿನಾಂಕ ಎನ್ನಬಹುದು.

ಗದಗ್‌ನ ಕುರಹಟ್ಟಿ ಗ್ರಾಮದ ಶಾಸನದಲ್ಲಿ ಯಾವ ಗ್ರಹಣ ಎಂದು ಸೂಚಿಸುವ ಪದ ಅಳಿಸಿಹೋಗಿದೆ. ದಿನಾಂಕದ ಆಧಾರದ ಮೇಲೆ ಚಂದ್ರಗ್ರಹಣ ಎಂದು ತಿಳಿಯಬಹುದು. ಬಾಗಲಕೋಟೆಯ ಶಾಸನವೊಂದರ ವಿವರಗಳೂ ಅಳಿಸಿಹೋಗಿರುವುದರಿಂದ ಅದನ್ನೂ ತಾಳೆ ಮಾಡಿ ನೋಡಿ ೧೨೦೬ರ ಮಾರ್ಚ್ ೧೧ ಎಂದು ನಿಗದಿಪಡಿಸಬಹುದು.

ಗ್ರಹಣದಂದು ದಾನ ಧರ್ಮ ಮಾಡಿದರೆ ಪುಣ್ಯ ಎಂಬ ನಂಬಿಕೆಯ ಕಾರಣ ಈ ಬಗೆಯ ಶಾಸನಗಳು ಹೇರಳವಾಗಿ ದೊರಕುತ್ತವೆ. ಒಂದು ಸಂದರ್ಭದಲ್ಲಿ ಕನ್ಯೆಯೊಬ್ಬಳನ್ನು ದೇವದಾಸಿಯನ್ನಾಗಿ ಮಾಡಿದ್ದೂ ಶಾಸನದಲ್ಲಿದೆ.

ಕನ್ನಡ ಭಾಷೆ ಮತ್ತು ಲಿಪಿಯ ಉಗಮ ಕ್ರಿ. ಶ. ೫ನೆಯ ಶತಮಾನವಾದರೂ ಈಗ (ನನ್ನ ಸೀಮಿತ ಅಧ್ಯಯನಕ್ಕೆ) ಸಿಕ್ಕಿರುವ ದಾಖಲೆಗಳಲ್ಲಿ ಕ್ರಿ. ಶ. ೮೬೭ರ ದಾಖಲೆಯೇ ಹಳೆಯದು.

ದಾನ ಸಂಬಂಧದ ಶಾಸನಗಳು ತುಂಬಾ ದೀರ್ಘವಾಗಿರುತ್ತವೆ. ವಂಶಾವಳಿ, ಬಿರುದು, ಹೊಗಳಿಕೆಗಳೆಲ್ಲಾ ಸೇರಿರುತ್ತವೆ. ಪುಣ್ಯದ ಪ್ರಸ್ತಾಪವೂ ಸಾಕಷ್ಟು ಉದ್ದವಾಗಿರುತ್ತದೆ. ಆದ್ದರಿಂದ 'ಗ್ರಹಣ' ಎಂಬ ಪದವನ್ನು ಅವುಗಳ ಮಧ್ಯೆ ಹುಡುಕಬೇಕು.

ಶಾಸನಗಳು ಇತರ ಚಿಂತನಶೀಲರನ್ನು ಆಕರ್ಷಿಸಿವೆ. ಮೈಸೂರಿನ ಡಾ|| ಪಂಡಿತಾರಾಧ್ಯ ಅವರು ೧೬೭೦ರಲ್ಲಿ ನಡೆಯದೇ ಇದ್ದ ಗ್ರಹಣವೊಂದರ ಶಾಸನವನ್ನು ಕುರಿತು ತಲೆಕೆಡಿಸಿಕೊಂಡಿದ್ದಾರೆ. ಶಿವಮೊಗ್ಗದ ಶ್ರೀ ಜಗದೀಶ ಅವರು ''ಮೂರು ಜಾವದ ಸ್ವಾಮಿ''ಯ ಕುರಿತ ಜಾನಪದ ಕತೆಯೊಂದಕ್ಕೆ ಗ್ರಹಣದ ಅರ್ಥ ಹುಡುಕಿ, ಬೆಳಗಿನ ಝಾವ ಮೂರು ತಾಸು ತಡವಾಗಿ ''ಉದಯಿಸಿದ'' ಸೂರ್ಯನ ದಿನಾಂಕವನ್ನು ಹುಡುಕಿದ್ದಾರೆ. ಮಹಾಭಾರತದ ಯುದ್ಧದ ಪ್ರಸಂಗ ಅನೇಕ ಸಂಶೋಧನಾ ಪ್ರಕಟಣೆಗಳನ್ನೇ ಸೃಷ್ಟಿಸಿದೆ.

ವಿಚಿತ್ರದ ಸಂಗತಿ ಇನ್ನೊಂದಿದೆ. ಶಾಸನಗಳಲ್ಲಿ ದೊರಕಿದ ಎಲ್ಲ ಗ್ರಹಣಗಳ ನೆರಳೂ ಕರ್ನಾಟಕದ ಮೇಲೆ ಬಿದ್ದಿಲ್ಲ. ಆದ್ದರಿಂದ ಶಾಸನಗಳನ್ನು ಗ್ರಹಣದ ದಾಖಲೆಗಳು ಎಂದು ಹೇಗೆ ಕರೆಯುವುದು ? ವಿವರಣೆ ಸರಳ : ಜೋಯಿಸರ ಲೆಕ್ಕದ ಆಧಾರದ ಮೇಲೆ ಗುರುತಿಸಿದವು ಈ ದಿನಗಳು. ತಲೆ ಎತ್ತಿ ಆಕಾಶ ನೋಡಿ ನಿರ್ಧರಿಸಿದ ಘಟನೆಗಳಲ್ಲ.

ಅಂದರೆ ಭಾರತೀಯರು ತಲೆ ಎತ್ತಿ ಆಕಾಶವನ್ನು ನೋಡುವುದನ್ನು ಬಿಟ್ಟು ಶತಮಾನಗಳಾಗಿವೆಯೇ ? ಇರಬಹುದು. ಇಂದಿನ ಸಾಮಾನ್ಯಜ್ಞಾನದ ಮಟ್ಟ ಇದೇ ಸಂಶಯವನ್ನು ಉಂಟುಮಾಡುತ್ತದೆ. ಇದೊಂದು ಸಣ್ಣ ಉದಾಹರಣೆ. ಪ್ರಖ್ಯಾತ ಟಿ.ವಿ. ಧಾರಾವಾಹಿಯೊಂದರಲ್ಲಿ ಹೀರೋ ತಲೆ ಎತ್ತಿ ನೋಡಿ ''ಇಂದು ಅಷ್ಟಮಿ'' ಎಂದು ನೆನೆಸಿಕೊಳ್ಳುತ್ತಾನೆ. ತೆರೆಯ ಮೇಲೆ ಮೂಡಿದ್ದು ಪೂರ್ಣ ಚಂದ್ರ - ದಿಗಂತದಂಚಿನಲ್ಲಿ !

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ,
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



ಇವರು ಸಂಘಟಿಸಿದ ಸಾಹಿತ್ಯ ಸಮ್ಮೇಳನಗಳು ಇಂದಿಗೂ ಅಚ್ಚ ಹಸಿರಾಗಿವೆ. ವಿದ್ಯುನ್ಮಾನ ಮಾಧ್ಯಮಗಳ, ಪತ್ರಿಕಾ ಪ್ರತಿನಿಧಿಗಳ ಬಳಗಗಳಿರುವ ನಗರಗಳಲ್ಲಿ ಇವರು ಸಾಹಿತ್ಯೋತ್ಸವಗಳನ್ನು ಮೆರೆಯಲಿಲ್ಲ. ಯಳನಾಡು, ಚಳ್ಳಕೆರೆ, ಹಿರಿಯೂರುಗಳಂತಹ ಹಳ್ಳಿ - ಪಟ್ಟಣಗಳಲ್ಲಿ ಜಿಲ್ಲಾ ಮಟ್ಟದ ಜಾನಪದ ಕಲಾಮೇಳ, ರಾಜ್ಯ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನ ಹಾಗೂ ಜಾನಪದ ಕಲಾಮೇಳ,

ದಾವಣಗೆರೆ, ಬೆಂಗಳೂರು, ಬೀದರ್, ಸಾಣೆಹಳ್ಳಿ, ಮೊಳಕಾಲ್ಮೂರು, ಹೊಸದುರ್ಗಗಳಲ್ಲಿ ಜರುಗಿದ ವಿಚಾರ ಸಂಕಿರಣಗಳಲ್ಲಿ ಸಾಹಿತ್ಯ ಪ್ರಬಂಧಗಳನ್ನು ಮಂಡಿಸಿದ್ದಾರೆ. ಗುಲ್ಬರ್ಗಾ, ಚಿತ್ರದುರ್ಗ, ಭದ್ರಾವತಿ ಆಕಾಶವಾಣಿ ಕೇಂದ್ರಗಳಿಂದ ವಿಚಾರ ರಶ್ಮಿ, ಚಿಂತನೆ, ಚರ್ಚೆ ಪ್ರಸಾರ ಮಾಡಿದ್ದಾರೆ. ಹೆಗ್ಗೋಡಿನ ನೀನಾಸಂ ಆಶ್ರಯದಲ್ಲಿ ನಡೆದ ಚಲನಚಿತ್ರ-ಸಹೃದಯತೆ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ.

# ವಿರಳ ವ್ಯಕ್ತಿತ್ವದ ಸರಳ ಮನುಷ್ಯ ಯಳನಾಡು ಅಂಜನಪ್ಪ

ಹಿರಿಯೂರು ತಾಲ್ಲೂಕಿನ ಶ್ರೀ ವಾಣಿವಿಲಾಸ ಗ್ರಾಮಾಂತರ ಪ್ರೌಢಶಾಲೆ, ಆರನ ಕಟ್ಟೆ ಗ್ರಾಮ. ಇಲ್ಲಿ ಶಿಕ್ಷಕರ ದಿನಾಚರಣೆ, ಸೆಪ್ಟಂಬರ್ ೫ರಂದು ನಡೆದು ಅದು ರಾಷ್ಟ್ರಮಟ್ಟದ ಗಮನ ಸೆಳೆದಿದೆ. ಈ ಶಾಲೆಯ ಮುಖ್ಯ ಶಿಕ್ಷಕ ಶ್ರೀ ಯಳನಾಡು ಅಂಜನಪ್ಪ ಶಿಕ್ಷಕರ ರಾಷ್ಟ್ರ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಕಳೆದ ಮೂವತ್ತೈದು ವರ್ಷಗಳಿಂದ ಈ ಅಂಜನಪ್ಪನವರು ಬದುಕಿನ ಎಲ್ಲ ಅಂಗಳದಲ್ಲೂ ತಮ್ಮ ಆಸಕ್ತಿ - ಅಭಿರುಚಿಗಳನ್ನು ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಥೇಟ್ ಮೇಸ್ಟ್ರಂತೆ ಕಾಣುವ ಮತ್ತು ಮೇಸ್ಟ್ರೇ ಆಗಿರುವ ಇವರು ಬರೀ ಮೇಸ್ಟ್ರಲ್ಲ. ಇವರಲ್ಲಿ ಒಬ್ಬ ಪ್ರಶಾಂತ ಸಾಹಿತಿ ಇದ್ದಾನೆ. ಪ್ರಚಾರದ ಅಬ್ಬರವಿಲ್ಲದೆ ತಣ್ಣಗೆ ಬೇರುಮಟ್ಟದ ಸಂಘಟನೆ ಮಾಡಬಲ್ಲ ಒಬ್ಬ ಸಂಘಟಕನಿದ್ದಾನೆ. ಅದು ಕ್ರೀಡೋತ್ಸವ ಇರಬಹುದು, ಸಾಹಿತ್ಯ ಸಮ್ಮೇಳನವಾಗಿರಬಹುದು, ಗಂಭೀರ ಸ್ವರೂಪದ ವಿಚಾರ ಸಂಕಿರಣಗಳಾಗಿರಬಹುದು, ನಾಟಕ ಸ್ಪರ್ಧೆಗಳಾಗಿರಬಹುದು, ಜಾನಪದ ಅಥವಾ ವಿಜ್ಞಾನ ಮೇಳವಾಗಿರಬಹುದು.

ಅದು ೧೯೭೮ರ ಸಾಲು. ದಾವಣಗೆರೆ ಸಮುದಾಯ ನಾಟಕ ತಂಡದವರು ಚಿತ್ರದುರ್ಗ ಜಿಲ್ಲೆಯಾದ್ಯಂತ ಕಲಾ ಸೈಕಲ್ ಜಾಥಾ ಹಮ್ಮಿಕೊಂಡಿದ್ದೆವು. ಈ ಬಗ್ಗೆ ಪೂರ್ವಾಪರ ಅಂಜನಪ್ಪನವರಲ್ಲಿ ಚರ್ಚಿಸಿದ್ದೆವು. ಸೈಕಲ್ ಜಾಥಾ ಹಿರಿಯೂರು ತಾಲ್ಲೂಕ್ ಪ್ರವೇಶಿಸಿದ್ದಾಯಿತು. ಆದರೆ ಅಂಜನಪ್ಪನವರು ಶೈಕ್ಷಣಿಕ ಕಾರ್ಯದ ಮೇಲೆ ಮೈಸೂರಲ್ಲಿ ಇರಬೇಕಾಗಿತ್ತು. ಆದರೂ ಸೈಕಲ್ ಜಾಥಾ ಹಾದು ಹೋಗುವ ಗ್ರಾಮಗಳಲ್ಲಿ ಎಂತಹ ಆತಿಥ್ಯ ನೀಡಿದ್ದರೆಂದರೆ ಸ್ವತಃ ಅಂಜನಪ್ಪನವರು ಎದುರಿಗಿದ್ದು ನಮ್ಮನ್ನು ಉಪಚರಿಸುತ್ತಿರುವರೇನೋ ಎನ್ನುವಂತಾಗುತ್ತಿತ್ತು. ಅವರ ಗೈರು ಹಾಜರಲ್ಲೂ ಅವರ ಪ್ರಭಾವಕ್ಕೆ ಒಳಗಾದವರು ನಮ್ಮ ಬೀದಿ ನಾಟಕಗಳನ್ನು ಅಷ್ಟು ಅಚ್ಚುಕಟ್ಟಾಗಿ ನಡೆಯಿಸಿಕೊಟ್ಟರು. ಇದು ಅವರ ಸಂಘಟನಾ ಶಕ್ತಿಗೆ ಒಂದು ಉದಾಹರಣೆ. ಜನಪ್ರಿಯತೆಗೂ ಕೂಡ.

ಬಂಡಾಯ ಸಾಹಿತ್ಯ ಸಮ್ಮೇಳನಗಳನ್ನು ಯಶಸ್ವಿಯಾಗಿ ಜರುಗಿಸಿಕೊಟ್ಟರು.

ಪರಿಸರ ಸಂರಕ್ಷಣೆಯ ಮಹತ್ವವನ್ನು ಗ್ರಾಮೀಣ ಪ್ರದೇಶಗಳಲ್ಲಿ ಸಾರಲು ಚಿತ್ರದುರ್ಗ ಜಿಲ್ಲಾದ್ಯಂತ ಕಲಾ ಜಾಥಾ ಸಂಘಟಿಸಿದ್ದಾರೆ. ಇದೇ ರೀತಿ ವೈಜ್ಞಾನಿಕ ದೃಷ್ಟಿಯನ್ನು ಗ್ರಾಮೀಣ ಪ್ರದೇಶಗಳಲ್ಲಿ ಸಾರಲು ಭಾರತ ಜ್ಞಾನ - ವಿಜ್ಞಾನ ಜಿಲ್ಲಾ ಮಟ್ಟದ ಕಲಾ ಜಾಥಾ ಸಂಘಟಿಸಿದ್ದಲ್ಲದೆ, ರಾಷ್ಟ್ರೀಯ ವಿಜ್ಞಾನ ಕಾಂಗ್ರೆಸ್‌ನ ಆಶ್ರಯದಲ್ಲಿ ಮಕ್ಕಳ ತರಬೇತಿ ಶಿಬಿರವನ್ನು ಹಿರಿಯೂರಿನಲ್ಲಿ ೧೯೯೩ರಲ್ಲಿ ವ್ಯವಸ್ಥೆಗೊಳಿಸಿದ್ದಾರೆ. ಅದರ ಮುಂದಿನ ವರ್ಷ ಮಕ್ಕಳಲ್ಲಿ ರಾಷ್ಟ್ರೀಯ ಭಾವೈಕ್ಯಕ್ಕಾಗಿ ಜಿಲ್ಲಾ ಮಟ್ಟದ ಬಾಲೋತ್ಸವವನ್ನು ಚಿತ್ರದುರ್ಗದಲ್ಲಿ ಏರ್ಪಡಿಸಿದ್ದರು. ಚಿತ್ರದುರ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ೧೯೮೨ ರಿಂದ ೮೭ರವರೆಗೆ ಸಾಕಷ್ಟು ಸಾಹಿತ್ಯ ಚಟುವಟಿಕೆಗಳನ್ನು ನೆರವೇರಿಸಿಕೊಟ್ಟಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ ಮೂರು ವರ್ಷ ಕಾಲ ಸೇವೆ ಸಲ್ಲಿಸಿರುವ ಇವರು, ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆಯ ಸಕ್ರಿಯ ಸದಸ್ಯರಾಗಿಯೂ ತಮ್ಮ ಪ್ರಶಾಂತ ಮನಸ್ಸಿನಾಳದ ವಿಪ್ಲವ ಚಿಂತನೆಗಳಿಗೆ ಅಭಿವ್ಯಕ್ತಿ ನೀಡಿದ್ದಾರೆ. ಇವರಿಗೆ ರಾಜ್ಯ ಸರ್ಕಾರ ೧೯೯೬ರಲ್ಲಿ ಶಿಕ್ಷಕರ ರಾಜ್ಯ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಇದೀಗ ಕೇಂದ್ರ ಸರ್ಕಾರ ಶಿಕ್ಷಕರ ರಾಷ್ಟ್ರ ಪ್ರಶಸ್ತಿ ನೀಡಿ ಗೌರವಿಸಿದೆ.

ಪಠ್ಯ ಪುಸ್ತಕ ಪರಿಶೀಲನಾ ಸಮಿತಿಯ ಸದಸ್ಯರಾಗಿ ಶ್ರೀಯುತರು ಹೊಸ ಪಠ್ಯಕ್ರಮಗಳನ್ನು ರೂಪಿಸಿ ಕೊಟ್ಟಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ವಿಜ್ಞಾನ ಮತ್ತು ತಂತ್ರಜ್ಞಾನದ ಕನ್ನಡ ಪದಗಳ ಮಾರ್ಗದರ್ಶಿಯಾಗಿಯೂ ದುಡಿದಿದ್ದಾರೆ. ವಿದ್ಯಾರ್ಥಿ ದೆಸೆಯಲ್ಲಿ ಅಥ್ಲೆಟಿಕ್ಸ್‌ನಲ್ಲಿ ರಾಜ್ಯವನ್ನು ಪ್ರತಿನಿಧಿಸಿದ ಅಂಜನಪ್ಪನವರು ದೈಹಿಕ ಶಿಕ್ಷಣದಲ್ಲಿ ಪದವೀಧರರು. ಹಾಗೆಂದೇ ಇವರು ಪ್ರೌಢಶಾಲಾ ಕ್ರೀಡಾಸ್ಪರ್ಧೆಗಳಿಗೆ ಮೂರು ಬಾರಿ ಸಂಚಾಲಕರಾಗಿ ಆಯ್ಕೆಯಾದವರು.

ಗ್ರಾಮೀಣ ಶಾಲಾ ಮಕ್ಕಳಿಗಾಗಿ ವಿಜ್ಞಾನ ಪ್ರಯೋಗಗಳನ್ನು ನಡೆಸಲು ಹಿರಿಯೂರು ತಾಲ್ಲೂಕ್ ಆರನಕಟ್ಟೆಯಲ್ಲಿ ''ಸಂದೀಪ್ ಪ್ರಯೋಗ ಶಾಲೆ,'' ಹಿರಿಯೂರಿನ ಅರ್ಬನ್ ಬ್ಯಾಂಕ್ ನೆರವಿನೊಂದಿಗೆ ''ಅರ್ಬನ್ ಬ್ಯಾಂಕ್ ಮಕ್ಕಳ ಪ್ರಯೋಗ ಶಾಲೆ''ಯನ್ನು ಗ್ರಾಮೀಣ ವಿಜ್ಞಾನ ಮತ್ತು ಸಂಸ್ಕೃತಿ ಸಂಸ್ಥೆಯ ಆಶ್ರಯದಲ್ಲಿ ತೆರೆದು ಸದರಿ ಸಂಸ್ಥೆಯ ಸಂಚಾಲಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹಿರಿಯೂರಿನಲ್ಲಿ ಇವರು ಕಟ್ಟಿ ಬೆಳೆಸಿದ ವಾಗ್ದೇವಿ ವಿದ್ಯಾಸಂಸ್ಥೆ ಈಗ ಪೂರ್ವ ಪ್ರಾಥಮಿಕದಿಂದ ಹತ್ತನೇ ತರಗತಿವರೆಗೆ ತರಗತಿಗಳನ್ನು ಹೊಂದಿದೆ.

ಅಂಜನಪ್ಪನವರು ಬರೆದು ಪ್ರಕಟಿಸಿರುವ ಕೆಲವು ಕೃತಿಗಳು ಇವು : 'ಮಿಂಚು' (ಕವನ ಸಂಕಲನ), 'ಗ್ರಹಣ' (ಮಕ್ಕಳ ಕಥಾ ಪುಸ್ತಕ), 'ವನಸುಮ' (ಸ್ವಾತಂತ್ರ್ಯ ಯೋಧನ ಜೀವನ ಚಿತ್ರಣ), 'ಹಗಲು ವೇಷದವರ ಸಂಸ್ಕೃತಿ' (ಉಪಸಂಸ್ಕೃತಿ ಅಧ್ಯಯನ), 'ಆಲ್ಬರ್ಟ್ ಐನ್‌ಸ್ಟೀನ್' (ಜೀವನ ಚಿತ್ರಣ), 'ನೇಣು ಮತ್ತು ಇತರ ಕಥೆಗಳು' (ಕಥಾ ಸಂಕಲನ), 'ಬೆಳಕಿಗೊಂದು ಕಿರಣ' (ಸಂಕೀರ್ಣ).

ಕಳೆದ ಮೂವತ್ತೈದು ವರ್ಷಗಳಲ್ಲಿ ಸುಮಾರು ಐದು ನೂರಕ್ಕೂ ಹೆಚ್ಚು ಸಾಹಿತ್ಯ, ಕಲೆ, ಸಂಗೀತ, ಸಂಸ್ಕೃತಿಗೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ಯೋಜಿಸಿ ಸಂಘಟಿಸಿದ ಕೀರ್ತಿ ಇವರದು. ಸಾಲದ್ದಕ್ಕೆ ಕಳೆದ ಹತ್ತು ವರ್ಷಗಳಿಂದ ಕನ್ನಡಪ್ರಭ, ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳ ವರದಿಗಾರರು. ಹನುಮಂತಪ್ಪ ಚೌಡಮ್ಮ ದಂಪತಿಗಳ ಮಗನಾಗಿ ಹುಟ್ಟಿದ್ದು ಯಳನಾಡು ಗ್ರಾಮದಲ್ಲಿ ಎಂದೇ ಈ ಸರಳ - ಸಜ್ಜನ ಮನುಷ್ಯ ಯಳನಾಡು ಅಂಜನಪ್ಪ.

**ಈಶ್ವರ ಪ್ರಸಾದ್**
ನಂ. ೧, ದೇವಸ್ಥಾನದ ಮನೆಗಳು, ೫ನೇ ಕ್ರಾಸ್, ನಿಟುವಳ್ಳಿ
ಹೊಸಬಡಾವಣೆ, (ಧನ್ವಂತರಿ ಕ್ಲಿನಿಕ್ ಪಕ್ಕ), ದಾವಣಗೆರೆ

# ಜಗತ್ತನ್ನು ವಿಸ್ಮಯಗೊಳಿಸುತ್ತಿರುವ ಪುಟ್ಟ ಬಾಲಕ : ಸ್ವರೂಪ್

ದಕ್ಷಿಣ ಕನ್ನಡ ಜಿಲ್ಲೆಯ ಉಪ್ಪಿನಂಗಡಿಯ ಆತೂರು ಎಂಬ ಗ್ರಾಮದ ಒಂದು ಬಡಕುಟುಂಬದಲ್ಲಿ ಜನಿಸಿದ ಪುಟ್ಟನೋರ್ವನು ಇದೀಗ ಜಗದ್ವಿಖ್ಯಾತನಾಗುತ್ತಿದ್ದಾನೆ. ತನ್ನ ಅಪೂರ್ವ ಸ್ಮರಣ ಶಕ್ತಿ ಮತ್ತು ಗ್ರಹಣ ಶಕ್ತಿಗಳಿಂದ ಜನರನ್ನು ಬೆಚ್ಚಿಬೀಳಿಸುತ್ತಿದ್ದಾನಲ್ಲದೆ ಈತ ತನ್ನ ಅದ್ಭುತ ಕ್ರಿಯಾಶೀಲತೆಯಿಂದ ಮಾದರಿಯಾಗಿ ಹೊಮ್ಮುತ್ತಿದ್ದಾನೆ.

ಈ ಪುಟ್ಟನ ಹೆಸರು ಮಹಮ್ಮದ್ ಸ್ವರೂಪ್. ಈತನ ಪ್ರಾಯ ಕೇವಲ ಎರಡೂವರೆ ವರ್ಷ. ಮನೆಮಂದಿಯಿಂದ ಪುಟ್ಟಾ ಎಂದು ಕರೆಯಲ್ಪಡುವ ಈತ ಕಂಪ್ಯೂಟರ್ ಆಪರೇಟ್ ಮಾಡಬಲ್ಲ ಚಾಣಾಕ್ಷ. ಇಂಟರ್‌ನೆಟ್, ವೆಬ್ ಸೈಟ್‌ಗಳನ್ನು ಸಲೀಸಾಗಿ ತೆರೆಯಬಲ್ಲ, ಶಿವರಾಮ ಕಾರಂತರ ಬಗ್ಗೆ, ದೇಶನಾಮಗಳ ಬಗ್ಗೆ, ಸವಿವರವಾಗಿ ನುಡಿಯಬಲ್ಲ. ವಾಹನ, ಮನುಷ್ಯರ ವಿವಿಧ ಭಾಗಗಳನ್ನು ಮುಟ್ಟಿ ಮುಟ್ಟಿ ಹೆಸರಿಸುವ ಈ ಪುಟ್ಟನ ಪುಟ್ಟ ಮೆದುಳಿನಲ್ಲಿ ಹತ್ತು ಸಾವಿರಕ್ಕೂ ಮಿಕ್ಕಿದ ಪದಗಳು ತುಂಬಿಕೊಂಡಿವೆ.

ಆದರೆ ಈ ಕುರಿತು ಪುಟ್ಟನ ತಂದೆ ತಾಯಿಗಳಾದ ಮಹಮ್ಮದ್ ರಫೀಕ್ - ಆತಿಕಾರವರಲ್ಲಿ ಕೇಳಿದಾಗ ಆ ಬಗ್ಗೆ ಅವರು ಮುಗುಳ್ನಗುತ್ತಾರೆ ಹೊರತು ಯಾವುದೇ ಪ್ರತಿಕ್ರಿಯೆ ನೀಡುವುದಿಲ್ಲ. ಮಹಮ್ಮದ್ ರಫೀಕ್ ಮಂಗಳೂರಿನ 'ಸ್ವರೂಪ' ಸಂಸ್ಥೆಯ ಶಿಕ್ಷಕ ಗುರು ಗೋಪಾಡ್ಕರ್‌ರವರ ಶಿಷ್ಯರಾಗಿದ್ದು, ಶಿರವೂರು ಯು.ಪಿ. ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದಾರೆ.

ಇದೇನು ಪವಾಡವಾಗಿರಬಹುದೆ ? ಖಂಡಿತಾ ಅಲ್ಲವೆನ್ನುತ್ತಾರೆ ಕಲಾವಿದ, ಸಂಶೋಧಕ ಗೋಪಾಡ್ಕರ್. ಮಂಗಳೂರಿನ 'ಸ್ವರೂಪ' ಸಂಸ್ಥೆಯಲ್ಲಿ ಶಿಕ್ಷಕ ತರಬೇತು ನಡೆಸುವ ಗೋಪಾಡ್ಕರ್, ಜತೆಗೆ ಮಕ್ಕಳ ಸ್ಮರಣ ಶಕ್ತಿಯನ್ನು ಅಭಿವೃದ್ಧಿಪಡಿಸುವ ಹಲವಾರು ತಂತ್ರಗಳನ್ನು ಕಂಡುಕೊಂಡಿದ್ದಾರೆ. ಈ ತಂತ್ರಗಳನ್ನು ತನ್ನ ಶಿಷ್ಯ ರಫೀಕ್‌ರವರು ಸ್ವತಃ ಕಂದನ ಮೇಲೆಯೇ ಪ್ರಯೋಗಿಸಿ ಯಶಸ್ವಿಯಾಗಿದ್ದಾರೆ. ಒಂದರ್ಥದಲ್ಲಿ ''ಸ್ವರೂಪ್'' ಸ್ವರೂಪ ಕೇಂದ್ರದ ಶೋಧನೆ ಎನ್ನಬಹುದು.

ಕಂಪ್ಯೂಟರ್ ಕೀ ಬೋರ್ಡಿನ ಮೇಲೆ ಅನಾಯಾಸವಾಗಿ ಬೆರಳುಗಳನ್ನೆತ್ತಿ ತನ್ನ ಹೆಸರನ್ನು ಟೈಪ್ ಮಾಡುವ ಸ್ವರೂಪ್ ತನ್ನಲ್ಲಿನ ಸಾಮಾನ್ಯ ಜ್ಞಾನಗಳನ್ನು ಒಂದಕ್ಕೊಂದು ತಾಳೆ ಹಾಕಿ ತರ್ಕ ಬೆಳೆಸಬಲ್ಲ. ಈಗೀಗ ಪುಟ್ಟ ಕಾರ್ ಡ್ರೈವಿಂಗ್‌ನಲ್ಲೂ ಪಳಗಿದ್ದು ಡ್ರೈವರ್ ಸಹಾಯದಿಂದ ಕಾರನ್ನೂ ಕೊಂಡೊಯ್ಯುತ್ತಾನೆ. ಎರಡೂವರೆ ಹರೆಯದ ಈ ಪುಟ್ಟ (ಜನನ : ೧೯೯೮ ಜನವರಿ ೧೭) ಕನ್ನಡ, ತುಳು, ಇಂಗ್ಲಿಷ್, ಮಲಯಾಳಂ ಭಾಷೆಗಳನ್ನು ನಿರರ್ಗಳವಾಗಿ ಮಾತನಾಡುತ್ತಾನೆ. ಹಾಗೆ ನೋಡಿದರೆ ಸ್ವರೂಪನ ಈ ಪ್ರತಿಭೆ ಗಿನ್ನಿಸ್ ದಾಖಲೆಗೆ ಅರ್ಹವಾಗಿದೆ.

ಗೋಪಾಡ್ಕರ್ ಪ್ರಕಾರ ಇದು ಎಲ್ಲಾ ಮಕ್ಕಳಿಗೂ ಸಾಧ್ಯ. ಮಗುವಿಗೆ ಸ್ವಲ್ಪ ಪ್ರೀತಿಯನ್ನು ನೀಡಬೇಕು. ಅದು ಬಹಳ ಪ್ರೀತಿಯನ್ನು ಹಿಂದಿರುಗಿಸುತ್ತದೆ. ಅದರಂತೆಯೇ ಅವಕ್ಕೆ ಸಾಮಾನ್ಯ ಜ್ಞಾನವನ್ನು ನೀಡುತ್ತಿರಬೇಕು. ಹಾಗೆ ಮಾಡಿದಾಗ ಅವನ್ನು ಆ ಮಗು ಸ್ವೀಕರಿಸುತ್ತದೋ ಬಿಡುತ್ತದೋ ಅದು ಮುಖ್ಯವಲ್ಲ. ನಮ್ಮ ಕ್ರಿಯೆಗೂ ಮಗು ನೀಡುವ ಪ್ರತಿಕ್ರಿಯೆಯನ್ನು ನಾವು ಸ್ವೀಕರಿಸಬೇಕು. ಮಗು ಕೇಳುವ ತುಂಟ ಪ್ರಶ್ನೆಗೆ ''ಫಟತ್'' ಉತ್ತರ ನೀಡದೆ ಅದನ್ನು ಸಾವಧಾನವಾಗಿ ಉತ್ತರಿಸಬೇಕು. ಪ್ರತಿಯೊಬ್ಬ ಬಾಲಕನನ್ನು ಈ ರೀತಿ ಬುದ್ಧಿವಂತನಾಗಿಸುವುದಕ್ಕೆ ಸಾಧ್ಯವಿದೆ. ಒಮ್ಮೊಮ್ಮೆ ರಕ್ಷಕರು ಕೂಡ ಮಗುವಿನಂತೆಯೇ ಮಗುವಿನ ಜತೆಗೆ ವರ್ತಿಸಬೇಕಾಗುತ್ತದೆ.

ರಫೀಕ್‌ರವರು ಈ ಪ್ರಯೋಗಗಳನ್ನು ಮಗು ಹುಟ್ಟಿದ ನಲ್ವತ್ತನೇ ದಿವಸದಿಂದಲೇ ಪ್ರಯೋಗಿಸುತ್ತಾ ಬಂದಿದ್ದಾರೆ.



*ಕಂಪ್ಯೂಟರ್‌ನೊಂದಿಗೆ ಆಟ*

೧ ವರ್ಷ ೨ ತಿಂಗಳ ಹರೆಯದಲ್ಲಿ ಸ್ವರೂಪ್ ಇಂಗ್ಲಿಷ್ ವರ್ಣಮಾಲೆಯನ್ನು ಕಲಿತು, ಓದಲಾರಂಭಿಸಿದ್ದ. ಕ್ರಮೇಣ ಸ್ವರೂಪನಿಗೆ ಜಗತ್ತಿನ ವಸ್ತುಗಳ ಪರಿಚಯ ನೀಡಲಾಯಿತು. ಸ್ವರೂಪನನ್ನು ಎತ್ತಿಕೊಂಡೊಯ್ದು ಕೋರ್ಟು, ಕಚೇರಿ, ರೈಲ್ವೆ ನಿಲ್ದಾಣ, ಜೈಲ್, ವಾಹನಗಳ ಸ್ಪರ್ಶ, ಪರಿಚಯ ನೀಡಲಾಯಿತು. ಅದನ್ನು ಆತನ ಮನಸ್ಸಿನೊಳಗೆ ಹಾಕಿ ಪುನಃ ಪುನಃ ಅದನ್ನೇ ಯೋಚಿಸುವಂತೆ ಪ್ರೇರೇಪಿಸಲಾಯಿತು. ಕ್ರಮೇಣ ಸಾಮಾನ್ಯ ಜ್ಞಾನವನ್ನು ಸ್ವಲ್ಪ ಸ್ವಲ್ಪವೇ ನೀಡಿದಾಗ ಪುಟ್ಟ ಎರಡು ವರ್ಷದವನಾಗುವಾಗ ಪ್ರತಿಭಾವಂತನಾಗಿ ಹೊರಹೊಮ್ಮಿದ್ದಾನೆ ಎನ್ನುತ್ತಾರೆ ತಂದೆ ರಫೀಕ್ ಹಾಗೂ ತಾಯಿ ಆತಿಕಾ.

ಸ್ವರೂಪ್‌ನ ಈಗಿನ ಸ್ಥಿತಿ ಆಶ್ಚರ್ಯಜನಕವಾಗಿದೆ. ಇಲ್ಲಿ ಸ್ವರೂಪ್‌ನನ್ನು ಪುಟ್ಟ ಎಂದೇ ಕರೆಯಲಾಗುತ್ತದೆ. ''ಪುಟ್ಟ ಅದೇನು ?'', ''ಪುಟ್ಟಾ ಇದೇನು ?'' ಎಂಬುದಾಗಿ ಆತನಲ್ಲಿ ಕುತೂಹಲ ಕೆರಳಿಸಲಾಗುತ್ತದೆ. ಇವುಗಳಿಗೆ ಪುಟ್ಟ ಉತ್ತರ ನೀಡುವ ಶೈಲಿಯೂ ವಿಭಿನ್ನವಾದುದು. ಯಾವುದಾದರೂ ಪ್ರಶ್ನೆ ಕೇಳಿದೊಡನೆ ಅವನಷ್ಟಕ್ಕೆ ತುಂಟಾಟದಲ್ಲಿದ್ದರೂ ಪ್ರಶ್ನೆಗೆ ಉತ್ತರ ಅವನ ಮನಸ್ಸು ಹುಡುಕುತ್ತಿರುತ್ತದೆ. ಉತ್ತರ ಹೊಳೆದಾಗ ಸಲೀಸಾಗಿ ಉತ್ತರಿಸಿ ಬಿಡುತ್ತಾನೆ. ಇದೀಗ ಈ ಪುಟ್ಟನನ್ನು ಕಂಡೊಡನೆ ದಕ್ಷಿಣ ಕನ್ನಡಾದ್ಯಂತ ಜನಸಾಗರವೇ ನೆರೆದುಬಿಡುತ್ತದೆ. ಇದೊಂದು ಪವಾಡವೆಂದವರೆ ಹೆಚ್ಚು. ಪುಟ್ಟನ ಜಾಣ್ಮೆಯನ್ನು ಮೆಚ್ಚಿ ಧರ್ಮಸ್ಥಳದ ಡಾ॥ ವೀರೇಂದ್ರ ಹೆಗ್ಗಡೆಯವರು ಕಂಪ್ಯೂಟರನ್ನು ಉಚಿತವಾಗಿ ನೀಡಿದ್ದಾರೆ. ಪುಟ್ಟನ ಮಾನಸಿಕ ಬೆಳವಣಿಗೆಯ ಕ್ರಿಯೆಯಿದು. ಎಷ್ಟೋ ಸಾವಿರ ಜನರು ನೆರೆದಿರಲಿ ಪುಟ್ಟ ಒಂದಿಂತೂ ಹೆದರಲಾರ. ತನ್ನನ್ನು ಭೇಟಿಯಾಗುವ ಪತ್ರಕರ್ತರ ಕ್ಯಾಮರಾ ಪಡೆದು ಅದರ ವಿವಿಧ ಭಾಗಗಳನ್ನು ತೋರಿಸಿಕೊಡುತ್ತಾನೆ. ಕೋಟು ಧರಿಸಿ ಹೊರಗೆ ಬಂದ ಪುಟ್ಟನನ್ನು ''ನೀನ್ಯಾರು ?'' ಎಂದು ಪ್ರಶ್ನಿಸಿದರೆ ಹುಸಿ ನಗುತ್ತಾ ''ವಾಜಪೇಯಿ'' ಎನ್ನುತ್ತಾನೆ.

ಇತ್ತೀಚೆಗೆ ಡಾ॥ ಮೋಹನ್ ಆಳ್ವಾ ಎಂಬುವರು ಪುಟ್ಟನಿಗೆ ಹಲ್ವಾ ನೀಡಿದಾಗ ತಕ್ಷಣ ಪುಟ್ಟ ''ಲೈಟ್ ಇನ್‌ವೆಂಟೆಡ್ ಬೈ ಥಾಮಸ್ ಆಳ್ವಾ ನಾಟ್ ಮೋಹನ್ ಆಳ್ವಾ'' ಎಂದು ನಿರರ್ಗಳವಾಗಿ ನುಡಿದಾಗ ಅವರು ಆಶ್ಚರ್ಯ ಚಕಿತರಾದರು. ಹೀಗೆ ಪುಟ್ಟನು ಒಂದೊಂದಕ್ಕೆ ಮತ್ತೊಂದನ್ನು ತಾಳೆಹಾಕುವ ಪರಿ ಮಾನಸಿಕವಾಗಿ ಬೆಳವಣಿಗೆ ಸೂಚಿಸುತ್ತದೆ.

ಹೀಗೆ ಇದು ಮುಂದುವರಿದಂತೆ ನಾವು ಪುಟ್ಟನ ಮುಂದಿನ ಭವಿಷ್ಯದ ಕುರಿತು ಚಿಂತಿಸುವುದು ಅಸಾಧ್ಯ. ಈಗಿನ ಪ್ರಾಯದಲ್ಲಿ ಪುಟ್ಟ ಅಸಾಧಾರಣ ವ್ಯಕ್ತಿ. ಮುಂದೆ ಈ ಚಟುವಟಿಕೆ ಯಾವ ರೀತಿ ಉಳಿದೀತು ಎಂದು ಹೇಳಲಿಕ್ಕಾಗದು. ಈಗಿನ ಪುಟ್ಟನ ಸ್ಥಿತಿ ಅದ್ಭುತವೇ. ತನಗರಿವಿಲ್ಲದಂತೆ ಈತ ಎಲ್ಲವನ್ನೂ ಸಲೀಸಾಗಿ ಸ್ವೀಕರಿಸಬಲ್ಲ. ಮಕ್ಕಳ ಸ್ಮರಣ ಶಕ್ತಿಯನ್ನು ಹೆಚ್ಚಿಸಬಹುದಾದ ಇಂತಹ ತಂತ್ರಗಳು ಎಲ್ಲರಿಗೂ ಮಾದರಿಯಾಗಲೆಂದೇ ಸ್ವರೂಪ ಹೆಚ್ಚಿನ ಪ್ರಚಾರ ಪಡೆಯುತ್ತಿದ್ದಾನೆ ಹೊರತು ಬೇರ್‍ಯಾವ 'ಪವಾಡ'ವೆಂಬ ನೆಲೆಯಲ್ಲಿ ಅಲ್ಲ ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಗೋಪಾಡ್ಕರ್ ಅವರು ಇಂತಹ ತಂತ್ರಗಳನ್ನು ಶಿರವೂರು ಶಾಲೆಯಲ್ಲಿ ಪರಿಚಯಿಸಿದಾಗ ಅಲ್ಲಿನ ಕೆಲವು ಕೋಮುವಾದಿಗಳು ತೀವ್ರ ಪ್ರತಿರೋಧ ನೀಡಿದ್ದು ಅನಾರೋಗ್ಯಕರ ಸಂಗತಿ. ನಮ್ಮನ್ನು ವಿಸ್ಮಯಗೊಳಿಸುತ್ತಿರುವ 'ಪುಟ್ಟ' ಮತ್ತೂ ಬುದ್ಧಿವಂತನಾಗಿ ಹೊರಹೊಮ್ಮಿಬರಲಿ ಎಂದು 'ಹೊಸತು' ಹಾರೈಸುತ್ತದೆ.

**ಹರ್ಷಾದ್ ವರ್ಕಾಡಿ**

'ಹಲಸಿನಕಟ್ಟೆ', ವರ್ಕಾಡಿ - ೬೭೧ ೩೨೩, ಕೇರಳ ರಾಜ್ಯ

# ಗ್ರಹಣ ಹಿಡಿಯುತ್ತಿರುವ ಉಚ್ಚ ಶಿಕ್ಷಣ

ಡಾ॥ ವಿ. ಕೆ. ತಿವಾರಿ

ಭಾರತದಂತಹ ಪ್ರಜಾಪ್ರಭುತ್ವವಾದಿ ರಾಷ್ಟ್ರಗಳಲ್ಲಿ ಸಮಾಜದ ಸರ್ವತೋಮುಖ ಬೆಳವಣಿಗೆಗಾಗಿ ರೂಪಿಸುವ ಯೋಜನೆಗಳಲ್ಲಿ ಅಲ್ಲಿನ ಸರಕಾರಗಳು ಆದ್ಯತೆ ನೀಡಬೇಕಾಗಿರುವುದು ಶಿಕ್ಷಣ ಮತ್ತು ಆರೋಗ್ಯಕ್ಕೆ. ಇದು ಎಲ್ಲ ದೇಶಗಳಿಗೂ, ಎಲ್ಲ ಸಮಾಜಗಳಿಗೂ ಅನ್ವಯಿಸುವ ಮಾತು ಕೂಡ. ಸುಶಿಕ್ಷಿತ ಮತ್ತು ಆರೋಗ್ಯಕರ ಜನಸಮುದಾಯಗಳೇ ಅಭಿವೃದ್ಧಿಯತ್ತ ದಿಟ್ಟ ಹೆಜ್ಜೆಗಳನ್ನಿಡಲು ಸಾಧ್ಯ.

ಭಾರತದಲ್ಲಿ ಶಿಕ್ಷಣ ಮತ್ತು ಜನಾರೋಗ್ಯ, ಈ ಎರಡೂ ಅಂಶಗಳು ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಆಳಿದ ಎಲ್ಲ ಸರಕಾರಗಳ ಅಲಕ್ಷ್ಯಕ್ಕೆ ಗುರಿಯಾಗಿವೆಯೆಂದರೆ ತಪ್ಪಾಗಲಾರದು. ವ್ಯವಸ್ಥಿತ ಬದುಕಿಗೆ ಅನುವು ಮಾಡಿಕೊಡಬಲ್ಲ ಪ್ರಾಥಮಿಕ ಶಿಕ್ಷಣ ಕ್ಷೇತ್ರದ ಪರಿಸ್ಥಿತಿಯಂತೂ ಕರುಣಾಜನಕವಾಗಿದೆ. ಉಚ್ಚ ಶಿಕ್ಷಣ ಕ್ಷೇತ್ರವೂ ಈ ಪರಿಸ್ಥಿತಿಗೆ ಹೊರತಲ್ಲ. ಉಚ್ಚ ಶಿಕ್ಷಣದ ಸಮಸ್ಯೆಗಳು ಮತ್ತು ಅಲ್ಲಿನ ರಾಜಕೀಯ ವಿದ್ಯಮಾನಗಳು ಹಾಗೂ ಆ ಕ್ಷೇತ್ರವನ್ನು ಕಿತ್ತು ತಿನ್ನುತ್ತಿರುವ ಸಮಸ್ಯೆಗಳ ಬಗ್ಗೆ ಚಿಂತನೆ ಅಗತ್ಯವಾಗಿದೆ.

ವಿಶ್ವರಾಷ್ಟ್ರ ಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆ ಉಚ್ಚ ಶಿಕ್ಷಣ ಕುರಿತು ಸಂಘಟಿಸಿದ ಮೊದಲನೆಯ ಸಮ್ಮೇಳನ ಜರುಗಿದ್ದು 1998, ಪ್ಯಾರಿಸ್‌ನಲ್ಲಿ. ಸಾಮಾಜಿಕ ಅಭಿವೃದ್ಧಿಯ ನಿಟ್ಟಿನಲ್ಲಿ ಉಚ್ಚ ಶಿಕ್ಷಣ ಎಷ್ಟು ಮಹತ್ವದ ಪಾತ್ರ ನಿರ್ವಹಿಸುತ್ತದೆ ಎಂಬುದನ್ನು ಆ ಸಮ್ಮೇಳನವು ಆಮೂಲಾಗ್ರವಾಗಿ ವಿಶ್ಲೇಷಿಸಿದೆ. ಜನಸಾಮಾನ್ಯರ ಹಿತಾಸಕ್ತಿಯ ದೃಷ್ಟಿಯಲ್ಲಿ ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳು ಸರಕಾರದ ನಿರ್ದೇಶನದಲ್ಲಿಯೇ ಜರುಗಬೇಕೆನ್ನುವುದು ಪ್ಯಾರಿಸ್ ಸಮ್ಮೇಳನದ ಒಂದು ಮುಖ್ಯವಾದ ಘೋಷಣೆ. ಇದಕ್ಕೆ ಅನುಗುಣವಾಗಿ ತಮ್ಮ ಯೋಜನೆಗಳನ್ನು ರೂಪಿಸಿಕೊಂಡ ಕೆಲವು ರಾಷ್ಟ್ರಗಳು ಗಮನಾರ್ಹವಾದ ಪ್ರಗತಿಯನ್ನು ಸಾಧಿಸಿವೆ. ಇದಾವುದನ್ನೂ ಲೆಕ್ಕಿಸದೆ ತಮ್ಮದೇ ಆದ ನೀತಿಗಳನ್ನನುಸರಿಸಿದ ರಾಷ್ಟ್ರಗಳಲ್ಲಿನ ವಿವಿಧ ಕ್ಷೇತ್ರಗಳಲ್ಲಿ ಏರುಪೇರುಗಳನ್ನು ಕಾಣುತ್ತೇವೆ. ಅನಕ್ಷರತೆ, ಅಸಮಾನತೆ, ಆರ್ಥಿಕ ಮುಗ್ಗಟ್ಟು, ನಿರುದ್ಯೋಗ ಇವೇ ಸಮಸ್ಯೆಗಳು ಅಲ್ಲಿ ತಾಂಡವವಾಡುತ್ತಿವೆ. ಮೇಲಾಗಿ, ಯುವಜನರು ಉಚ್ಚ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಪರಿಣಾಮವಾಗಿ ಉಂಟಾಗಿರುವ ಸಾಮಾಜಿಕ ಹಿನ್ನಡೆಯನ್ನು ಗುರುತಿಸಿ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಪಟ್ಟ ಎಲ್ಲ ಇಲಾಖೆಗಳು ಎಚ್ಚೆತ್ತುಕೊಂಡು ಕೂಡಲೆ ಕಾರ್ಯಮಗ್ನವಾಗಬೇಕಾಗಿದೆ. ಅಂತೆಯೇ ಎಲ್ಲ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿ ಇಡೀ ಶಿಕ್ಷಣ ಕ್ಷೇತ್ರವು ಪ್ರಗತಿ ಸಾಧಿಸುವ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ. ಈ ಜವಾಬ್ದಾರಿ, ಮಾನವ ಸಂಪನ್ಮೂಲಗಳ ಅಭಿವೃದ್ಧಿ ಸಚಿವಾಲಯ, ವಿಶ್ವವಿದ್ಯಾಲಯ ಅನುದಾನ ಆಯೋಗ, ಪ್ರೌಢ ಶಿಕ್ಷಣ ಕೇಂದ್ರ ಮಂಡಳಿ, ಶಿಕ್ಷಣ, ಸಂಶೋಧನೆ ಹಾಗೂ ತಂತ್ರಜ್ಞಾನ ರಾಷ್ಟ್ರೀಯ ಸಮಿತಿ, ಮತ್ತಿತರ ಸಂಸ್ಥೆಗಳ ಮೇಲೂ ಇದೆ.

ಮೊದಮೊದಲು ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿದ ತಜ್ಞರು ರಾಷ್ಟ್ರದ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದ ಕಾಲವೊಂದಿತ್ತು. ಅವರಿಗೆ ಆ ಮುನ್ನೋಟವಿತ್ತು. ಈ ಕಾರಣದಿಂದಲೇ, ಅಂದಿನ ಮುಂಗಡ ಪತ್ರಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಸಾಕಷ್ಟು ಹಣ ಮೀಸಲಾಗಿಡಲಾಗುತ್ತಿತ್ತು. ಇದಕ್ಕೆ ಧಕ್ಕೆ ಉಂಟಾಗಿದ್ದು 4ನೇ ಪಂಚವಾರ್ಷಿಕ ಯೋಜನೆಯ ಮತ್ತು ನಂತರದ ಕಾಲದಲ್ಲಿ. ಇವೆಲ್ಲದರ ಪರಿಣಾಮಗಳು ಈಗ ನಮ್ಮ ಮುಂದಿವೆ. ಹಣದ ಕೊರತೆ ಹಾಗೂ ಬದ್ಧತೆ ರಹಿತ ರೀತಿನೀತಿಗಳಿಂದ ಇಡೀ ಶಿಕ್ಷಣ ವ್ಯವಸ್ಥೆ ಕುಸಿಯುತ್ತಿದೆ. ಈ ಪರಿಸ್ಥಿತಿಗೆ ಕಾರಣವೆಂದರೆ ಆಳುವ ವರ್ಗವು ಇಲ್ಲಿ ಕಾಣಿಸಿರುವ ಅಂಶಗಳ ಬಗ್ಗೆ ತೋರಿದ ಅನಾದರ ಮತ್ತು ಬೇಜವಾಬ್ದಾರಿತನ. ಅವು ಯಾವುವೆಂದರೆ : 1) 14ನೇ ವಯಸ್ಸಿನವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕು ಮತ್ತು 1960ರ ಒಳಗಾಗಿ ಅನಕ್ಷರತೆಯನ್ನು ನಿರ್ಮೂಲಗೊಳಿಸಬೇಕು. 2) ಕೊಠಾರಿ ಆಯೋಗದ (1964-66) ಶಿಫಾರಸುಗಳಂತೆ ಶಿಕ್ಷಣಕ್ಕಾಗಿ 1985ರ ಹೊತ್ತಿಗೆ ಸಮಗ್ರ ರಾಷ್ಟ್ರೀಯ ಉತ್ಪನ್ನದ ಶೇಕಡಾ 6ರಷ್ಟಕ್ಕೆ ಹೆಚ್ಚಿಸಬೇಕು. ಇದೇ ಶಿಫಾರಸುಗಳನ್ನು ಸಂಸತ್ತಿನಲ್ಲಿ 1968ರ ತನ್ನ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಒಂದು ಮುಖ್ಯ ಅಂಶವನ್ನಾಗಿ ಅಳವಡಿಸಿಕೊಂಡದ್ದು ಗಮನಿಸಬೇಕಾದ ಅಂಶ. ಈ ಕರ್ತವ್ಯ ಲೋಪದಿಂದ ಉಂಟಾದ ದುಷ್ಪರಿಣಾಮಗಳಿಂದಾಗಿ ಶಿಕ್ಷಣ ಕ್ಷೇತ್ರ ನಲುಗುತ್ತಿದೆ. ಸಾಕ್ಷರತೆ ಶೇಕಡಾ 64ರಷ್ಟು ಹೆಚ್ಚಿದೆಯೆಂಬ ವರದಿಗಳು ಹಾಗಿರಲಿ, ಅನಕ್ಷರತೆಯ ಜೊತೆಗೇ ಹುಟ್ಟಿಬರುವ ಲಿಂಗದ ಆಧಾರದ ಮೇಲಿನ ಅಸಮಾನತೆ, ಏರುಪೇರು ಎರಡೂ ಕಣ್ಣಿಗೆ ರಾಚುತ್ತವೆ. ಇದರಿಂದಾಗಿ ಜಾಗತಿಕ ವೇದಿಕೆಗಳಲ್ಲಿ ಭಾರತ ತಲೆ ತಗ್ಗಿಸುವ ಸಂದರ್ಭಗಳು ಉಂಟಾಗಿವೆ.

ಈ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಅನುಸರಿಸಿದ ದಿಕ್ಕೆಟ್ಟ ನೀತಿಗಳು ಕೂಡಲೆ ವಿಶ್ಲೇಷಣೆಗೆ ಗುರಿಯಾಗಬೇಕಾಗಿದೆ. ರಾಷ್ಟ್ರೀಯ ಸಾಕ್ಷರತಾ ಆಯೋಗ ತನ್ನ ಸಾಧನೆಗಳ ಬಗ್ಗೆ ಏನೇ ಹೇಳಿಕೊಂಡರೂ ಸಂಪೂರ್ಣ ಸಾಕ್ಷರತೆ ಎಂದು, ಹೇಗೆ ಎನ್ನುವ ಬೃಹತ್ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಶಿಕ್ಷಣ ಕ್ಷೇತ್ರ ಭದ್ರ ಬುನಾದಿ ಇಲ್ಲದೆ ಎತ್ತೆತ್ತಲೋ ಸಾಗುತ್ತಿರುವಂತಿದೆ. ಗೊಡ್ಡು ಘೋಷಣೆಗಳಿಂದ, ಕ್ಲೀಷೆಗಳಿಂದ ಕಿಂಚಿತ್ತೂ ಪ್ರಯೋಜನವಾಗಲಾರದು. ಸೂಕ್ತವಾದ ನೀತಿಗಳನ್ನು ರೂಪಿಸಿ ಸಾಕಷ್ಟು ಹಣವನ್ನು ಒದಗಿಸಿ ಸಮಸ್ಯೆಗಳ ಪರಿಹಾರಕ್ಕೆ ನೆರವಾಗಲು ಸರಕಾರ ಮುಂದೆ ಬರಬೇಕಾಗಿದೆ. ಈ ನಿಟ್ಟಿನಲ್ಲಿ ಈವರೆಗೆ ಬಂದಿರುವ ಸುಳ್ಳು ಆಶ್ವಾಸನೆಗಳು ಸಂಸತ್ತಿನ ಇಲ್ಲವೇ ಕೆಂಪುಕೋಟೆಯ ಗೋಡೆಗಳಿಗೇ ಅಂಟಿಕೊಂಡು ನಾರುತ್ತಿವೆ. ಹಣದ ಕೊರತೆಯನ್ನು ನೀಗಿಸುತ್ತೇವೆಂದು ಎಲ್ಲ ಸರಕಾರಗಳು ಹೇಳುತ್ತಲೇ ಬಂದಿವೆ. ಇದು ಒಂದು ರೀತಿಯ ಜಾಡ್ಯ. ಹೇಳಿಕೆಗಳೇ ಬೇರೆ, ಆಡಳಿತದ ರೀತಿ ನೀತಿಗಳೇ ಬೇರೆ. ಆದರೆ ಇವೆಲ್ಲಕ್ಕಿಂತಲೂ ಉಚ್ಚ ಶಿಕ್ಷಣಕ್ಕೆ ಹಣ ಒದಗಿಸಲು ಈಗಿನ ಸಂದರ್ಭದಲ್ಲಿ ಸರಕಾರಕ್ಕೆ ಸಾಧ್ಯವಿಲ್ಲ, ಅದಕ್ಕಿಂತಲೂ ಗಂಭೀರವಾದ ಸಮಸ್ಯೆಗಳತ್ತ ರಾಷ್ಟ್ರವು ಗಮನಹರಿಸಬೇಕಾಗಿದೆ ಎಂಬುವ ಪ್ರಧಾನಿ ವಾಜಪೇಯಿ ಅವರ ಹೇಳಿಕೆಯಿಂದ ಶಿಕ್ಷಣ ಕ್ಷೇತ್ರಕ್ಕೆ ಒಂದು ದೊಡ್ಡ ಆಘಾತವೇ ಉಂಟಾಗಿದೆ ಎನ್ನವುದು ಸ್ಪಷ್ಟ. ಅದೇ ಸಂದರ್ಭದಲ್ಲಿ ಸಮಗ್ರ ರಾಷ್ಟ್ರೀಯ ಉತ್ಪನ್ನ ಶೇ. 8ರಷ್ಟು ಹೆಚ್ಚಿಸಬೇಕಾದ ದೊಡ್ಡ ಜವಾಬ್ದಾರಿಯನ್ನು ಸಂಶೋಧನಾ ಮತ್ತು ಅಭಿವೃದ್ಧಿ ಇಲಾಖೆಗೆ ಕೊಟ್ಟಿರುವುದು ಈಗಾಗಲೇ ಜನಮನದಲ್ಲಿರುವ ಹತಾಶ ಭಾವನೆಯನ್ನು ಇಮ್ಮಡಿಗೊಳಿಸುತ್ತದೆ.

## ನವ ವಸಾಹತುಶಾಹಿ ಸ್ವರೂಪದ ಸಂರಚನಾ ಹೊಂದಾಣಿಕೆ

ಈ ಎಲ್ಲ ಬೆಳವಣಿಗೆಗಳು ನವ ವಸಾಹತುಶಾಹಿ ಶಕ್ತಿಗಳನ್ನು ಮಣೆಹಾಕಿ ಬರಮಾಡಿಕೊಳ್ಳುವ ಕೆಟ್ಟ ವಾತಾವರಣವನ್ನು ಸೃಷ್ಟಿಸುತ್ತಿರುವುದು ನಮಗೆಲ್ಲರಿಗೂ ಆತಂಕ ತರುವ ವಿಷಯ. ಈಗಾಗಲೇ ಸ್ವಾವಲಂಬನೆ ಎಂಬುವ ಮೌಲ್ಯವನ್ನೇ ಮೂಲೆಗಿರಿಸಿ ಬಹುರಾಷ್ಟ್ರೀಯ ಕಂಪೆನಿಗಳಿಗೆ ಆಹ್ವಾನವನ್ನು ನೀಡಲಾಗುತ್ತಿದೆ. ಅಂತರರಾಷ್ಟ್ರೀಯ ಹಣಕಾಸು ನಿಧಿಯ ಷರತ್ತುಗಳಿಗೆ ಶರಣಾಗಿ ಜಾಗತೀಕರಣ, ಖಾಸಗೀಕರಣ ಮತ್ತು ಮುಕ್ತ ಮಾರುಕಟ್ಟೆ ಎಂಬ ತಾರಕ ಮಂತ್ರಗಳಿಗೆ ಮೂಲಾಧಾರವಾಗಿರುವ ಸಂರಚನೆಯ ಹೊಂದಾಣಿಕೆ ನೀತಿಯನ್ನನುಸರಿಸಿ ನಮ್ಮ ರಾಷ್ಟ್ರದ ಜನಜೀವನವನ್ನು ಆಳುವ ವರ್ಗ ರೂಪಿಸಹೊರಟಿದೆ. ಸಾರ್ವಭೌಮತ್ವ ಎಂಬ ಉದಾತ್ತ ಮೌಲ್ಯದ ಪರಿಕಲ್ಪನೆಯೇ ಇಲ್ಲದ ಇವರಿಂದ ಇನ್ನೇನು ತಾನೇ

*ಸಂವಿಧಾನ ರೀತ್ಯಾ ಉಚ್ಚ ಶಿಕ್ಷಣವು ಸರ್ಕಾರದ ಜವಾಬ್ದಾರಿಯಲ್ಲವೆನ್ನುವ ನಮ್ಮ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರಾಥಮಿಕ ಶಿಕ್ಷಣವನ್ನು ಊರ್ಜಿತಗೊಳಿಸಿರುವುದು ಅಷ್ಟಕ್ಕಷ್ಟೇ. ಈಗ ಖಾಸಗಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವ ನೀತಿ ಕೇಂದ್ರದ ಮುಂದಿದೆ. ಅಮೆರಿಕಾದಲ್ಲಿ ಹಾಗಿದೆಯೆಂದಮೇಲೆ ನಮ್ಮ ಮರ್ಕಟ ಸರ್ಕಾರಗಳಿಗೆ ಬೇರಿನ್ನಾವ ಅಂಶಗಳೂ ಪ್ರಮುಖವೆನಿಸುವುದಿಲ್ಲ. ಪಂಜಾಬಿನ ಸನ್ನಿವೇಶದಲ್ಲಿ ಚರ್ಚೆ ಮಾಡಲಾಗಿರುವ ಲೇಖನ ಇದಾದರೂ ಬೇರೆ ರಾಜ್ಯಗಳಿಗೂ ಅನ್ವಯವಾಗುವ ವಿಷಯಗಳು ಇಲ್ಲಿವೆ. 'ಹೊಸತು'ವಿಗಾಗಿಯೇ ಬರೆಯಲಾದ ಈ ಲೇಖನವನ್ನು ಶ್ರೀ ಎಸ್. ಸುರೇಂದ್ರ ಕನ್ನಡದಲ್ಲಿ ಸಿದ್ಧಗೊಳಿಸಿ ಕೊಟ್ಟಿದ್ದಾರೆ.*

ಅಪೇಕ್ಷಿಸಲು ಸಾಧ್ಯ ? ಈ ನೆಲದ ಉತ್ಸಾಹಿ, ಅನುಭವಿ ಮತ್ತು ಪರಿಣತ ಉದ್ದಿಮೆಗಾರರು ಮುಂದಿನ ದಾರಿ ಕಾಣದೆ ಕಂಗಾಲಾಗಿದ್ದಾರೆ. ಇವು ಸಾಲದೆಂಬಂತೆ ವಿಮೆ, ಬ್ಯಾಂಕಿಂಗ್ ಮತ್ತಿತರ ಮುಖ್ಯವಾದ ಹಣಕಾಸಿನ ಕ್ಷೇತ್ರಗಳ ಬಾಗಿಲುಗಳನ್ನು ವಿದೇಶಿ ಕಂಪೆನಿಗಳಿಗೆ ತೆರೆದಿಡುತ್ತಿರುವುದು ಭರದಿಂದ ಸಾಗಿದೆ. ಇದೊಂದು ರಾಷ್ಟ್ರ ವಿರೋಧಿ ಕ್ರಮ.

ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿಯೂ ಲಾಭವೇ ಪ್ರಧಾನವಾದ ಅಂಶವಾಗಿರಬೇಕೆನ್ನುವುದು ಒಂದು ಮಾನವ ವಿರೋಧಿ ನೀತಿ. ಈ ಸಂರಚನೆಯ ಹೊಂದಾಣಿಕೆ ನೀತಿಯು ಅಷ್ಟೇ ನೀಚತನದಿಂದ ಕೂಡಿದೆ. ಅದರಿಂದ ಹೊರ ಹೊಮ್ಮುವ ಆಡಳಿತ ಕ್ರಮಗಳು, ಫಲಿತಾಂಶಗಳು ಕೂಡ ಜನರ ಹಿತಾಸಕ್ತಿಗಳಿಗೆ ವಿರೋಧವಾಗಿರುತ್ತವೆ. ಇಲ್ಲಿ ಲಾಭದ ಹೊಳೆ ಹರಿಯುವ ದಿಕ್ಕು ಒಂದೇ. ಅದೆಂದರೆ ಮೂರನೆ ಜಗತ್ತಿನ ರಾಷ್ಟ್ರಗಳಿಂದ ಜಿ - 8 ರಾಷ್ಟ್ರಗಳ ದೊಡ್ಡ ಕುಳಗಳ ಖಜಾನೆ ತುಂಬುವವರೆಗೆ ಮಾತ್ರ. ಈ ಸಂದರ್ಭದಲ್ಲಿ ಏಷ್ಯದ ಹುಲಿ ಎನಿಸಿಕೊಂಡಿದ್ದ ಕೊರಿಯ ಹಾಗೂ ಮೆಕ್ಸಿಕೋಗಳಲ್ಲಿ ಜರುಗಿದ ವಿದ್ಯಮಾನಗಳನ್ನು ನೆನಪಿಗೆ ತಂದುಕೊಳ್ಳಬಹುದು.

ವಿಶ್ವರಾಷ್ಟ್ರ ಸಂಸ್ಥೆಯನ್ನು ಕೈಗೊಂಬೆಯನ್ನಾಗಿ ಮಾಡಿಕೊಂಡು ಅದರ ಕಾರ್ಯಾಚರಣೆಗಳ ಮೂಲಕ ನವವಸಾಹತುಶಾಹಿಯು ಬಡ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಗಳನ್ನು ನಿರ್ಜೀವವಾಗಿಸುತ್ತದೆ. ಬೌದ್ಧಿಕ ಆಸ್ತಿಯ ಹಕ್ಕುಗಳ ಶಾಸನದಿಂದ ಉಂಟಾಗಿರುವ ಆರ್ಥಿಕ ಅವ್ಯವಸ್ಥೆ ಲೂಟಿಗಳಿಗೆ ಸಂಬಂಧಪಟ್ಟ ಅಂಕಿಅಂಶಗಳು ನವ ವಸಾಹತುಶಾಹಿ, ಸಾಮ್ರಾಜ್ಯಶಾಹಿ ಇಂದು ಬಳಸುತ್ತಿರುವ ತಂತ್ರಗಳ ಭಯಂಕರ ಚಿತ್ರಣವನ್ನು ನಮ್ಮ ಮುಂದಿಡುತ್ತವೆ.

**ಜನತೆಯ ಜವಾಬ್ದಾರಿಗಳು**

ಆರ್ಥಿಕ ಮತ್ತು ಶಿಕ್ಷಣ ಕ್ಷೇತ್ರಗಳನ್ನು ಬೇರ್ಪಡಿಸಿ ಯಾವುದೇ ರಾಷ್ಟ್ರದ ಸಾಮಾಜಿಕ ಪ್ರಕ್ರಿಯೆಗಳನ್ನು ಚರ್ಚಿಸುವುದು ಅಸಂಬದ್ಧವೆನಿಸುತ್ತದೆ. ಹಾಗಾಗಿ ನಮ್ಮದೇ ಆರ್ಥಿಕ ಮತ್ತು ಶಿಕ್ಷಣ ನೀತಿಗಳನ್ನು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಆಗುಹೋಗುಗಳನ್ನು ದೃಷ್ಟಿಯಲ್ಲಿಟ್ಟು ಪುನರ್ ವಿಮರ್ಶಿಸಬೇಕಾದ ಸಂದರ್ಭ ಈಗ ಬಂದಿದೆ. 10 ವರುಷಗಳಿಂದಲೂ ರೂಢಿಯಲ್ಲಿರುವ ಅಮಾನವೀಯ ಈ ಸಂರಚನೆಯ ಹೊಂದಾಣಿಕೆ ನೀತಿಯತ್ತ ನಾವು ತುರ್ತಾಗಿ ಗಮನ ಹರಿಸಬೇಕಾಗಿದೆ. ಇದರ ಬಗೆಗಿನ ಆಲಸ್ಯ ನಮ್ಮ ರಾಷ್ಟ್ರವನ್ನು ಪ್ರಪಾತದತ್ತ ಕೊಂಡೊಯ್ಯುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದರ ವಿರುದ್ಧ ಈಗಾಗಲೇ ಅನೇಕ ಕಡೆ ಜನತೆ ಸಿಡಿದೆದ್ದಿದ್ದಾರೆ. ''ನಮಗೆ ಬೇಕು ಅನ್ನ, ನೀರು - ಅಣು ಬಾಂಬಿಗೆ ಧಿಕ್ಕಾರ'' ಎಂಬ ಬಡಜನರ ಪುಟ್ಟ ಮಕ್ಕಳ ಕೂಗು ರಾಷ್ಟ್ರದ ಪ್ರಗತಿಯ ಬಗ್ಗೆ ನಮಗೆಲ್ಲರಿಗಿರುವ ಕನಸುಗಳು ಚಿಗುರುವುದಕ್ಕೆ ನೀರೆರೆಯುತ್ತದೆ. ಪ್ರತಿಭಟಿಸುವ ಜನ ವಿಭಾಗಗಳೂ ಇದ್ದಾರೆನ್ನುವುದು ಒಳ್ಳೆಯ ಬೆಳವಣಿಗೆಯೇ !

ಅಧಿಕಾರದ ಗದ್ದುಗೆಯನ್ನೇರಿದ ಇತ್ತೀಚಿನ ಯಾವುದೇ ಸರಕಾರಗಳಾಗಲಿ, ಪಂಚವಾರ್ಷಿಕ ಯೋಜನೆಗಳನ್ನು ರೂಪಿಸುತ್ತಿರುವ ಆರ್ಥಿಕ ತಜ್ಞರಾಗಲಿ ಶಿಕ್ಷಣ ಒಂದು ಆದ್ಯತೆಯ ಅಂಶವೆಂದು ಪರಿಗಣಿಸದೆ ಇರುವುದು ದುರದೃಷ್ಟಕರ. ಈ ಪ್ರವೃತ್ತಿಯ ವಿರುದ್ಧ ಹಾಗೂ ರಾಜಕೀಯ ಮತ್ತು ಆಡಳಿತ ವರ್ಗಗಳ ಕರ್ತವ್ಯಭ್ರಷ್ಟತನವನ್ನು ಖಂಡಿಸಿ ಬದಲಾವಣೆಗಾಗಿ ಚಳವಳಿಯನ್ನು ಹೂಡುವ ಸಂದರ್ಭ ಈಗ ಬಂದಿದೆ.

**ಪಂಜಾಬಿನ ಅನುಭವ**

ನಾನು ಪಂಜಾಬಿನ ಜಲಂಧರ್ ಕಾಲೇಜಿನಲ್ಲಿ ಅಧ್ಯಾಪಕನಾಗಿರುವುದರಿಂದ ಅಲ್ಲಿನ ಶಿಕ್ಷಣ ಕ್ಷೇತ್ರದಲ್ಲಿ ಜರುಗುತ್ತಿರುವ ಅವ್ಯವಹಾರಗಳ ಬಗೆಗಿನ ಅನುಭವ ನನಗಿದೆ. ಈ ನಿಟ್ಟಿನಲ್ಲಿ ಒಂದೆರಡು ಅಂಶಗಳನ್ನು ಆಸಕ್ತರ ಗಮನಕ್ಕೆ ತರುವುದು ಸಮಯೋಚಿತವೆನಿಸುತ್ತದೆ.

ಪಂಜಾಬಿನ ಶಿಕ್ಷಣ ಕ್ಷೇತ್ರದ ಪರಿಸ್ಥಿತಿ ಭಿನ್ನವೇನಲ್ಲ. ಸಂಯುಕ್ತ ಅಕಾಲಿದಳ - ಬಿ. ಜೆ. ಪಿ. ಪಕ್ಷಗಳ ಸರಕಾರವು ಕೇಂದ್ರದ ಸಮ್ಮಿಶ್ರ ಸರಕಾರದೊಡನೆ ಕೈಜೋಡಿಸಿ ಆಡಳಿತ ನೀತಿಗಳನ್ನು ರೂಪಿಸುತ್ತಿದೆ. ಈಗಾಗಲೇ ಚರ್ಚಿಸಿದ ನವ ವಸಾಹತುಶಾಹಿಯ ಕರಾಳ ಛಾಯೆ ಈ ರಾಜ್ಯಕ್ಕೂ ಸಾಕಷ್ಟು ಅನಿಷ್ಟಗಳನ್ನು ತಂದೊಡ್ಡಿದೆ.



ಹಣಕಾಸಿನ ಬಿಕ್ಕಟ್ಟು, ಲಂಚಗುಳಿತನ ಮತ್ತು ನೀತಿಗೆಟ್ಟ ಆಡಳಿತ ಇಂದು ಪಂಜಾಬಿನ ಜನಜೀವನವನ್ನು ಆವರಿಸಿವೆ. ಶಿಕ್ಷಣ ಕ್ಷೇತ್ರವಂತೂ ಕೊಳೆತು ನಾರುತ್ತಿದೆ. ಚುನಾವಣಾ ಸಂದರ್ಭದಲ್ಲಿ ಜನಪ್ರಿಯ ಹಾಗೂ ಸುಳ್ಳು ಆಶ್ವಾಸನೆಗಳುಳ್ಳ ಪ್ರಚಾರಗಳಿಗೆ ಮಿತಿಯೇ ಇರುವುದಿಲ್ಲ. ಸಿಂಹಾಸನವೇರಿದ ನಂತರ ಅವೆಲ್ಲವೂ ನೆನೆಗುದಿಗೆ ಬೀಳುವುದು ಒಂದು ಸಂಪ್ರದಾಯವೇ ಆಗಿಬಿಟ್ಟಿದೆ. ಇಲ್ಲಿ ಸೋಲುವುದು ಪ್ರಜಾಪ್ರಭುತ್ವದ ಮೌಲ್ಯಗಳು. ಪ್ರಣಾಳಿಕೆಯಲ್ಲಿನ ಆಶ್ವಾಸನೆಗಳನ್ನು ಈಡೇರಿಸಲೇಬೇಕೆಂದು ಒತ್ತಾಯಿಸುವ ಪ್ರಬಲವಾದ ಜನತಾ ಚಳುವಳಿಗಳ ಕೊರತೆ ಇಂತಹ ಸಂದರ್ಭಗಳಲ್ಲಿ ಎದ್ದು ಕಾಣುತ್ತದೆ.

ರಾಜ್ಯದ ಉಚ್ಚ ಶಿಕ್ಷಣ ಮಂತ್ರಿಗಳು ರಾಜೀನಾಮೆ ಕೊಟ್ಟ ನಂತರ ಈಗಾಗಲೇ ಹತ್ತಾರು ಜವಾಬ್ದಾರಿಗಳನ್ನು ಹೊತ್ತಿರುವ ಮುಖ್ಯಮಂತ್ರಿಗಳೇ ಆ ಶಾಖೆಗೆ ಜವಾಬ್ದಾರರಾಗಿದ್ದಾರೆ. ಕೆಲವು ಚರ್ವಿತ ಚರ್ವಣ ಮತ್ತು ಹಳಸು ಹೇಳಿಕೆಗಳನ್ನು ಬಿಟ್ಟರೆ ಅವರಿಂದ ಇನ್ನಾವ ಪ್ರಯತ್ನವೂ ಜರುಗಿಲ್ಲ, ಜರುಗುವುದೂ ಇಲ್ಲವೆಂಬ ಖಾತ್ರಿ ಪಂಜಾಬಿನ ಜನತೆಗೆ ಇದ್ದಂತಿದೆ.

ಎಲ್ಲೆಲ್ಲೂ ನಾವು ಕಾಣುತ್ತಿರುವುದು ಶಿಕ್ಷಣ ಕ್ಷೇತ್ರದ ಖಾಸಗೀಕರಣ ಮತ್ತು ವ್ಯಾಪಾರೀಕರಣ. ಹೇಳಹೆಸರಿಲ್ಲದ ಶಿಕ್ಷಣ ಸಂಸ್ಥೆಗಳು ಪಂಜಾಬಿನ ತಾಂತ್ರಿಕ ವಿದ್ಯಾನಿಲಯದ ಮಾನ್ಯತೆ ಪಡೆಯಲು ಹಾತೊರೆಯುತ್ತಿವೆ. ಜೊತೆಗೆ ಹೇಗೋ ಮಾಡಿ ಉಂಬಳಿ ಪಡೆಯುವ ತರಾತುರಿ ಬೇರೆ. ಪಾಟಿಯಾಲಾದ ಪಂಜಾಬಿ ವಿಶ್ವವಿದ್ಯಾಲಯದ ಪರಿಸ್ಥಿತಿ ಇದಕ್ಕಿಂತಲೂ ಹದಗೆಟ್ಟಿದೆ. ಅಚ್ಚರಿಯೆಂದರೆ, ಈ ಹೊಲಸು ವಾತಾವರಣದ ಮಧ್ಯೆಯೂ ಚುನಾಯಿತ ಸೆನೆಟ್ ಮತ್ತು ಸಿಂಡಿಕೇಟ್ ಎರಡೂ ಈ ಅಪವಾದಕ್ಕೆ ಹೊರತಾಗಿವೆ. ಖಾಸಗೀಕರಣ ಮತ್ತು ವ್ಯಾಪಾರೀಕರಣದ ಹುಚ್ಚು ದಾಹವನ್ನು ಮೆಟ್ಟಿನಿಂತು ಇವೆರಡೂ ಸಂಸ್ಥೆಗಳು ಜನರ ಮೆಚ್ಚುಗೆಗೆ ಪಾತ್ರವಾಗಿವೆ. ತೀರ ದುಬಾರಿಯ ಶುಲ್ಕ ಮತ್ತು ಅವೈಜ್ಞಾನಿಕ ವ್ಯವಸ್ಥೆಗಳಿಗೆ ಬಲಿಪಶುಗಳಾಗಿರುವುದು ಅರ್ಹತೆಯುಳ್ಳ ಅಧ್ಯಾಪಕ ವರ್ಗ, ಗ್ರಂಥಾಲಯಗಳು ಮತ್ತು ಪ್ರಯೋಗಶಾಲೆಗಳು.

ಸರಕಾರೇತರ ಕ್ಷೇತ್ರದಲ್ಲಿ ಸುಮಾರು 160 ಕಾಲೇಜುಗಳ ಪರಿಸ್ಥಿತಿಯು ಚಿಂತಾಜನಕವಾಗಿದೆ. 1978ರಲ್ಲಿ ಆಚರಣೆಗೆ ತಂದ ಅನುದಾನ ನೀಡುವ ಯೋಜನೆ ಮುಗ್ಗರಿಸುತ್ತಿದೆ. ಖಾಲಿ ಇರುವ ಶಿಕ್ಷಕರ ಸ್ಥಾನಗಳನ್ನು ಭರ್ತಿ ಮಾಡುವುದಾಗಲಿ, ಸಮಯಕ್ಕೆ ಸರಿಯಾಗಿ ವೇತನ ಕೊಡುವುದಾಗಲಿ, ಪಠ್ಯಕ್ರಮದ ಪುನರ್‌ರಚನೆಯಾಗಲಿ ಯಾವುದನ್ನೂ ಸರಕಾರ ಗಣನೆಗೇ ತೆಗೆದುಕೊಳ್ಳುತ್ತಿಲ್ಲ. ಆಗಲೇ ಹೇಳಿದಂತೆ ಸರಕಾರ ನೀಡುವ ಆಶ್ವಾಸನೆಗಳಿಗೂ ಅವರ ಆಡಳಿತ ಕ್ರಮಕ್ಕೂ ಇರುವ ವ್ಯತ್ಯಾಸ ಅಜಗಜಾಂತರ.

ಪ್ರಕಾಶ್ ಸಿಂಗ್ ಬಾದಲ್ ಸರಕಾರಕ್ಕೆ ಜ್ಞಾನೋದಯವಾಗುವ ಸಾಧ್ಯತೆಗಳು ತೀರ ಕಡಿಮೆ. ಆದರೆ ಶಿಕ್ಷಣ ಪರಿಸ್ಥಿತಿಗಳನ್ನು ಇಂದಿನ ಹಾಗೆಯೇ ಇನ್ನೂ ಮುಂದುವರೆಸಿಕೊಂಡು ಹೋಗುವಂತೆ ಬಿಡುವುದು ಸಲ್ಲದು. ತನ್ನ ರೀತಿ ನೀತಿಗಳನ್ನು ತಿದ್ದಿಕೊಂಡು ಶಿಕ್ಷಣ ಕ್ಷೇತ್ರದ ಸಮಸ್ಯೆಗಳಿಗೆ ಸ್ಪಂದಿಸುವಂತೆ ಸರಕಾರವನ್ನು ಒತ್ತಾಯಿಸುವುದು ಜನತೆಯ ಜವಾಬ್ದಾರಿಯಾಗಿದೆ.

ಇದು ಪಂಜಾಬಿನಲ್ಲಿನ ನನ್ನ ಮಟ್ಟಿನ ಅನುಭವವಷ್ಟೆ. ಇಂದಿನ ಸಂದರ್ಭದಲ್ಲಿ ನಿಷ್ಪಕ್ಷವಾದ ಸಮೀಕ್ಷೆಯನ್ನು ಅಖಿಲ ಭಾರತ ಮಟ್ಟದಲ್ಲಿ ನಡೆಸಿದ್ದೇ ಆದರೆ ಬಹುತೇಕ ರಾಜ್ಯಗಳಿಗೆ ನವ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ವಕ್ತಾರರು ಆಚರಣೆಗೆ ತರುತ್ತಿರುವ ಸಂರಚನೆಯ ಹೊಂದಾಣಿಕೆ ನೀತಿಯ ಬಿಸಿ ತಟ್ಟುತ್ತಿರುವುದು ಅಲ್ಲಿನ ಅನುಭವಗಳಿಂದ ನಮಗೆ ತಿಳಿಯುತ್ತದೆ. ಈ ಸಂರಚನೆಯ ಹೊಂದಾಣಿಕೆ ಎಂಬುದು ಆಕ್ಟೋಪಸ್‌ನಂತೆ. ತನ್ನ ಕಬಂಧ ಬಾಹುಗಳಿಂದ ಇಡೀ ಶಿಕ್ಷಣ ಕ್ಷೇತ್ರವನ್ನು ನಿಸ್ತೇಜವಾಗಿಸುತ್ತಿದೆ. ಇದು ಹೀಗೆ ಮುಂದುವರೆದರೆ ನಾಳೆ ಇನ್ನೊಂದು ಕ್ಷೇತ್ರ, ನಾಳಿದ್ದು ಮಗದೊಂದು. ಇದಕ್ಕೆ ಕೊನೆ ಎಲ್ಲಿ ?

ಇತ್ತೀಚಿನ ಇನ್ನೊಂದು ಹೊಸ ಬೆಳವಣಿಗೆಯತ್ತ ನಾವು ಗಮನಹರಿಸಬೇಕಾಗಿದೆ. ನಮ್ಮನ್ನಾಳುತ್ತಿರುವ ಕೇಂದ್ರದ ಸಮ್ಮಿಶ್ರ ಸರಕಾರ ಪೂಜೆ, ಪುನಸ್ಕಾರ, ವೇದಘೋಷ, ಉತ್ತರಕ್ರಿಯೆ ಇವುಗಳನ್ನೊಳಗೊಂಡ ಹಾಗೂ ನಮ್ಮ ''ಭವ್ಯ

(೫೫ನೇ ಪುಟ ನೋಡಿ)

# ಬುಸಾತಿನೆ ಸಲಾತೀನ

ಹಣಮಂತ ತಾಸಗಾಂವಕರ

ಮೂಲ : ಪರ್ಷಿಯನ್ ಭಾಷೆ
ಪ್ರಕಾಶಕರು : ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ಲೇಖಕರು : ಮಹಮ್ಮದ್ ಇಬ್ರಾಹಿಂ ಜುಬೇರಿ
ಕನ್ನಡಕ್ಕೆ : ಕೃಷ್ಣ ಕೊಲ್ಹಾರ ಕುಲಕರ್ಣಿ

ವಿಜಾಪುರ ಆದಿಲಶಾಹಿ ದೊರೆಗಳ ಎರಡುನೂರು ವರ್ಷ ರಾಜ್ಯಾಡಳಿತೆಯ ಅಧಿಕೃತ ದಾಖಲೆ ಎನ್ನಬಹುದಾದ 'ಬುಸಾತಿನೆ ಸಲಾತೀನ' ಗ್ರಂಥವು ಮೂಲ ಪರ್ಷಿಯನ್ ಭಾಷೆಯಲ್ಲಿದ್ದು ಮಹಮ್ಮದ ಇಬ್ರಾಹಿಮ ಜುಬೇರಿ ಇದರ ಲೇಖಕರು. ಈತ ವಿಜಾಪುರದವನಾಗಿದ್ದು ಕ್ರಿ.ಶ. ೧೮೨೪ - ೩೦ರ ಮಧ್ಯೆ ಇದನ್ನು ರಚಿಸಿರುವನು. ಈತ ಪರ್ಷಿಯನ್ ಭಾಷೆಯಲ್ಲಿ ಗ್ರಂಥ ಬರೆಯುತ್ತಿದ್ದಂತೆಯೇ ಇದರ ಮರಾಠಿ ಅನುವಾದವನ್ನೂ ಕೂಡ, ಬ್ರಿಟಿಷ್ ಅಧಿಕಾರಿಗಳ ಆದೇಶದಂತೆ ಸಾತಾರೆಯ ನರಸಿಂಹ ವಿಠಲ ಪಾರನೀಸ ೧೮೫೦ ನವೆಂಬರ ೫ರಂದು ಮಾಡಿರುವನು.

ಆದಿಲಶಾಹಿಗಳ ಉತ್ತರ ಕಾಲದಲ್ಲಿ ಸುಮಾರಾಗಿ ೧೪೦ ವರ್ಷಗಳ ಅನಂತರ ರಚಿತವಾಗಿದ್ದರೂ ಕೂಡ ಗ್ರಂಥಕಾರನು ಬಹಳಷ್ಟು ವಿಷಯಗಳನ್ನು ಕ್ರಿ. ಶ. ೧೬೦೬ರ ನವರಸನಾಮಾ ಫರಿಸ್ತಾ, ಗುಲ್ಶನೆ ಇಬ್ರಾಹಿಮ ಹೀಗೆ ಅನೇಕ ಆಕರಗಳನ್ನು ಹೊಂದಿರುವನೆಂದು ಉಲ್ಲೇಖಿಸಿದ್ದಾನೆ.

ಹೀಗಾಗಿಯೇ ಈ ಗ್ರಂಥಕ್ಕೆ ಐತಿಹಾಸಿಕ ಮಹತ್ವವಿದೆ. ಇಂಥದ್ದೊಂದು ಬೃಹತ್ ಗ್ರಂಥವನ್ನು ವಿಜಾಪುರದವರೇ ಆದ ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ ಕನ್ನಡಿಸಿದ್ದು, ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ.

'ಬುಸಾತಿನೆ ಸಲಾತೀನ' ಸುಂದರ ಉದ್ಯಾನಗಳ ಗುಲಾಬಿಗಳು. ಆದಿಲಶಾಹಿ ದೊರೆಗಳ ವರ್ಣಮಯ ವ್ಯಕ್ತಿತ್ವ, ಸಾಹಿತ್ಯ, ಸಂಗೀತ, ಕಲೆ, ಧರ್ಮ, ವಾಸ್ತುಶಿಲ್ಪ, ಯುದ್ಧ ಕೌಶಲ್ಯ, ಮೋಸ, ಕಾಪಟ್ಯ, ರಾಜಕೀಯ, ಹೀಗೆಲ್ಲಾ ವಿವರಣೆಗಳಿವೆ. ೮ ಜನ ಬಾದಶಹರು ಕ್ರಿ. ಶ. ೧೪೮೯ ರಿಂದ ೧೬೮೯ರವರೆಗೆ ಆಳಿದ ಆಡಳಿತವನ್ನೆಲ್ಲ ೮ ಬುಸ್ತಾನಗಳಲ್ಲಿ ವಿವರವಾಗಿ ದಾಖಲಿಸಿದ್ದಾನೆ. ಖ್ಯಾತ ಕಲಾವಿದ ನಾನಾ ದೇಸಾಯಿಯವರು ವರ್ಣಚಿತ್ರ ಬಿಡಿಸಿದ್ದಾರೆ.

ಬಾದಶಹರ ಚರಿತ್ರೆ, ಇಲ್ಲಿ ಸಾಕಷ್ಟು ವೈಭವೀಕರಿಸ ಲಾಗಿದೆ. ಅನ್ಯ ಧರ್ಮೀಯ ಸೈನಿಕರನ್ನು, ರಾಜರನ್ನು ಗೌಣವಾಗಿ ಕಂಡಿದ್ದಾನೆ. ತನ್ನ ನಾಯಕನ ದುಷ್ಕೃತ್ಯ, ಸೋಲು, ಅವಗುಣಗಳನ್ನು ಬದಿಗಿಟ್ಟು ಅವನನ್ನು ಉದಾತ್ತವಾಗಿ ವರ್ಣಿಸಿದ್ದಾನೆ. ಆದಾಗ್ಯೂ ಎರಡು ನೂರು ವರ್ಷ ಕಾಲ ಆಳಿದ ಶಾಹಿಗಳ ಚರಿತ್ರೆಯನ್ನೂ ಅಂದಿನ ವಿಜಾಪುರದ ಸ್ಥಿತಿಗತಿ, ಆಡಳಿತ, ತನ್ಮೂಲಕ ದೇಶದ ಚರಿತ್ರೆಯನ್ನೇ ದಾಖಲಿಸಿದ್ದುದು ಮಹತ್ವದ್ದಾಗಿದೆ.

ಆದಿಲಶಾಹಿಗಳ ಪತನಾನಂತರ ಆ ನಗರಕ್ಕೆ ಬಂದೊದಗಿದ ದುಃಸ್ಥಿತಿಯನ್ನೂ ಹೇಳುತ್ತ ಮೊಗಲರು, ಮರಾಠರು, ಬ್ರಿಟೀಷರನ್ನೂ ಕೂಡ ದೂರಿದ್ದಾನೆ. ಈತನಿಗೆ ಅಭಿಮಾನಪ್ರದ ವಿಜಾಪುರ ಹಾಗೂ ದೊರೆಗಳು. ಹೀಗಾಗಿ ಇವರ ಶತ್ರುಗಳನ್ನೆಲ್ಲ ದೂಷಿಸಿದ್ದಾನೆ. ಅನೇಕ ಆಕರ ಗ್ರಂಥಗಳಲ್ಲದೆ, ಸಮಕಾಲೀನ ದಾಖಲೆ, ಹಲವಾರು ಫರ್ಮಾನು, ಸನದು ಪತ್ರಗಳನ್ನೆಲ್ಲ ದಾಖಲಿಸಿದ್ದಾನೆ.

ಸುಲ್ತಾನ ಮಹಮ್ಮದ ಆದಿಲಶಹನು ತನ್ನ ಕಾಲಕೀರ್ತಿಯ ಇತಿಹಾಸ ಬರೆಯಲು ಪ್ರಸಿದ್ಧ ಕವಿ ಮುಲ್ಲಾ ಜಹೂರಗೆ - (ಕ್ರಿ.ಶ. ೧೬೪೧-೪೨) ಹೀಗೆ ಆಜ್ಞಾಪಿಸುತ್ತಾನೆ: ನೀನು ಹಚ್ಚುವ ವಿಚಾರದೀಪದ ತೇಜದಿಂದ ಇಂದಿರುವ ದೊಡ್ಡ ದೊಡ್ಡ ಬಾದಶಹರ ದರಬಾರಗಳು ಬೆಳಗಬೇಕು. ಆ ವರ್ಣನೆಯು ಜಗತ್ತನ್ನೆಲ್ಲ ಬೆಳಗಬೇಕು. ತುಂಬು ನೀ ಪಾತ್ರೆಯನು ನಿನ್ನ ಪ್ರತಿಭೆಯ ವರ್ಣನೆಗಳಿಂದ (ಪು. ೨೯೭).

ಈತನ ಸರಹದ್ದಿನಲ್ಲಿಯ ಯಾವುದೇ ಗ್ರಾಮ, ನಗರ, ಪಟ್ಟಣಗಳಲ್ಲಿ ನೃತ್ಯ ಗಾಯನಗಳು, ರಾಗರಂಗಗಳು, ವಾದ್ಯಗಳು, ಸಂಗೀತದ ಆನಂದಗಳು, ಹಗಲು ರಾತ್ರಿಗಳೆನ್ನದೆ ತುಂಬಿರುತ್ತಿದ್ದು ಎಲ್ಲ ಜನರೂ ಸಂತೋಷದಿಂದ ಇರುತ್ತಿದ್ದರು. ಈತನ ದಯ ದಾನಗಳಿಂದಾಗಿ ವಿಜಾಪುರ ನಗರದ ಜನವಸತಿಯೂ ತುಂಬಿಹೋಗಿತ್ತು. ನವರಸಪುರ ಮತ್ತು ತಾಲೀವಾರಿಯ ಸರಹದ್ದಿನಿಂದ ರಸೂಲಪುರದ ಸರಹದ್ದಿನವರೆಗೆ ಉದ್ದಕ್ಕೂ ಪೂರ್ವ ಪಶ್ಚಿಮಗಳವರೆಗೆ ಇಬ್ರಾಹಿಮಪುರದಿಂದ ಬಮ್ಮನಹಳ್ಳಿವರೆಗೂ ದಕ್ಷಿಣೋತ್ತರ ಒಂದೇ ರೀತಿಯ ಜನವಸತಿ ತುಂಬಿತ್ತು. ಜನರೆಲ್ಲ ರಾಜನಿಗೆ ಆಯುಷ್ಯ ಹಾಗೂ ರಾಜ್ಯ ಸ್ವಸ್ಥವಾಗಿ ಇರಲು ಮತ್ತು ಐಶ್ವರ್ಯ ವೃದ್ಧಿಯಾಗಲು ಹಾರೈಸುತ್ತಿತ್ತು, ಎಂಬಿತ್ಯಾದಿ ಮಾತುಗಳು ಇಲ್ಲಿ ಬರುತ್ತವೆ.



ಬಣ್ಣ

''ಬದಲಿಸುತ್ತದೆ
ಊಸರವಳ್ಳಿ
ಪ್ರಾಣ ರಕ್ಷಣೆಗೆ
ಅಪರೂಪಕ್ಕೊಮ್ಮೆ,
ಸ್ವಾರ್ಥಸಾಧನೆಗಾಗಿ
ಕೆಲವರು ಬದಲಿಸುತ್ತಲೇ
ಇರುತ್ತಾರೆ ಕ್ಷಣಕ್ಕೊಮ್ಮೆ''

ಎನ್. ಶ್ರೀನಿವಾಸ
ದ್ವಿ.ದ.ಸ. ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರ,
ವಿ. ಸಿ. ಫಾರಂ, ಮಂಡ್ಯ

ಹಿಂದುಸ್ಥಾನದ ಎಲ್ಲ ಪ್ರದೇಶಗಳಲ್ಲಿ ಈ ದಕ್ಷಿಣ ದೇಶದ ತುಕಡಿಯು ಬಹಳ ಕಂದಾಯ ವಸೂಲಿಯದೆಂದು ಪ್ರಸಿದ್ಧವಾಗಿದೆ. ಸಂಪದ್ಭರಿತವೂ ಆಗಿದೆ. ವಿಜಾಪುರ ಸಭೆಯ ಒಟ್ಟು ಕಂದಾಯ ವಸೂಲಿಯು ಅಸಫಜಾತೀ ದಫ್ತರಗಳಲ್ಲಿ ಬರೆದಂತೆ ಏಳು ಕೋಟಿ ಎಂಭತ್ನಾಲ್ಕು ಲಕ್ಷ ಅರವತ್ತೊಂದು ಸಾವಿರ ಏಳುನೂರು ರೂಪಾಯಿ ಹಾಗೂ ಒಂದೂವರೆ ಆಣೆಯಿತ್ತು. ಇದಲ್ಲದೆ ಎಲ್ಲ ಬಂದರು ಹಾಗೂ ಜಮೇದಾರರಿಂದ ವಸೂಲಿ ಬರುತ್ತಿತ್ತು. ಇಲ್ಲಿಯ ಜನರು ಅದೆಷ್ಟು ದುರ್ಭರ ತೆರಿಗೆಗಳನ್ನು ನೀಡುತ್ತಿದ್ದರೆಂಬುದನ್ನು ಇದರಿಂದ ಗ್ರಹಿಸಬಹುದು.

ಸುಲ್ತಾನ ಮಹಮ್ಮದ ಆದಿಲಶಹನು ತನ್ನ ರಾಜ್ಯದ ಆಡಳಿತಕ್ಕಾಗಿ 'ದಸ್ತುರುಲ ಅಮಲ' ಎಂಬ ಶಾಸನಗಳನ್ನು ಮಾಡಿದ್ದನು. ಅವುಗಳಲ್ಲಿಯ ಕೆಲವು ಹೀಗಿವೆ :

ಬಾದಶಹನಲ್ಲಿ ಇರಲೇಬೇಕಾದ ಲಕ್ಷಣ: ನ್ಯಾಯ ನಿರ್ಣಯ ಮಾಡುವುದೇ ಅಲಂಕಾರ ಹಾಗೂ ಭೂಷಣ;

ರಾಜ್ಯ ವಿಸ್ತರಣೆಯೇ ಬಾದಶಹರ ಕರ್ತವ್ಯ;

ಪ್ರಜೆಗಳನ್ನು ಪೂರ್ಣ ಸುಖಿಯಾಗಿಟ್ಟು ಬಹಳ ಕೃಪೆಯಿಂದ ಮತ್ತು ದಯದಿಂದ ಪಾಲನ ಮಾಡಬೇಕು;

ದೊಡ್ಡ ಉದ್ಯೋಗಗಳಲ್ಲಿ ಮುಸಲ್ಮಾನ ಜಾತಿಯ ಮಾಮಲೇದಾರನನ್ನು ಮತ್ತು ಹಿಂದು ಜಾತಿಯ ಕಾರಕೂನನನ್ನು ಇಡಬೇಕು. ಬ್ರಾಹ್ಮಣ ಜನರಿಗೆ ಮತ್ತು ಹಿಂದುಗಳಿಗೆ ಅಧಿಕಾರದ ಕೆಲಸಗಳನ್ನು ಕೊಡಬಾರದು; ವ್ಯಾಪಾರಸ್ಥರು ತೂಕ ಮಾಡುವ ಕಲ್ಲುಗಳು, ಧಾನ್ಯ ಅಳೆಯುವ ಮಾಪುಗಳು ವಿಜಾಪುರದಲ್ಲಿ ಇದ್ದಂಥ ತೂಕ ಹಾಗೂ ಅಳತೆಯ ಪ್ರಮಾಣದಲ್ಲಿಯೇ ಇರಬೇಕು;

ಪ್ರತಿ ಶುಕ್ರವಾರ ಕಾಜಿ ಶಾಸ್ತ್ರಾರ್ಥಗಳನ್ನು ಹೇಳುವ ಧರ್ಮಶಾಸ್ತ್ರಿಗಳು ಮತ್ತು ಎಲ್ಲ ಮುಸಲ್ಮಾನ ಜನರು ತಪ್ಪದೆ ಜುಮ್ಮಾ ಮಸೀದಿಗೆ ಬಂದು ಶುಕ್ರವಾರದ ನಮಾಜ ಮತ್ತು ಖುತಬಾ ಓದಬೇಕು. ತಪ್ಪಿದಲ್ಲಿ ಶಾಸ್ತ್ರಗಳಲ್ಲಿ ಹೇಳಿದಂತೆ ತಾಕೀದು ಮಾಡಬೇಕು ; ಹೋಳಿ, ದೀಪಾವಳಿ ಮತ್ತು ದಸರಾ ಇತ್ಯಾದಿ ಹಿಂದುಗಳ ಹಬ್ಬಗಳನ್ನು ಅವರು ಬಹಿರಂಗವಾಗಿಯೇ ಆಚರಿಸುತ್ತಾರೆ. ಹಾಗೆ ಬಹಿರಂಗವಾಗಿ ಮಾಡದಂತೆ ಮನಾಯಿಮಾಡಿ ಗುಪ್ತವಾಗಿ ಆಚರಿಸುವಂತೆ ಮಾಡಬೇಕು. ಬಹಿರಂಗವಾಗಿ ಮಾಡಹತ್ತಿದರೆ ಅಡ್ಡಿಪಡಿಸಬೇಕು;

ಧಾನ್ಯ ಸಂಗ್ರಹ ಹಾಗೂ ಅವುಗಳ ಧಾರಣೆಗಳಲ್ಲಿ ಸೋವಿ ಇವುಗಳ ಬಗ್ಗೆ ಪ್ರಯತ್ನಿಸಬೇಕು. ಪ್ರತಿಯೊಂದು

ಪದಾರ್ಥಗಳು ದೊರೆಯುವಂತೆ ವ್ಯವಸ್ಥೆ ಮಾಡಬೇಕು. ಧಾನ್ಯ ಸಂಗ್ರಹವಿದ್ದರೆ ರಾಜ್ಯದ ಜನರ ಸಂತೋಷಕ್ಕೆ ಕಾರಣವಾಗುತ್ತದೆ; ಇತ್ಯಾದಿ.

ಹೀಗೆ ನೂರರಷ್ಟು ಶಾಸನಗಳನ್ನು ಮಾಡಿದ್ದಾನೆ. ಇದರಲ್ಲಿ ನಗರ ಸೌಂದರ್ಯ, ಪುಷ್ಕರಣಿ, ಗಿಡಮರ, ಶೋಭಾಯಮಾನ ಅಂಗಡಿ ಬಾಜಾರುಗಳೆಲ್ಲ ತನ್ನ ಮಹಡಿಯಿಂದ ಕಾಣಬೇಕೆಂದು ಆಜ್ಞಾಪಿಸಿದ್ದಾನೆ. ಎಲ್ಲೆಲ್ಲೂ ಸುಂದರವಾಗಿ ಸೋನೇರಿ ಬಣ್ಣದ ಕುರಾನ ಶಾಸ್ತ್ರ ವಾಕ್ಯ ಬರೆದಿರಬೇಕು.

ಶಾಹಜಿ ಆಳ್ವಿಕೆಯ ಪ್ರಾರಂಭದ ಅನೇಕ ವರ್ಷಗಳು ಬರೀ ಯುದ್ಧ ದಾಳಿ ಅಶಾಂತಿಗಳಿಂದ ತುಂಬಿತ್ತು. ವಿಜಯನಗರ ಚಕ್ರವರ್ತಿ ರಾಮರಾಜನ ತಲೆ ಕಡಿದದ್ದು ೫ ಜನವರಿ ೧೫೬೫ರಂದು. ಅದು ವಿಜಯನಗರದ ಪತನ. ರಣಭೂಮಿಯಿಂದ ಆನೆಗುಂದಿ ವಿಜಯನಗರದವರೆಗೆ ಹಿಂದೂ ಜನರ ಲಕ್ಷಕ್ಕಿಂತಲೂ ಹೆಚ್ಚು ಹೆಣಗಳು. ಇಪ್ಪತ್ತು ದಿನ ಯುದ್ಧ ಮಾಡಿ ಹಿಂದೂ ಜನರನ್ನು ಸೋಲಿಸಿದ ಮುಸಲ್ಮಾನ ಬಾದಶಹನು ಅತಿ ವಿನಯದಿಂದ ಭೂಮಿಗೆ ತಲೆ ಹಚ್ಚಿ ನಮಸ್ಕರಿಸಿ ಅಲ್ಲಾನ ಸ್ತುತಿ ಅಲ್ಲೇ ಮಾಡಿದನು. ವಿಜಯನಗರವನ್ನು ಸೂರೆಗೈದು ತಂದ ಅಪಾರ ಸಂಪತ್ತಿನಿಂದ ವಿಜಾಪುರ ಸಾಮ್ರಾಜ್ಯ ಬೆಳೆಯಿತು. ದಾರುಲ ಅಮಾರತ, ದಾರುಲ ಖಿಲಾಫತ ಎಂದು ಹೇಳುತ್ತಿದ್ದರು. ಕೊನೆಯ ಬಾದಶಹ ಸಿಕಂದರ ಹಾಗೂ ಔರಂಗಜೇಬ ಇವರಲ್ಲಿ ಬಹಳ ವಿರಸವಿತ್ತು, ವೈರತ್ವವಿತ್ತು. ಹೀಗಾಗಿ ಯುದ್ಧದ ದಂಗೆಗಳು ಪ್ರಾರಂಭಗೊಂಡವು. ಕೊನೆಗೆ ೩೦ ಜೂನ್ ೧೬೮೫ರಂದು ಕೋಟೆ ಸುತ್ತುವರೆದ. ೧೩ ಸೆಪ್ಟೆಂಬರ್ ೧೬೮೬ ಸಿಕಂದರಶಾಹಿಯನ್ನು ಬಂಧಿಸಿ ಕೋಟೆ ಗೆದ್ದುಕೊಂಡು ಆದಿಲಶಾಹಿ ರಾಜ್ಯದ ಸಮಾಪ್ತಿ ಮಾಡಿದ. ''ದಾಕುಲ್ ಜಫರ'' ಎಂಬ ಹೊಸ ಹೆಸರನ್ನೂ ವಿಜಾಪುರಕ್ಕೆ ಇಟ್ಟ.

ಆದರೆ ವಿಜಾಪುರದ ದೈವ ಕೆಟ್ಟದ್ದಾಗಿತ್ತು. ೧೬೮೯ ಮಹಾಮಾರಿ ಪ್ರಳಯದಂತಾಗಿ ಕಂಡಲ್ಲಿ ಹೆಣಗಳು, ಹಾಳುಸುರಿವ ಮನೆ. ದರೋಡೆ ಲೂಟಿ ಹೀಗೆಲ್ಲ ಸಂಕಟಗಳು. ೧೬೯೧ರಲ್ಲಿ ದೊಡ್ಡಬರ. ಈ ಬರದ ವರ್ಣನೆ ಮುಂದಿನ ೬೦-೭೦ ವರ್ಷಗಳವರೆಗೆ ಜನರ ಬಾಯಲ್ಲಿತ್ತು. ೧೭೦೧ರಿಂದ ನಾಶವಾಗುತ್ತಲೇ ನಡೆಯಿತು.

ಮಹಮ್ಮದ ಆದಿಲಶಹನ ಕಾಲದಲ್ಲಿ ಶಹಪುರದಲ್ಲೊಂದೇ ಒಂಭತ್ತು ಲಕ್ಷ ಮನೆಗಳಿದ್ದರೆ, ಈಗ ಎಲ್ಲಾ ಸೇರಿ ಒಂಭತ್ತು ನೂರಿವೆ.

ವಿಜಾಪುರದ ಓರ್ವ ವಿದ್ವಾಂಸ 'ಮಾಹಬಿಲ್ಲಾಹ' ಹೇಳಿದಂತೆ, ಬಾದಶಹನ ಅರಮನೆಯಲ್ಲಿ ಎಲ್ಲಿ ನೋಡಿದಲ್ಲಿ ಜೇಡಬಲೆಯಿದೆ. ಹವೇಲಿಗಳ ಮೇಲೆ ಹದ್ದು ಗೂಬೆಗಳು ಕೂಡುತ್ತಿವೆ. ಮುಂದೆ ಹಸ್ತಾಂತರಗೊಳ್ಳುತ್ತಾ ಪೇಶವೆ ಆಡಳಿತದಿಂದ ಕ್ರಿ. ಶ. ೧೮೧೭ಕ್ಕೆ ಇಂಗ್ರಜಿ ಸರಕಾರದ ಕೈಗೆ ಬಂದಿತು. ಇವರೂ ಕೂಡ ವಿಜಾಪುರದ ಉತ್ಕರ್ಷಕ್ಕೆ ವಿಚಾರಿಸಲಿಲ್ಲ. ಇಂಗ್ರಜಿ ಸರಕಾರದ ದುರ್ಗುಣಗಳ ವರ್ಣನೆ ಬಹಳೇ ಇದೆ. ಈ ಅವಧಿಯಲ್ಲಿ ಬಂದೆರಗಿದ (೧೮೧೮) ಕಾಲರಾ ಬೇನೆಯು ಎಂಟು ವರ್ಷಗಳವರೆಗಿದ್ದು ಲಕ್ಷಾವಧಿ ಜನರನ್ನು ಬಲಿ ತೆಗೆದುಕೊಂಡಿದೆ.

ಹೀಗೆ ಒಟ್ಟಾರೆ ೫೬೦ ಪುಟಗಳಲ್ಲಿ ಬಾದಶಾಹಿ ಕಾಲಕಿರ್ದಿಯ ಪ್ರಾರಂಭದಿಂದ ಅಂತ್ಯದವರೆಗೆ ಎಲ್ಲ ಘಟನೆ, ಯುದ್ಧಗಳು, ರಾಜ್ಯ ಕಾರಭಾರದ ವಿಷಯಗಳು, ಮೂಲಪುರುಷ ಯುಸುಫನಿಂದ ಕೊನೆಯ ಆದಿಲಶಹ ಸಿಕಂದರ ಬಾದಶಹನವರೆಗೆ, ನಂತರದ ದಿಲ್ಲಿಯ ಆಲಮಗೀರ ಬಾದಶಹ, ನವಾಬ ಆಸಫಜಾಹ ಬಹಾದ್ದೂರ್, ಸಂಸ್ಥಾನ ಹೈದರಾಬಾದ ಅವರ ಕಾಲಕಿರ್ದಿ ಅಲ್ಲಿಂದ ಪೇಶವಾಯಿಕಾಲ ಮುಂದಿನ ಇಂಗ್ರಜಿ ಆಡಳಿತದವರೆಗಿನ ಘಟನಾವಳಿಗಳನ್ನೆಲ್ಲಾ ಸವಿವರವಾಗಿ ಪರ್ಷಿಯನ್ ಗ್ರಂಥ ಬುಸಾತಿನೆ ಸಲಾತೀನದಲ್ಲಿ ವರ್ಣಿಸಲಾಗಿದೆ.

**ಹಣಮಂತ ತಾಸಗಾಂವಕರ**
ಕಿಲ್ಲಾ, ಬಾಗಲಕೋಟ - ೫೮೭೧೦೧




**ಅಚ್ಚುಕಟ್ಟು** (ವಿಮರ್ಶಾ ಲೇಖನಗಳು)

*ಡಾ॥ ಶಾಮಸುಂದರ ಬಿದರಕುಂದಿ*

**ಪುಟ : 186** **ಬೆಲೆ : ರೂ. 60**

**ಸ್ವಾಗತ ಸಮಿತಿ**, ಅಖಿಲ ಭಾರತ 68ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ -587 101

*ವಿವಿಧ ಕಾಲ ಮತ್ತು ಸಂದರ್ಭಗಳಲ್ಲಿ ರಚಿಸಿದ, ಅಸ್ಸಾಮಿನ ಕವಿತೆಗಳಲ್ಲಿ ಮಾನವನ ಅಸ್ತಿತ್ವದ ಹುಡುಕಾಟ, ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯ ಮೌಲ್ಯ, ಕಾದಂಬರಿಗಳಲ್ಲಿ ಮಹಿಳೆ, ಬೇಂದ್ರೆಯವರ ಭಾವಗೀತೆಗಳಲ್ಲಿಯ ವೈವಿಧ್ಯ ಹೀಗೆ ಒಟ್ಟಾರೆ ಹದಿಮೂರು ವಿಮರ್ಶಾ ಲೇಖನಗಳು 'ಅಚ್ಚುಕಟ್ಟಾಗಿ' ಮೂಡಿಬಂದಿವೆ. ಲೇಖಕ ಡಾ॥ ಶಾಮಸುಂದರ ಬಿದರಕುಂದಿಯವರ ಗ್ರಹಿಕೆಯ ಮಟ್ಟ, ವಿಷಯ ಮಂಡನೆ ಹೆಚ್ಚು ಗಮನ ಸೆಳೆಯುತ್ತವೆ.*



**ದಯಾಮರಣ**

*ಡಾ॥ ಸಿ. ಜಿ. ಕೇಶವಮೂರ್ತಿ*

**ಪುಟ : 72** **ಬೆಲೆ : ರೂ. 25**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

*ಆತ್ಮಹತ್ಯೆ ಮತ್ತು ಅದರ ಪ್ರಚೋದನೆ ಒಂದು ಅಪರಾಧ. ಬದುಕಿನುದ್ದಕ್ಕೂ ಒಂದಿಲ್ಲೊಂದು ಘೋರ ನೋವಿನಿಂದ ನರಳಿ, ಸಾವಿನ ಹೊಸ್ತಿಲಲ್ಲಿ ನಿಂತಿರುವವರಿಗೆ 'ದಯಾಮರಣ' ಒಂದು ಆಶಾಕಿರಣವೇ ? ಅಥವಾ ಅದೊಂದು ಉದ್ದೇಶಿತ ಕೊಲೆಯೇ ? ವಿವಿಧ ದೇಶಗಳಲ್ಲಿ ನಡೆದ ವ್ಯಾಪಕ ಚರ್ಚೆ-ಚಿಂತನೆಗಳು ಮತ್ತು ತಜ್ಞರ ಅಭಿಪ್ರಾಯಗಳನ್ನು ಡಾ॥ ಕೇಶವಮೂರ್ತಿ ಇಲ್ಲಿ ಕ್ರೋಡೀಕರಿಸಿದ್ದಾರೆ.*



**ಲಲಿತ ಪ್ರಬಂಧಗಳು**

*ವೀರೇಂದ್ರ ಸಿಂಪಿ*

**ಪುಟ : 70** **ಬೆಲೆ : ರೂ. 30**

**ಸ್ವಾಗತ ಸಮಿತಿ**, ಅಖಿಲ ಭಾರತ 68ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ - 587 101

*ಒಂದಿಷ್ಟು ವ್ಯಂಗ್ಯ, ಒಂದಿಷ್ಟು ಹಾಸ್ಯ, ನಡುನಡುವೆ ಪ್ರಬುದ್ಧತೆ, ತರ್ಕ, ನವಿರಾದ ನಿರೂಪಣೆ, ಲಲಿತ ಪ್ರಬಂಧದ ವೈಖರಿ. ಸಂದರ್ಶನಾಯಣ, ಕ್ಷೌರಿಕೋಪಧ್ಯಾನ, ವಾಕಿಂಗಿನ ಇತಿಮಿತಿಗಳು, ಹೀಗೆ ವೀರೇಂದ್ರ ಸಿಂಪಿಯವರ ಹನ್ನೊಂದು ಲಲಿತ ಪ್ರಬಂಧಗಳು ಇಲ್ಲಿ ನಿಮ್ಮನ್ನು ಬಿಡದೆ ಓದಿಸಿಕೊಳ್ಳುತ್ತವೆ.*

**ನಿರಂಜನ** (ವಿಮರ್ಶಾ ಲೇಖನಗಳು)

*ಡಾ॥ ಬಸವರಾಜ ಸಬರದ*

**ಪುಟ : 92** **ಬೆಲೆ : ರೂ. 65**

**ಪ್ರಸಾರಾಂಗ**, ಮಾನಸ ಗಂಗೋತ್ರಿ, ಮೈಸೂರು - 570 006




*ನಿರಂಜನ ಪ್ರಗತಿಶೀಲ ಪಂಥದ ಮುಂಚೂಣಿಯಲ್ಲಿದ್ದವರು. ಸಾಹಿತಿಯಾಗಿ, ಪತ್ರಿಕೋದ್ಯಮಿಯಾಗಿ ಹುಟ್ಟು ಹೋರಾಟಗಾರರಾದ ಅವರ ಜೀವನವೊಂದು ಸಾಹಸಗಾಥೆ. ವೃತ್ತಿಜೀವನ, ಹೋರಾಟ, ಸಾಹಿತ್ಯಕ-ಸಾಂಸ್ಕೃತಿಕ ಒಡನಾಟ, ಚರ್ಚೆ, ವಿಚಾರ ಹಾಗೂ ಅವರ ವೈವಿಧ್ಯಮಯ ಕೃತಿಗಳೂ ಸೇರಿದಂತೆ ವಿವಿಧ ನೆಲೆಗಳಲ್ಲಿ ನಿಂತು ನೋಡಿದ ಆರು ಲೇಖನಗಳಿವೆ.*




**ಆಟ ಬೇಕೇ ಆಟ** (ಮಕ್ಕಳ ಶೈಕ್ಷಣಿಕ ಆಟಗಳ ಕೈಪಿಡಿ)

*ರಾಮು ಎಂ. ಸಿ.*

**ಪುಟ : 51** **ಬೆಲೆ : ರೂ. 35**

**ಚೌಕಿ ಸಮುಚ್ಚಯ ಸಂಪನ್ಮೂಲ**, 10-39/1, ನೆಕ್ಕರೆ ಮಾರ್, ಗೋರಿಗುಡ್ಡ, ಮಂಗಳೂರು - 575 002

*ಆಟೋಟ ಮಕ್ಕಳ ಮನಸ್ಸಿಗೆ ದೇಹಕ್ಕೆ ಮುದ ನೀಡುವ ಒಂದು ಪಠ್ಯೇತರ ಚಟುವಟಿಕೆ. ಪುಸ್ತಕದ ಹುಳುಗಳಾಗಿ ಮನೆ ಮತ್ತು ಶಾಲೆಗಳ ನಾಲ್ಕು ಗೋಡೆಗಳ ನಡುವೆ ಕೊರಗುತ್ತಿರುವ ಇಂದಿನ ಮಕ್ಕಳಿಗೆ ಆಧುನಿಕ ಆಟಗಳು ಕುಂತಲ್ಲೇ ಗಿರಕಿ ಹೊಡೆಯಿಸುತ್ತವೆ. ಇಲ್ಲಿ ಮಕ್ಕಳ ಕಲ್ಪನಾ ಗ್ರಹಿಕೆಗೆ ಮತ್ತು ಕಲಿಯುವಿಕೆಗೆ ಇಂಬುಕೊಡುವಂತಹ ಅದರೊಟ್ಟಿಗೆ ನೀವೂ ಆಡಿ ನಲಿಯಬಹುದಾದಂತಹ ಇಪ್ಪತ್ತೊಂದು ಆಟಗಳಿವೆ. ಪ್ರತಿಯೊಂದರ ಬಗ್ಗೆ ವಿವರಗಳಿವೆ.*



**ಆರ್ಥಿಕ ಚಿಂತನೆ** (ಲೇಖನಗಳು)

*ಎಂ. ಎಸ್. ಬಾದಾಮಿ*

**ಪುಟ : 122** **ಬೆಲೆ : ರೂ. 50**

**ಸ್ವಾಗತ ಸಮಿತಿ**, ಅಖಿಲ ಭಾರತ 68ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ -587 101

*ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಆರ್ಥಿಕ ಚಿಂತನೆಯ ಒಟ್ಟು 25 ಬರಹಗಳ ಸಂಗ್ರಹ ಇಲ್ಲಿದೆ. ಶಿಕ್ಷಣ, ಬಡತನ, ಕೃಷಿ, ಚುನಾವಣೆ, ಯುದ್ಧ ಹಾಗೂ ಸ್ವದೇಶಿ ಮತ್ತು ಜಾಗತೀಕರಣದ ನೆಲೆಯಲ್ಲಿ ನಿಂತು ಚರ್ಚಿಸಿದ ಸಾಧಕ ಬಾಧಕಗಳಿವೆ. ಬಸವಣ್ಣ, ಗಾಂಧಿ, ಅಂಬೇಡ್ಕರ್ ಮುಂತಾದವರ ಆರ್ಥಿಕ ಚಿಂತನೆಗಳೊಟ್ಟಿಗೆ ಇಂದಿನ ಆರ್ಥಿಕ ನೀತಿಯ ವಿಚಾರಗಳ ತುಲನೆಯಿದೆ. ಸಂಗ್ರಹಯೋಗ್ಯ ಕೃತಿ.*




**ವಾರಸಾ** (ಕಥಾ ಸಂಕಲನ)

*ಡಿ. ಎಸ್. ಚೌಗಲೆ*

**ಪುಟ : 108** **ಬೆಲೆ : ರೂ. 50**

**ಮಾ ಪ್ರಿಂಟ್ ಪಬ್ಲಿಷರ್ಸ್**, ನಂ.3, 5ನೇ ಮುಖ್ಯರಸ್ತೆ , ಸಂಪಿಗೆ ಲೇ ಔಟ್, ವಿಜಯನಗರ, ಬೆಂಗಳೂರು- 79

*ಇಲ್ಲಿ ಹತ್ತು ಕಥೆಗಳಿವೆ. ಬದುಕಿನ ಬವಣೆಗಳ ಜೊತೆಗೆ ಸಂಬಂಧಗಳ ಸುಳಿಯಲ್ಲಿ ಸಿಕ್ಕು ತೊಳಲಾಡುವ ಮಾನವೀಯ ಮೌಲ್ಯಗಳ ಹುಡುಕಾಟವಿದೆ. ಕಲಾವಿದ ಚೌಗಲೆಯವರ ಮೊದಲ ಕಥಾಸಂಕಲನವಾದರೂ ಪಳಗಿದ ಭಾಷೆ, ಬೆಳಗಾವಿ ಸೀಮೆಯ ಸೊಗಡಿನೊಂದಿಗೆ ನಿಮ್ಮನ್ನು ತಟ್ಟಿ ತಡವುತ್ತದೆ. ಚಂದ್ರನಾಥ ಆಚಾರ್ಯರ ಮುಖಚಿತ್ರ ನಿಮ್ಮನ್ನು ಹಿಡಿದಿಡುತ್ತದೆ.*

**ಚಿಣ್ಣರ ನಾಟಕಗಳು**

*ದೊಡ್ಡಣ್ಣ ಗದ್ದನಕೇರಿ*

**ಪುಟ : 142** **ಬೆಲೆ : ರೂ. 50**

**ಸ್ವಾಗತ ಸಮಿತಿ**, ಅಖಿಲ ಭಾರತ 68ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ - 587 101




*ಚಿಣ್ಣರ ಲೋಕ ಕಲ್ಪನಾ ಲೋಕ. ಅಲ್ಲಿ ಆಡುವ, ಹಾಡುವ, ಬಣ್ಣಬಣ್ಣದ ವೇಷ ತೊಟ್ಟು ನಲಿಯುವ ಹುಮ್ಮಸ್ಸಿದೆ. ಸೂಕ್ಷ್ಮವಾದ ಅವರ ಮನಸ್ಸಿನ ವಿಕಸನಕ್ಕೆ 'ನೀತಿ' ನಾಟಕಗಳು ಹೆಚ್ಚು ಪೂರಕವಾದುವು. ಇಲ್ಲಿ ಅಂತ ಮಕ್ಕಳಿಗೆಂದೇ ಬರೆದ ಹತ್ತು ಪುಟ್ಟ ಪುಟ್ಟ ನಾಟಕಗಳಿವೆ. ಯಾರು ಕಳ್ಳರು ? ದುಡುಕು ಕೆಡಕು, ಶಕ್ತಿಗಿಂತ ಯುಕ್ತಿ ಮೇಲು, ಇತ್ಯಾದಿ.*

-ರವಿಕುಮಾರ್ ಅಜ್ಜೀಪುರ

# ಪೇಟೆಗಳ ಪ್ರಗತಿಯಿಂದ ಪರಿಸರದಲ್ಲಾಗುವ ಪರಿಣಾಮಗಳು

*ಆಧುನಿಕ ಅಭಿವೃದ್ಧಿಯ ಮಾದರಿಯು ಕೈಗಾರಿಕೀಕರಣಕ್ಕೆ ಒತ್ತುನೀಡುತ್ತಿದೆ. ಪರಿಣಾಮವಾಗಿ ಪೇಟೆಗಳು ಅನಿಯಂತ್ರಿತವಾಗಿ ಬೆಳೆಯುತ್ತಿವೆ. ಸ್ವಾತಂತ್ರ್ಯದ ಪ್ರಾರಂಭದಲ್ಲಿ ಹತ್ತು ಶತಾಂಶ ಜನ ಪೇಟೆ ವಾಸಿಗಳಾಗಿದ್ದರೆ, ಇದೀಗ (ಇಸವಿ ೨೦೦೦) ನಲ್ವತ್ತು ಶತಾಂಶ ಜನ ಕೆಟ್ಟು ಪಟ್ಟಣ ಸೇರಿದ್ದಾರೆ. ಕೆಟ್ಟ ಪಟ್ಟಣ ಕಟ್ಟಿದ್ದಾರೆ. ಇದರಿಂದಾಗಿ ಪೇಟೆಯ ಅಸ್ಥಿವಾರದ ಮೇಲೆ ಅತಿಯಾದ ಒತ್ತಡ ಬಿದ್ದಿದೆ. ಸಾಮಾಜಿಕ ಸಮಸ್ಯೆಗಳು ಸಾಂದ್ರಗೊಂಡಿವೆ. ಶಿಥಿಲಗೊಳ್ಳುತ್ತಿರುವ ಪೇಟೆಗಳ ಪಂಚಾಂಗಗಳನ್ನು ಬಲಗೊಳಿಸಲು, ಪೇಟೆಗಳನ್ನು ಮೇಲೆತ್ತಲು ಬೃಹತ್ ಬಂಡವಾಳದ ಯೋಜನೆಗಳು ರೂಪುಗೊಳ್ಳುತ್ತಿವೆ. ಜಾಗತಿಕ ಹಣಕಾಸು ಸಂಸ್ಥೆ, ಏಷ್ಯಾ ಅಭಿವೃದ್ಧಿ ಸಂಸ್ಥೆ ಇತ್ಯಾದಿಗಳ ಸಾಲಕ್ಕೆ ಸೋಲಲಾಗಿದೆ. ಇಂಥ ನಗರಾಭಿಮುಖ ಅಭಿವೃದ್ಧಿಯ ಯೋಜನೆಗಳಿಂದ ಎಷ್ಟು ಒಳ್ಳೆಯದಿದೆಯೋ ಕೊನೇ ಪಕ್ಷ ಅಷ್ಟೇ ಕೆಟ್ಟದ್ದೂ ಇದೆ.*

ವ್ಯಯವಿಲ್ಲದೆ ಆದಾಯವಿಲ್ಲ. ಒಂದು ದಿಕ್ಕಿನಲ್ಲಿ ಅಭಿವೃದ್ಧಿಯಾಗುವಾಗ ಇನ್ನೊಂದು ದಿಕ್ಕಿನಲ್ಲಿ ನಾವು ಒಂದಷ್ಟು ಕಳೆದುಕೊಳ್ಳಬೇಕಾಗುತ್ತದೆ ಎಂಬ ಹೇಳಿಕೆ ಬಗ್ಗೆ ಖಂಡಿತ ಎರಡು ಮಾತಿಲ್ಲ. ಪ್ರತಿಯೊಂದು ಬೃಹತ್ ಅಭಿವೃದ್ಧಿಯೋಜನೆಗಳ ಹಿನ್ನೆಲೆಯಲ್ಲಿ ಸಾಕಷ್ಟು ಲಾಭ ನಷ್ಟದ ಲೆಕ್ಕಾಚಾರಗಳಿರುತ್ತವೆ. ಆದರೆ ಎಲ್ಲ ಲೆಕ್ಕಾಚಾರಗಳೂ ಹಣದ ಹಿಂದೆ ಮುಂದೆ ಮಾತ್ರ ನಡೆದಿರುತ್ತವೆ. ವ್ಯಕ್ತಿ ಕೇಂದ್ರಿತವಾಗಿರುತ್ತವೆ. ಬೆಲೆ ಕಟ್ಟಲಾಗದ ಬಹುತೇಕ ಮೌಲ್ಯಗಳ ಕುರಿತು ಕುರುಡಾಗಿರುತ್ತವೆ. ಹಣದ ಅಳತೆಯೊಳಗೆ ಬಾರದ ವಿಚಾರಗಳು ಬಹಳ ಇವೆ.

ಪೇಟೆಗಳನ್ನು ಅದರ ವಿಸ್ತಾರದ ಮೇಲೆ ಹಲವು ರೀತಿಯಿಂದ ವರ್ಗೀಕರಿಸಬಹುದು. ಮೊದಲನೆಯದಾಗಿ ಹಳ್ಳಿಯ ಸೌಮ್ಯ ಲಕ್ಷಣಗಳನ್ನು ಕಳೆದುಕೊಳ್ಳಲು ಪ್ರಾರಂಭವಾದ ಸ್ಥಿತಿ - ಇದುವೇ ಪೇಟೆ (ಉದಾಹರಣೆಗೆ, ಮುನ್ಸಿಪಾಲಿಟಿ ಉಳ್ಳಂಥಾ ಚಾಮರಾಜನಗರ). ಮುಂದುವರಿದು ಪಟ್ಟಣ (ಕಾರ್ಪೊರೇಷನ್ ವ್ಯವಸ್ಥೆಯನ್ನುಳ್ಳ ಮೈಸೂರು), ಹೆಚ್ಚುವರಿದು ನಗರ (ಮೆಟ್ರಾಪಲಿಸ್ - ಹಿರಿದಾದ ಕಾರ್ಪೊರೇಷನ್ ಉಳ್ಳ ಬೆಂಗಳೂರು), ಹುಚ್ಚೆದ್ದು ಮಹಾನಗರ (ಮೆಗಾಪಲಿಸ್ - ಇನ್ನೇನು ಹೊಸರೂಪ ತಾಳಲಿರುವ ಬೆಂಗಳೂರು).

ಪೇಟೆಗೆ ನಾಮಕರಣ ಅದು ಹೇಗಾದರೂ ಇರಲಿ, ಇಲ್ಲೆಲ್ಲ ಒಂದು ಸರಳ ಸಾಮ್ಯವನ್ನು ನಾವು ಗುರುತಿಸಬಹುದು - ಅದೇ ನಾಗರಿಕ ವ್ಯವಸ್ಥೆಯ ಕೊರತೆ (ವಿಶೇಷವಾಗಿ ಕೊಳಚೆ ಪ್ರದೇಶಗಳಲ್ಲಿ), ಗಾಳಿ, ನೀರು, ಮಣ್ಣಿನ ಅನಿಯಂತ್ರಿತ ಮಾಲಿನ್ಯ, ಗಾಬರಿಪಡಿಸುವ ಸಾರ್ವಜನಿಕ ಅನಾರೋಗ್ಯ, ಅಯೋಗ್ಯ ಹಾಗೂ ಭ್ರಷ್ಟ ಅಧಿಕಾರಿಗಳು, ಹೆಚ್ಚುತ್ತಿರುವ ಬಡವ - ಬಲ್ಲಿದ ಅಂತರ, ಏರುತ್ತಿರುವ ಕ್ರೌರ್ಯ ಹಾಗೂ ದೈನ್ಯ, ಸುಸ್ಥಿರಗೊಂಡಿರುವ ರಾಜಕಾರಣಿ - ಅಧಿಕಾರಿ ಹಾಗೂ ಪಟಿಂಗರ ರಾಕ್ಷಸ ವಿತ್ತ ಸಂಬಂಧಗಳು.

ಈ ವ್ಯಾಖ್ಯಾನ ಪೇಟೆಯ ಭೌತಿಕ ವಾತಾವರಣಕ್ಕೆ ಮಾತ್ರ ಸಂಬಂಧಿಸಿದ್ದಲ್ಲ, ಆರ್ಥಿಕ, ರಾಜಕೀಯ, ಸಾಮಾಜಿಕ, ಪಾರಿಸರಿಕ, ಶೈಕ್ಷಣಿಕ, ಬೌದ್ಧಿಕ, ಭಾವನಾತ್ಮಕ ಹೀಗೆ ಒಂದೊಂದು ಕ್ಷೇತ್ರದಲ್ಲೂ ನಾವು ಬೀಭತ್ಸ ರಾಡಿಯನ್ನು ಕಾಣಬಹುದು. ಈ ಕೊಚ್ಚೆಯ ಕರಾಳತೆಯು ಪೇಟೆಯ ಗಾತ್ರ ಹಾಗೂ ಬೆಳವಣಿಗೆಯ ವೇಗಾನುಗುಣವಾಗಿದೆ.

ಪೇಟೆಗಳು ಪಟ್ಟಣಗಳಾಗಿ, ನಗರಗಳಾಗಿ ಬೆಳೆಯುವುದು, ಪೇಟೆ ಪೇಟೆಗಳು ಪರಸ್ಪರ ಸಂಧಿಸುವುದು , ಒಟ್ಟಾರೆ ದೇಶದ ಜನ ಪೇಟೆಯ ರೀತಿ ನೀತಿಗಳಿಗೆ ಹಾತೊರೆಯುವಂತೆ ಮಾಡುವುದನ್ನೇ ದೇಶದ ಅಭಿವೃದ್ಧಿಯ ಮಾದರಿಯನ್ನಾಗಿ ನಮ್ಮ ಸರ್ಕಾರ ಸ್ವೀಕರಿಸಿಬಿಟ್ಟಿದೆ. ಈ ಮೊದಲು ನಮ್ಮ ಸರ್ಕಾರಕ್ಕೆ ಗ್ರಾಮೀಣಾಭಿವೃದ್ಧಿ ಆದ್ಯತೆಯಾಗಿತ್ತು. ಅದಕ್ಕಾಗಿ ಗ್ರಾಮಿಣಾಭಿವೃದ್ಧಿ ಇಲಾಖೆ ಇತ್ತು. ಆದರೆ ಆದ್ಯತೆ ಬದಲಾಯಿತು. ನಗರಾಭಿವೃದ್ಧಿ ಮಂತ್ರಾಲಯ ಪ್ರಾರಂಭವಾಯಿತು. ದೇಶದ ಅಭಿವೃದ್ಧಿಯನ್ನು ನಗರಗಳ ಅಭಿವೃದ್ಧಿಗೆ ಸಮೀಕರಿಸಲಾಯಿತು. ಕಾರ್ಖಾನೆಗಳು ಆರ್ಥಿಕತೆಯ ಪ್ರಥಮ ಆದ್ಯತೆಯಾದುವು. ಕಾರ್ಖಾನೆಗಳ ಸುತ್ತ ಚೆಲ್ಲಾಪಿಲ್ಲಿಯಾಗಿ ಬೆಳೆಯುವ ಅಸಂಬದ್ಧ ಪೇಟೆಗಳು ನಮ್ಮ ಸರ್ಕಾರಕ್ಕೆ ಸಹ್ಯವಾಯಿತು. ಇದೀಗ ದೇಶದ ನಲ್ವತ್ತು ದಶಾಂಶ ಜನಸಂಖ್ಯೆ ಪೇಟೆಗಳಲ್ಲಿ ಕಾಲ ಹರಣ ಮಾಡುವ, ಕ್ಷಮಿಸಿ, ಸುಲಭದ ಹಣ ಮಾಡುವ ಸ್ಥಿತಿ, ನಮ್ಮ ಸರ್ಕಾರಕ್ಕೆ ಪ್ರಿಯವಾಯಿತು.

**ಪ್ರಗತಿ ಮತ್ತು ಪರಿಸರದ ಆಘಾತಗಳು**

ಕಾರ್ಖಾನೆಯೊಂದರ ಉತ್ಪಾದನೆ, ಹಣದ ಸಂಪಾದನೆ, ಸಂಬಂಧಿತ ವ್ಯಕ್ತಿಗಳ ಜೀವನ ಸುಧಾರಣೆಗಳ ಲೆಕ್ಕ ಬಹಳ ಸುಲಭ ಹಾಗೂ ಇಷ್ಟನ್ನು ಮಾತ್ರ ಇದು ತನಕವೂ ಗಣನೆಗೆ ತೆಗೆದುಕೊಳ್ಳಲಾಗಿದೆ. ಹಾಗೂ ಇಷ್ಟರಿಂದ ಮಾತ್ರವೇ ಕಾರ್ಖಾನೆಯೊಂದರ ಯಶಸ್ಸು , ಅಪಯಶಸ್ಸುಗಳನ್ನು ಅಳೆಯಲಾಗುತ್ತಿದೆ. ಆದರೆ ಇದಿಷ್ಟೇ ಸಾಲದು. ಪರಿಸರದ ಪರಿಣಾಮಗಳನ್ನು ಲೆಕ್ಕ ಹಾಕಬೇಕೆಂಬುದು ಇದೀಗ ಸ್ಪಷ್ಟವಾಗುತ್ತಿದೆ. ಕಾರ್ಖಾನೆ ಹಾಗೂ ಪೇಟೆಗಳ ರಾಕ್ಷಸ ಸಂಬಂಧದಿಂದಾಗುತ್ತಿರುವ ದುಷ್ಪರಿಣಾಮಗಳನ್ನು ಗಮನಿಸಬೇಕಾದ ಅನಿವಾರ್ಯತೆ ಬಂದುಬಿಟ್ಟಿದೆ. ಪೇಟೆಗಳು ಹಳ್ಳಿಗಳನ್ನೂ ಕಾಡುಗಳನ್ನೂ ಸಮಾನವಾಗಿ ನುಂಗುತ್ತಿವೆ. ಹಳ್ಳಿ ಜನ ಪೇಟೆಗಳಿಗೆ ನೂಕಲ್ಪಡುತ್ತಿದ್ದಾರೆ. ಇಂದು ಈ ಜನ ಪರದೇಶಿಗಳಾಗಿದ್ದಾರೆ. ಕೊಳಚೆ ನಿವಾಸಿಗಳಾಗಿದ್ದಾರೆ. ಪೇಟೆಗಳಿಂದ ದೇಶ ಅಭಿವೃದ್ಧಿಯಾಗುತ್ತವೆಂಬ ವಿದ್ಯಾವಂತ ಸಮುದಾಯದ ಕೊಳಕು ಚಿಂತನೆಯ ಪ್ರತಿಬಿಂಬವಾಗಿ ಈ ಕೊಳಕರಿದ್ದಾರೆ. ಅತ್ಯಂತ ಅನಿವಾರ್ಯವಾದ ನೀರು, ಆಹಾರ, ಇಂಧನಗಳಿಗೆ ಹಳ್ಳಿಯ ಜನರು ದೂರದ ಪೇಟೆಯನ್ನು ಅವಲಂಬಿಸುವ ಪರಾಧೀನತೆಗೆ ಸಂದಿದ್ದಾರೆ. ಜೀವಧಾರಕ ಪ್ರಕೃತಿಯ ಲಕ್ಷಣಗಳೆಲ್ಲಾ ಮಸುಕಾಗುತ್ತಿವೆ. ಹಣವೊಂದೇ ಅಂತಿಮ ಅಲ್ಲ ಎಂಬ ಸಂದೇಶ ಸಂಕೇತ ಸ್ಥಿತಿಯನ್ನು ದಾಟಿ ಸ್ಪಷ್ಟ ಭಾಷೆಯಾಗಿ ಮಾರ್ಪಟ್ಟಿದೆ.

ಅಭಿವೃದ್ಧಿಯ ಆಧುನಿಕ ಪರಿಭಾಷೆ ಅನರ್ಥಕಾರಿಯಾಗಿದೆ. ಅದು ಉದ್ರೇಕಕಾರಿಯಾಗಿದೆ. ಅಪಕರ್ಷಕವಾಗಿದೆ. ಸಾಮಾಜಿಕ ಅಸಮಾನತೆಗೆ ಕಾರಣವಾಗಿದೆ. ಕೇಂದ್ರೀಕೃತ ಸಾಮ್ರಾಜ್ಯಶಾಹಿಯಾಗಿದೆ.

ನಮಗಿಂದು ವಿಕೇಂದ್ರಿತ ವ್ಯವಸ್ಥೆ ಬೇಕು. ಹಳ್ಳಿಗಳ ಆರ್ಥಿಕತೆಯನ್ನು ಬಲಗೊಳಿಸುವ ಅಭಿವೃದ್ಧಿ ಬೇಕು. ಅಂಕೆ ತಪ್ಪಿದ ನಗರಗಳನ್ನು ಹಿಡಿತಕ್ಕೆ ತರುವ ಚಿಂತನೆ ಬೇಕು. ಮೂಲಭೂತ ಆವಶ್ಯಕತೆಗಳು ಒಂದೊಂದು ಸಣ್ಣ ಪ್ರಾಂತದಲ್ಲೂ ಅಲ್ಲಲ್ಲೇ ಸೃಷ್ಟಿಯಾಗುವಂಥಾ ಉತ್ಪಾದಕತೆ ಬೇಕು. ಸಾಮಾಜಿಕ ಸಮಾನತೆಯನ್ನು ಸಾಧಿಸುವ ಯೋಜನೆ ಬೇಕು.

ಆದರೆ ಪ್ರಕೃತ ಸಂಭವಿಸುತ್ತಿರುವ ವಿಪರೀತಗಳು ಪ್ರಪಂಚ ವ್ಯಾಪಿ. ಅಷ್ಟು ಸುಲಭವಾಗಿ ತಿರುಗಿಸಲು ಸಾಧ್ಯವಿಲ್ಲ. ಕೈಗಾರಿಕಾಧಾರಿತ ಅಭಿವೃದ್ಧಿಯಿಂದ ಸ್ಥಳೀಯ, ಹಾಗಲ್ಲದೆ ವಿಶ್ವದ ಪರಿಸರ, ತಿದ್ದಿಕೊಳ್ಳಲಾಗದ ತೀವ್ರತರ ಆಘಾತಗಳಿಗೆ ಒಳಗಾಗುತ್ತಿದೆ ಎಂಬುದನ್ನು ಯೋಜಕರಿಗೆ ಹಾಗೂ ಸಾರ್ವಜನಿಕರಿಗೆ ವಿಷದೀಕರಿಸುವ ಅನಿವಾರ್ಯತೆ ಇದೆ ಈ ಹೊತ್ತು. ಒಟ್ಟಾಗಿ ನಮ್ಮ ಹಾಗೂ ಪರಿಸರದ ನೋವನ್ನು ಮಿತಗೊಳಿಸಲು ನಾವೆಲ್ಲ ಜಾಗರೂಕವಾಗಿ, ವ್ಯಾವಹಾರಿಕವಾಗಿ ಪ್ರಯತ್ನಿಸದಿದ್ದರೆ ನಮಗಿದೆ ಭಾರೀ ಕುತ್ತು.

ಅಭಿವೃದ್ಧಿಯ ವಿಕೃತ ಕಲ್ಪನೆಯ ಕಾರಣವಾಗಿ ಬೆಳೆಯುತ್ತಿರುವ ನಗರಗಳು ಅಲ್ಲಿಯ ಜನಜೀವನದ ಮೇಲೆ ವಜ್ರಾಘಾತವನ್ನು ಮಾಡುತ್ತಿವೆ. ಪೇಟೆಗಳಲ್ಲಿಂದು ಉಸಿರಾಡಲು ಶುದ್ಧಗಾಳಿ, ಪಾನಯೋಗ್ಯ ನೀರು, ಕಲಬೆರಕೆ ಇಲ್ಲದ ಆಹಾರ ದುರ್ಲಭವಾಗಿವೆ. ಒಳಚರಂಡಿ ವ್ಯವಸ್ಥೆ, ಘನ ತ್ಯಾಜ್ಯಗಳ ನಿರ್ವಹಣೆ, ವೈಯಕ್ತಿಕ ಹಾಗೂ ಸಾಮಾಜಿಕ ಸುರಕ್ಷೆ, ವಿದ್ಯುತ್ ಶಕ್ತಿ, ಸಾಗಾಟ ಇತ್ಯಾದಿಗಳು ದುರ್ಬಲವಾಗಿವೆ. ಜೀವಂತ ವ್ಯಕ್ತಿಯ ಹಕ್ಕಾಗಿರುವ ಮೇಲಿನ ಆವಶ್ಯಕತೆಗಳ ಜೊತೆಗೆ ರಾಜಕೀಯ ಸ್ವಾತಂತ್ರ್ಯವನ್ನು ಸೇರಿಸಿ ವಿಶ್ವಸಂಸ್ಥೆಯ ಅಭಿವೃದ್ಧಿ ಯೋಜನೆಯು ಮಾನವ ವಿಕಾಸ ಸೂಚಿಯನ್ನು

ಎಸ್. ಜಿ. ವೊಂಬತ್ಕೆರೆ

ತಯಾರಿಸಿದೆ. ಅದು ಗಮನಿಸಿದ ಪ್ರಪಂಚದ ೧೭೪ ದೇಶಗಳ ಪೈಕಿ ಭಾರತದ ಸ್ಥಾನ ೧೩೯ ಎಂದ ಮೇಲೆ ಒಬ್ಬಾತ ಬಡವನಿರಲಿ, ಬಲ್ಲಿದನಿರಲಿ ಮೇಲೆ ಹೇಳಿದ ಅಗತ್ಯಗಳನ್ನು ಪಡೆಯುವ ಮಾನವ ಹಕ್ಕನ್ನು ಪೂರೈಸಲಾಗದ ಮೇಲೆ ನಾವ್ಯಾಕೆ ಪೇಟೆಗಳನ್ನು ಬೆಳೆಸಬೇಕು?

**ಈ ಕೆಳಗಿನ ಸರಳ ಭಾಗಾಹಾರವನ್ನು ಗಮನಿಸಿ :**

ಆತ್ಮೀಯ ಜೀವನ ಮಟ್ಟ (ಭಾಜ್ಯ) / ಅಹಂಕಾರದ ಜೀವನ ಮಟ್ಟ (ಭಾಜಕ) = ೧ ಆದರ್ಶ ಸ್ಥಿತಿ (ಭಾಗಲಬ್ಧ)

ಈ ಮೊದಲೇ ಉಲ್ಲೇಖಿಸಿದಂತೆ ಶುದ್ಧವಾದ ಗಾಳಿ, ನೀರು, ಆಹಾರ ಇತ್ಯಾದಿಗಳನ್ನು ಪಡೆದು ಆತ್ಮೀಯ ಜೀವನ ಮಟ್ಟವನ್ನು (ಭಾಜ್ಯ) ತಲಪುವುದು ಪ್ರತಿಯೊಂದು ಜೀವಿಯ ಹಕ್ಕಾದರೆ, ಈ ಹಕ್ಕನ್ನು ಅರ್ಹತೆಗೆ ಮೀರಿ ಅನುಭವಿಸುವುದು, ಪರ್ಯಾಯವಾಗಿ ಆತ್ಮೀಯ ಜೀವನ ಮಟ್ಟವನ್ನು (ಮೊದಲಿಗೆ ಇತರರದು ಆಮೇಲೆ ಸ್ವಯಂ ತನ್ನದೂ) ನಾಶ ಮಾಡುವುದು - ಇದು ಅಹಂಕಾರದ ಜೀವನ ಮಟ್ಟ (ಭಾಜಕ). ಅಹಂಕಾರಿಯು ಒಂದೊಂದು ಅಗತ್ಯಗಳನ್ನೂ ಅತಿಯಾಗಿ ಬಳಸುತ್ತಾನೆ. ಅತಿಯಾಗಿ ಅಗತ್ಯಗಳನ್ನು ಸೃಷ್ಟಿ ಮಾಡಿಕೊಳ್ಳುತ್ತಾನೆ. ಪರಿಣಾಮವಾಗಿ ಹೆಚ್ಚಿನ ನೈಸರ್ಗಿಕ ಸಂಪನ್ಮೂಲಗಳು ಬಳಕೆಯಾಗುತ್ತವೆ. ನೈಸರ್ಗಿಕ ಸಂಪತ್ತನ್ನು ಕೃತಕ ಅಗತ್ಯಗಳಾಗಿ ಮಾರ್ಪಡಿಸಲು ಕಾರ್ಖಾನೆಗಳು ಅನಿವಾರ್ಯವಾಗುತ್ತವೆ. ಕಾರ್ಖಾನೆಗಳಿಂದ ಪೇಟೆಗಳು ಸೃಷ್ಟಿಯಾಗುತ್ತವೆ. ಆತ್ಮೀಯ ಜೀವನವನ್ನು ಸಾಗಿಸುವ ಜನಸಾಮಾನ್ಯರ ಹಕ್ಕು ಹರಣವಾಗುತ್ತಾ ಹೋಗುತ್ತದೆ. ಮೇಲಿನ ಗಣಿತದಲ್ಲಿ ಭಾಜ್ಯ ಕುಗ್ಗುತ್ತದೆ. ಭಾಜಕ ಹಿಗ್ಗುತ್ತದೆ. ಭಾಗಲಬ್ಧ ಆದರ್ಶಕರವಾದ ಒಂದರಿಂದ ಕೆಳ ಕೆಳಗೆ ಇಳಿಯುತ್ತಾ ಹೋಗುತ್ತದೆ. ಋಣಾತ್ಮಕ ಪ್ರಗತಿ ಸಂಘಟಿಸುತ್ತದೆ. ವಿಶ್ವಸಂಸ್ಥೆಯ ಯೋಜನೆಯು ಕೊಟ್ಟ ಮಾನವ ವಿಕಾಸ ಸೂಚಿಯನ್ನು ಹೀಗೂ ಬರೆಯಬಹುದು: ಪ್ರಕೃತ ಪ್ರಪಂಚ ನಿರೀಕ್ಷಿಸುತ್ತಿರುವ ಅಭಿವೃದ್ಧಿಯಲ್ಲಿ ನಮ್ಮ ಸ್ಥಾನವನ್ನು ಗುರುತಿಸಿ ಕೊಳ್ಳಬಹುದು.

(೧೭೪ - ೧೩೯) / ೧೭೪ = ೩೫ / ೧೭೪ = ೦.೨

(ಇದು ನಮ್ಮ ಪ್ರಗತಿಯ ಸಂಖ್ಯೆ)

ನಮ್ಮ ಪ್ರಗತಿಯ ಗತಿ ಅರ್ಥವಾಗಬೇಕಾದರೆ ದಿಲ್ಲಿ, ಬೊಂಬಾಯಿ, ಚೆನ್ನೈ, ಕಲ್ಕತ್ತ, ಅಹಮ್ಮದಾಬಾದ್ ಮತ್ತು ಬೆಂಗಳೂರುಗಳಂಥಾ ನಗರಗಳನ್ನು ನೋಡಬೇಕು. ಇಲ್ಲಿಯ ಒಬ್ಬೊಬ್ಬರ ಜೀವನದ ಮೇಲೂ ಗಂಭೀರ ದುಷ್ಪರಿಣಾಮಗಳಾಗಿವೆ. ಆತ್ಮೀಯ ಜೀವನಮಟ್ಟ ತರತಮ ಭಾವವಿಲ್ಲದೆ ಎಲ್ಲ ವರ್ಗಗಳಲ್ಲೂ ಕುಸಿದಿದೆ. ಬಡ ವರ್ಗದ ಸ್ಥಿತಿ ತೀರ ಹದಗೆಟ್ಟಿದೆ.

ಆದರೆ ಇದೆಲ್ಲವನ್ನು ನೋಡಿಯೂ ನೋಯದ ಮನೋಜಾಡ್ಯ ನಮ್ಮ ಅಭಿವೃದ್ಧಿಯ ಲಕ್ಷಣವಾಗಿಬಿಟ್ಟಿದೆ. ಅಹಂಕಾರದ ಜೀವನ, ಕಾರ್ಖಾನೆ, ಪೇಟೆ, ಮಾಲಿನ್ಯ, ಮೌಢ್ಯ, ಕ್ರೌರ್ಯ ಇವು ಒಂದು ವಿಷ ವೃತ್ತ. ಈ ವೃತ್ತಕ್ಕೆ ಎಂಥಾ ಚಾಲನೆ ಸಿಕ್ಕಿದೆ ಎಂದರೆ, ಅದು ಭಾಜ್ಯ ಹಾಗೂ ಭಾಜಕದ ವ್ಯತ್ಯಾಸವನ್ನೇ ಗ್ರಹಿಸದಾಗಿದೆ. ಹಾಗೂ ಮತ್ತೆ ಮತ್ತೆ ಭಾಗಲಬ್ಧವನ್ನು ಕಿರಿದುಗೊಳಿಸುವ ಕೈಗಾರಿಕೆಯ ಪರವಾಗಿಯೇ ಕೆಲಸ ಮಾಡುತ್ತಿದೆ.

ಕಾರ್ಖಾನೆಗೆ ಬಂಡವಾಳ ಬೇಕು. ಬಂಡವಾಳ ಹುಟ್ಟಬೇಕಾದರೆ ಕಾರ್ಖಾನೆ ಬೇಕು (ಜೊತೆಗೊಂದಷ್ಟು ಭಂಡತನವೂ ಬೇಕು.) ಒಟ್ಟಿನಲ್ಲಿ ನೈಸರ್ಗಿಕ ಸಂಪನ್ಮೂಲ ನಷ್ಟವಾಗಬೇಕು. ಅತಿರೇಕಕ್ಕಾಗುವ ಸಂಪತ್ತಾಗಿ, ಬಂಡವಾಳವಾಗಿ ಮಾರ್ಪಡಬೇಕು. ಒಟ್ಟಾರೆ ದೈತ್ಯ ನೃತ್ಯಕ್ಕೆ ತಾಳ ಹಾಕುತ್ತಾ ಹಳ್ಳಿಗಳನ್ನು ಪೇಟೆಗಳಾಗಿ, ಪೇಟೆಗಳನ್ನು ಪಟ್ಟಣಗಳನ್ನಾಗಿ ಪರಿವರ್ತಿಸುವ ಭಯಾನಕ ಅಭಿವೃದ್ಧಿ ಮುಂದುವರಿದಿದೆ. ಇಂಥಾ ಅಭಿವೃದ್ಧಿಗೆ ಪ್ರಬಲ ಅಧೋರಚನೆ ಬೇಕು. ಅಪಾರ ಬಂಡವಾಳ ಬೇಕು. ಅಸಾಧ್ಯ ಮಾನವ ಶ್ರಮ ಬೇಕು. ಅರ್ಥ ಆದವರಿಗೆ ಮಾತ್ರ ಇದು ಭಯಾನಕ. ಆದರೆ ಪೇಟೆಗಳ ಬೆಳವಣಿಗೆಯಲ್ಲೇ ಅಭಿವೃದ್ಧಿಯನ್ನು ಗ್ರಹಿಸುವ, ಗುರುತಿಸುವ ಮಂದಿಗೆ ಮತ್ತೆ ಮತ್ತೆ ಇದೇ ಬೇಕು. ಪೇಟೆಗಳ ಅಭಿವೃದ್ಧಿಗೆ ಬೇಕಾದ ಪ್ರಬಲ ಅಧೋರಚನೆಗಳ ಕುರಿತು ಅವರಿಗೆ ಯೋಜನೆಗಳು ಬೇಕು. ಮುನ್ನೆಲೆಯಲ್ಲಿ ಬಂಡವಾಳ, ಮಾನವಶ್ರಮ ಬೇಕು.

ಹೀಗಾದಾಗ ಪೇಟೆ ನಾಗಾಲೋಟದಲ್ಲಿ ನಗರವಾಗಿ, ಮಹಾನಗರವಾಗಿ, ಮಾಯಾನಗರವೂ ಆಗಿಬಿಡುತ್ತದೆ. ಈ ಓಟದಲ್ಲಿ ಈ ಮೊದಲು ಪ್ರಸ್ತಾಪಿಸಿದ ಮೂಲಭೂತ ಅಗತ್ಯಗಳ, ಸೌಲಭ್ಯಗಳ ಕೊರತೆಯ ಕರಿಛಾಯೆ ಕುದುರೆಗಿಂತ ಮುಂದಿರುತ್ತದೆ. ಓಟದ ವೇಗಕ್ಕೆ ಸದಾ ತಡೆಯಾಗಿರುತ್ತದೆ. ಇಂಥಾ ತಡೆ ಉಂಟಾದಾಗಲೆಲ್ಲ ಈ ಮಂದಿ ಮತ್ತೆ ಮತ್ತೆ ವಿಚಿತ್ರವನ್ನೇ ಗ್ರಹಿಸುತ್ತಾರೆ. ಇನ್ನೂ

ಜೋರಾಗಿ ಓಡಿ ನೆರಳನ್ನು ಹಿಂದೆ ಹಾಕಲು ಪ್ರಯತ್ನಿಸುತ್ತಾರೆ. ಅಧೋರಚನೆಯ ಕೊರತೆಯಿಂದ ಹೀಗಾಗುತ್ತಿದೆ ಎಂದು ತಿಳಿಯುತ್ತಾರೆ. ರಚನೆಯನ್ನು ಬಲಪಡಿಸಲು ಮತ್ತೆ ಮತ್ತೆ ಬಂಡವಾಳ ಸುರಿಯುತ್ತಾರೆ. ಸಿಕ್ಕ ಸಿಕ್ಕಲ್ಲಿಂದ ಸಾಲ ಬೇಡುತ್ತಾರೆ. ಆದರೆ ನಿಸರ್ಗದ ಸರಳ ಸತ್ಯವನ್ನು ಗ್ರಹಿಸದಾಗಿದ್ದಾರೆ.

ಬೆಳಕಿನ ವಿರುದ್ಧ ದಿಕ್ಕಿನಲ್ಲಿ ಓಡಿದಾಗ ನಮ್ಮ ಮುಂದೆ ನೆರಳು ಇದ್ದೇ ಇರುತ್ತದೆ. ಎಷ್ಟು ವೇಗವಾಗಿ ಓಡಿದರೂ ನೆರಳು ಇರುತ್ತದೆ. ಕೊನೆಗೊಮ್ಮೆ ನೆರಳು ಮಾಸಿ ಕಗ್ಗತ್ತಲೆ ಮಡುಗಟ್ಟುತ್ತದೆ.

ನೆರಳು ಮಾಸಿ ಕಗ್ಗತ್ತಲೆ ಮೂಡುವ ಮೊದಲು ನಾವು ಹಿಮ್ಮುಖವಾಗಿ ನೋಡಬೇಕಾಗಿದೆ. ಪರಿಸರ ಆಘಾತದ ಅಂದಾಜು (ಪ.ಆ.ಅ.) ನಮಗೆ ಇಂಥಾ ಹಿನ್ನೋಟವನ್ನು ಕೊಡಬಲ್ಲುದು. ಬೆಳಕಿನ ಹೊಳಪನ್ನು (ಆಡಂಬರದ ಥಳಕು ಅಲ್ಲ) ತೋರಬಲ್ಲುದು. ಆಧುನಿಕ ಮರ್ಜಿಯ ಯಾವುದೇ ಹೊಸ ಅಭಿವೃದ್ಧಿ ಯೋಜನೆಯ ಜೊತೆಗೆ ಪ.ಆ.ಅ. ಅತ್ಯಂತ ಅನಿವಾರ್ಯ. ಹಾಗೆಂದ ಮಾತ್ರಕ್ಕೆ ಹಳೆ ರಸ್ತೆ ರಿಪೇರಿ ಮಾಡುವಾಗ, ಕುಸಿದ ಮೋರಿಯನ್ನು ದುರಸ್ತಿಗೊಳಿಸುವಾಗ ಇಂಥಾ ಅಂದಾಜು ಮಾಡಬೇಕೇ? ಎಂಬ ಕುಚೋದ್ಯದ ಅಗತ್ಯ ಇಲ್ಲ. ಯಾವುದೇ ಹೊಸ ಯೋಜನೆ, ಅಪಾರ ಬಂಡವಾಳವನ್ನು ಬಯಸುವ ಯೋಜನೆ, ರೂಪುಗೊಳ್ಳುವಾಗ ಅದಕ್ಕೊಂದು ಬಂಡವಾಳದ ಮಿತಿ ನಿರ್ಧರಿಸಬೇಕು. ಪಾರಿಸರಿಕ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳ ಮೇಲಿನ ಪರಿಣಾಮಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಅಭಿವೃದ್ಧಿ ಹಾಗೂ ಪರಿಸರಗಳ ನಡುವೆ ಒಂದು ಸಮತೋಲವನ್ನು ನಿರ್ಮಿಸಬೇಕು.

ಒಂದು ಯೋಜನೆಯ ಲಾಭ ನಷ್ಟಗಳನ್ನು ಇಂದಿನ ರೀತಿಯಲ್ಲಿ ಹಣದ ಆಧಾರದಲ್ಲಿ ನಿರ್ಧರಿಸುವುದಕ್ಕಿಂತ, ಪರಿಸರ ಆಘಾತದ ಅಂದಾಜಿನ ಮೇಲೆ ನಿರ್ಧರಿಸುವುದರಿಂದ ಬಹಳಷ್ಟು ಲಾಭ ಇದೆ. ಎಷ್ಟು ನಿಗಾ ವಹಿಸಿ ಹಣದ ಲೆಕ್ಕಾಚಾರ ಮಾಡಿದರೂ ಸೋಲುವ ಸಂದರ್ಭವೇ ಜಾಸ್ತಿ. ಯಾಕೆಂದರೆ ಈ ಲೆಕ್ಕಾಚಾರ ಹೆಚ್ಚಾಗಿ ಸಮಾಜದ ಒಂದು ವರ್ಗವನ್ನು ಮಾತ್ರ ಗಮನಿಸಿರುತ್ತದೆ. ಅವರಿಗೆ ಮಾತ್ರ ಲಾಭವಾಗುತ್ತದೆ. ಹಾಗೂ ಒಬ್ಬರ ಲಾಭ ಹಲವರ ನಷ್ಟವಾಗಿರುತ್ತದೆ. ಈ ನಷ್ಟಕ್ಕೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಮಾಜದ ಬಡ ಜನರು, ಅಶಕ್ತರು ಒಳಗಾಗುತ್ತಾರೆ. ಹಾಗಾಗಿ ಸರ್ವಜನರ ಹಿತ ಕಾಣುವ, ಪರಿಸರದ ಸಮತೋಲ ಕಾಯುವ ಪ.ಆ.ಅ. ಅತ್ಯಂತ ಅವಶ್ಯ. ಈ ಬಗ್ಗೆ ಸಾರ್ವಜನಿಕ ವಿಚಾರಣಾ ಸಭೆ ಅತ್ಯಂತ ಅಗತ್ಯ. ಇಂಥಾ ಸಭೆಗಳಿಂದ ಶೋಷಿತರ ಧ್ವನಿಗೆ ಅವಕಾಶ ಸಿಗುತ್ತದೆ. ಪರಿಸರದ ಮೊರೆಗೆ ಆಸ್ಪದವಾಗುತ್ತದೆ. ಮಾಹಿತಿಯುಳ್ಳವರ ಮಾತಿಗೆ ಸಂದರ್ಭವಾಗುತ್ತದೆ. ಸಮಸ್ಯೆಗಳ ಬಹುಮುಖ ದರ್ಶನವಾಗುತ್ತದೆ. ಹಲವಾರು ವಿರೋಧಗಳು, ಕಾಣ್ಕೆಗಳು, ಸಲಹೆಗಳು ವ್ಯಕ್ತಗೊಳ್ಳುತ್ತವೆ. ಇವುಗಳ ಆಧಾರದ ಮೇಲೆ ಅಭಿವೃದ್ಧಿಯೋಜನೆಗಳನ್ನು ಸಾರ್ವಜನಿಕ ನ್ಯಾಯ ಬದ್ಧವಾಗಿ ಬದಲಾಯಿಸಬಹುದು. ಋಣಾತ್ಮಕ ಪರಿಣಾಮಗಳನ್ನು ಕಡಿಮೆಗೊಳಿಸಬಹುದು ಅಥವಾ ಋಣಾತ್ಮಕತೆ ಮಿತಿಮೀರಿದ್ದರೆ ಸಾರ್ವಜನಿಕ ಅಭಿಪ್ರಾಯದ ಮೇರೆಗೆ ಯೋಜನೆಯನ್ನು ಕೈಬಿಡಬಹುದು.

**ನಗರೀಕರಣದ ಪರಿಣಾಮಗಳು**

ನಗರಾಭಿವೃದ್ಧಿಯ ಮೊದಲ ಲಕ್ಷಣ ಕಟ್ಟಡಗಳು. ಇದು ಕಾರ್ಖಾನೆ ಇರಬಹುದು. ವ್ಯಾಪಾರ ಮಳಿಗೆಗಳಿರಬಹುದು. ವಾಸದ ಮನೆಗಳಿರಬಹುದು. ಭಾರೀ ಬಂಗಲೆ, ಹೋಟೆಲು, ಕಛೇರಿ ಇತ್ಯಾದಿಗಳಿರಬಹುದು. ಇದರ ಜೊತೆಗೆ ರಸ್ತೆ, ನಲ್ಲಿನೀರಿನ ವ್ಯವಸ್ಥೆ, ಒಳಚರಂಡಿ, ವಿದ್ಯುತ್ ಸರಬರಾಜು ಸೇರಿರಬಹುದು. ಈ ಸಂಬಂಧ ನಗರಾಭಿವೃದ್ಧಿ ಪ್ರಾಧಿಕಾರವಿರಬಹುದು, ಕೈಗಾರಿಕಾಭಿವೃದ್ಧಿ ನಿಗಮವೇ ಇರಬಹುದು. ಮಾಡುವ ಮೊದಲ ಕೆಲಸ - **ಭೂ ಸ್ವಾಧೀನ**

ಪೇಟೆಯ ಸುತ್ತು ಮುತ್ತಣ ಕೃಷಿ ಜಮೀನಿನ ಆಕ್ರಮಣ. ಬೇರೆ ಉದ್ಯೋಗವರಿಯದ, ಬೇರೆ ಕುಶಲತೆ ಇಲ್ಲದ, ಅಲ್ಲಿಯ ಪರಿಸರದಲ್ಲಿ ಒಂದಾಗಿದ್ದ ರೈತರ ಕುರಿತು, ಅವರ ಭವಿಷ್ಯದ ಕುರಿತು, ನಮ್ಮ ಯೋಜಕರು, ಅರ್ಥಶಾಸ್ತ್ರಜ್ಞರು ಕಿಂಚಿತ್ತೂ ಯೋಚಿಸದಿರುವುದರಿಂದ ಇದೊಂದು ಆಕ್ರಮಣ. ಅವರು ಕಳೆದುಕೊಂಡ ಜಮೀನಿಗೆ ಒಂದಷ್ಟು ಪರಿಹಾರ ಕೊಡಬಹುದು. ಆದರೆ ಅವರಿಗೆ ಜೀವನವನ್ನು ಕೊಡಬಹುದೇ? ಈ ಹಣ ಕಾಲಾಂತರವಿಲ್ಲದಂತೆ ಕಳೆದು ಹೋಗಿ, ನಿರ್ಗತಿಕನಾಗಿ ಆತ ಪೇಟೆಯ ಕೊಳಚೆನಿವಾಸಿಯಾಗುವನು. ಅಭಿವೃದ್ಧಿಯ ಸಂಕೇತವಾದ ಪೇಟೆಯ ಕಟ್ಟಡಗಳಿಗೆ ಸುಲಭದ ಕೂಲಿಯಾಗುವಂತೆ ಕೊಳಚೆಗೆ ಸೆಳೆಯುವ ಹುನ್ನಾರವಿರುವುದರಿಂದ ಇದೊಂದು ಆಕ್ರಮಣ. ಜಮೀನು ಕಳೆದುಕೊಂಡಾತನ ಹೆಂಡತಿಯನ್ನು ಪರ್ಯಾಯದಲ್ಲಿ ಮನೆ ಕೆಲಸದ ಗುಲಾಮಳನ್ನಾಗಿಸುವ ತಂತ್ರವಿದಾದ್ದರಿಂದ ಆಕ್ರಮಣ. ಬಡವನಾಗಿದ್ದರೂ, ಸ್ವಾವಲಂಬಿಯಾಗಿದ್ದ, ಸಂತೃಪ್ತನಾಗಿದ್ದ, ಗೌರವಾನ್ವಿತ ಉದ್ಯೋಗಿಯಾಗಿದ್ದ ರೈತನನ್ನು ಇನ್ನಷ್ಟು ಬಡವನನ್ನಾಗಿಯೂ, ಕನಿಷ್ಠನನ್ನಾಗಿಯೂ, ಕೊಳಕನನ್ನಾಗಿಯೂ ರೂಪಿಸುವ ಯೋಜನೆಯಾದ್ದರಿಂದ ಆಕ್ರಮಣ.

ಇದು ಪರಿಸರ ನಾಶದ ಪ್ರಾರಂಭ. ಪ್ರಕೃತಿಯ ಭಾಗವಾದ ರೈತನನ್ನು ಕಟ್ಟಡದ ಕೂಲಿಯಾಗಿ ಬದಲಾಯಿಸುವಲ್ಲಿಂದ ಪ್ರಾರಂಭ. ಸಮಾಜ ಸ್ವಾಸ್ಥ್ಯ ಹರಣದಿಂದ ಪ್ರಾರಂಭ. ಪೇಟೆಗೆ ಬಂದ ಎಲ್ಲರಿಗೂ ಭದ್ರವಾದ ಉದ್ಯೋಗ ಸಿಗುವುದಿಲ್ಲ. ಕೂಲಿನಾಲಿಯಿಂದ ಜೀವನಕ್ಕೆ ಸಾಕಾಗುವುದಿಲ್ಲ. ಆಗ ಕೆಲವರು ರಸ್ತೆ ಬದಿ ವ್ಯಾಪಾರಿಯಾಗುತ್ತಾರೆ. ಇಲ್ಲಿ ಹೊಸ ಸಮಸ್ಯೆ ಎದುರಾಗುತ್ತದೆ. ಪೊಲೀಸರಿಂದಲೋ, ಸಂಬಂಧಿತ ಅಧಿಕಾರಿಗಳಿಂದಲೋ, ಕಿರುಕುಳ ಶುರುವಾಗುತ್ತದೆ. ಒಕ್ಕಲೆಬ್ಬಿಸುವ ಪ್ರಯತ್ನ ನಡೆಯುತ್ತದೆ. ಆಗ ರಕ್ಷಣೆಗಾಗಿ ಭೂಗತ ರೌಡಿ ವ್ಯವಸ್ಥೆಗೆ ಶರಣಾಗಬೇಕಾಗುತ್ತದೆ. ಕೊಳಚೆ ಪ್ರದೇಶದ ವಿವಿಧ ಒತ್ತಡಗಳ ಪರಿಣಾಮವಾಗಿ ಈ ಜನ ಭಿಕ್ಷುಕರಾಗಿಯೋ, ಭಕ್ಷಕರಾಗಿಯೋ ಅಥವಾ ಎರಡೂ ಆಗಿಯೋ ಬದಲಾಗುತ್ತಾರೆ. ಆದ್ದರಿಂದ ಪೇಟೆಯನ್ನು ಹಿಗ್ಗಿಸುವಾಗ ಪ.ಆ.ಅ. ನಡೆಸುವಾಗ ಎಷ್ಟು ಜನ ನಿರ್ವಸತಿಕರಾಗುತ್ತಾರೆ? ಎಷ್ಟು ಜನ ಪೇಟೆಗೆ ತಳ್ಳಲ್ಪಡುತ್ತಾರೆ? ಈಗಾಗಲೇ ಜಗ್ಗಲ್ಪಟ್ಟ ನಾಗರಿಕ ಸೌಲಭ್ಯಗಳ ಸ್ಥಿತಿ ಮುಂದೇನು? ಆರೋಗ್ಯದ ಸ್ಥಿತಿ ಹೇಗೆ? ಕಾನೂನು ಮತ್ತು ಕ್ರೌರ್ಯದ ಮಟ್ಟ ಎಷ್ಟು? ಎಂಬುದನ್ನು ಅಧ್ಯಯನ ಮಾಡಬೇಕು.

ಕೇವಲ ಪೊಲೀಸರ ಸಂಖ್ಯೆಯನ್ನು ಹೆಚ್ಚಿಸುವುದರಿಂದ ಶಾಂತಿ ನೆಲೆಸುವುದಿಲ್ಲ. ಎಲ್ಲ ಅಪರಾಧಗಳೂ ಸಾಮಾಜಿಕ ಆರ್ಥಿಕ ಅಸಮಾನತೆಗಳ ಸಂತಾನವಾಗಿರುವುದರಿಂದ, ನಾಗಾಲೋಟದ ನಗರ ಪರಿಣಾಮವಾಗಿರುವುದರಿಂದ, ಪ.ಆ.ಅ.ದಲ್ಲಿ ಸಾಮಾಜಿಕ ಆಘಾತಗಳು ಮೊದಲ ಗಮನ ಪಡೆಯಬೇಕು.

ಪೇಟೆ ತನ್ನ ನೀರಿಗಾಗಿ, ಆಹಾರಕ್ಕಾಗಿ, ಇಂಧನಕ್ಕಾಗಿ ಹೊರಗಿನ ಪರಿಸರವನ್ನು ಅವಲಂಬಿಸಬೇಕಾಗುತ್ತದೆ. ಪೇಟೆ ನಗರವಾಗಿ ಬೆಳೆದಂತೆ ಅವಲಂಬನೆಯ ಗಾತ್ರ, ದೂರ ಹೆಚ್ಚುತ್ತಾ ಹೋಗುತ್ತದೆ. ಎಲ್ಲವೂ ದೂರದಿಂದ ಇಂಧನ ವೆಚ್ಚದಿಂದ ಬರಬೇಕಾದುದರಿಂದ, ಸಂಗ್ರಹಣೆಯು ಅನಿವಾರ್ಯವಾಗುವುದರಿಂದ ಎಲ್ಲದರ ಬೆಲೆಯೂ ಏರುತ್ತಾ ಹೋಗುವುದು. ನಿಗದಿತ ವರಮಾನಕ್ಕೆ ಖರೀದಿ ಸಾಮರ್ಥ್ಯ ಇಳಿಯುತ್ತಾ ಹೋಗುವುದು. ಪರಿಣಾಮವಾಗಿ ಆತ್ಮೀಯ ಜೀವನ ಮಟ್ಟ ಕುಸಿಯುವುದು.

ಕಟ್ಟಡವಿಲ್ಲದೆ ಪೇಟೆ ಇಲ್ಲ. ಇಂಥಾ ಕಟ್ಟಡಗಳಿಗಾಗಿ ಅವೆಷ್ಟು ಸಾಮಾನುಗಳು, ಜನರು ಪೇಟೆಗೆ ಎಲ್ಲೆಲ್ಲಿಂದಲೋ ಹರಿದು ಬರಬೇಕು. ಇಂಥಾ ಹರಿವಿನಲ್ಲಿ ಕೊಚ್ಚಿ ಹೋಗುವ ಪರಿಸರ ಅಗಾಧ. ಇಟ್ಟಿಗೆಯೊಂದನ್ನೇ ಊಹಿಸಿ: ಇದಕ್ಕೆ ಎಷ್ಟೊಂದು ಕೆಂಧೂಳು ಹಾರಬೇಕು! ಆಳ ಅಗೆಯಬೇಕು! ಮತ್ತೆ ಬೇಯಿಸಲು ಹೊಗೆ ಎಬ್ಬಿಸಬೇಕು! ಸುತ್ತ ಮುತ್ತಣ ಮರಗಳನ್ನೆಲ್ಲಾ ತರಿದು ಬೆಂಕಿಗೆ ದಬ್ಬಬೇಕು!

ಇಂಥಾ ಇಟ್ಟಿಗೆಯ ಜಾಗಗಳು ಪ್ರಾರಂಭದಲ್ಲಿ ಪೇಟೆಯಿಂದ ಹೊರಗಿರುತ್ತವೆ. ಬರಬರುತ್ತಾ ಪೇಟೆ (ಅ) ಪ್ರಬುದ್ಧವಾಗುತ್ತಾ ಈ ಜಾಗಗಳೆಲ್ಲ ಪೇಟೆಯೊಳಗೇ ಸೇರಿಬಿಡುತ್ತವೆ. ಇದೇ ರೀತಿ ಪೇಟೆಯ ಹೊಲಸನ್ನು ಸುರಿಯುವ ಸ್ಥಳ, ಒಳಚರಂಡಿ ನೀರನ್ನು ಶುದ್ಧೀಕರಿಸುವ ಸ್ಥಳ ಎಲ್ಲವೂ ಪೇಟೆಯ ಮಧ್ಯದ ಆಕರ್ಷಣೆಗಳಾಗಿಬಿಡುತ್ತವೆ.

ಪೇಟೆಗಳ ಅಭಿವೃದ್ಧಿಗೂ ಕೊಳಗೇರಿಗಳ ವಿಸ್ತರಣೆಗೂ ಅವಿನಾ ಸಂಬಂಧ. ಹಳೆಯ ಕಟ್ಟಡಗಳ ಜಾಗದಲ್ಲಿ ಹೊಸ ಪಂಚತಾರ ಕಟ್ಟಡಗಳು ಏಳುವಾಗ, ಪೇಟೆ ಅಭಿವೃದ್ಧಿಯಾಗುತ್ತದೆ. ನೀರು ಎತ್ತರದಿಂದ ತಗ್ಗಿಗೆ ಹರಿಯುತ್ತದೆಂಬ ವಿಜ್ಞಾನವನ್ನು ಮರೆಯಲಾಗುತ್ತದೆ. ಕೆಡಹಿದ ಹಳೆಯುಳಿಕೆಗಳಿಂದ ಪೇಟೆ ಮಧ್ಯದ ಹಳ್ಳಗಳನ್ನು ತುಂಬಲಾಗುತ್ತದೆ. ಇದು ತನಕ ಸ್ವಾಭಾವಿಕ ಜಲ ಹರಿವನ್ನು ನಿರ್ವಹಿಸುತ್ತಿದ್ದ ಹಳ್ಳಗಳೆಲ್ಲಾ ಮಟ್ಟವಾಗುತ್ತಿದ್ದಂತೆ, ಪೇಟೆಯ ಅಂತರ್ಜಲ ಮಟ್ಟವೇ ಏರುತ್ತದೆ. ಪೇಟೆಯ ಕೊಳಕು ಸೇರುತ್ತದೆ. ಮಲೇರಿಯಾದ ತವರಾಗುತ್ತದೆ. ಕುಡಿಯುವ ನೀರು ರೋಗಾಣುಯುಕ್ತವಾಗುತ್ತದೆ. ಎತ್ತೆತ್ತಲೂ ಎಸೆದ ಹತ್ತಾರು ವಿಷ ವಸ್ತುಗಳು, ತಮ್ಮ ಕೈಯನ್ನು ಅಂತರ್ಜಲದ ವಿಸ್ತಾರಕ್ಕೆ ಚಾಚುತ್ತವೆ.

ಜವಾಬ್ದಾರಿಯುತ ಯೋಜನೆಗಳಿಂದ, ದೂರ ದೃಷ್ಟಿಯ ಚಿಂತನೆಗಳಿಂದ ಈ ಸಮಸ್ಯೆಗಳಿಗೆ ಒಂದಷ್ಟು

ಪರಿಹಾರ ಕೊಡಬಹುದಾದರೂ ಪೇಟೆಯ ಅಗಲಕ್ಕಿಂತ, ಕಟ್ಟಡಗಳ ಎತ್ತರಕ್ಕಿಂತ ಮಿಗಿಲಾಗಿ ಬೆಳೆದಿರುವ ಸ್ವಾರ್ಥ ರಾಜಕಾರಣಿಗಳ, ವಂಚಕ ಅಧಿಕಾರಿಗಳ, ಲಾಭಬಡುಕ ಉದ್ಯಮಿಗಳ, ಕಬಂಧ ಬಾಹುಗಳನ್ನು ಕತ್ತರಿಸುವವರು ಯಾರು?

ನಮ್ಮದೆಲ್ಲವೂ ಇಂದು ಉದ್ರೇಕಾತ್ಮಕ ಚಿಂತನೆಗಳು. ರಸ್ತೆ ಸಾಕಾಗುವುದಿಲ್ಲ ಎಂದರೆ ಅಗಲ ಮಾಡುವ ಯೋಜನೆಗಳು. ಇದರಿಂದ ಸಮಸ್ಯೆ ಇನ್ನಷ್ಟು ಬಿಗಡಾಯಿಸುತ್ತದೆ. ರಸ್ತೆ ಅಗಲ ಮಾಡಬೇಕಾದರೆ ಸಾರ್ವಜನಿಕ ಆಸ್ತಿಯನ್ನು ಮುಟ್ಟುಗೋಲು ಹಾಕಬೇಕು. ಮರ ಕಡಿಯಬೇಕು. ಪಾದಚಾರಿಗಳ ದಾರಿಯನ್ನು ನುಂಗಬೇಕು. ಇದರ ಬದಲು ಸಾರ್ವಜನಿಕ ಸಂಚಾರಿ ವ್ಯವಸ್ಥೆಯನ್ನು ಬಲಗೊಳಿಸಿ, ವ್ಯವಸ್ಥಿತಗೊಳಿಸಿ, ವೈಯಕ್ತಿಕ ವಾಹನಗಳ ಹೊರೆಯನ್ನು ತಗ್ಗಿಸಿದರೆ, ಎಷ್ಟೊಂದು ಚಂದ, ಎಷ್ಟೊಂದು ಅನುಕೂಲ, ಎಷ್ಟೊಂದು ಸರಳ, ಎಷ್ಟೊಂದು ಅಗ್ಗ.

ಮಾರ್ಗ ಅಗಲ ಮಾಡಲು ಬೀಳಿಸುವ ಮರಗಳ ಬಗ್ಗೆ ಸ್ವಲ್ಪ ಗಮನಹರಿಸಿ. ಅವು ನಮಗಾಗಿ ಬಿಟ್ಟುಕೊಡುವ ಆಮ್ಲಜನಕದ ಕುರಿತು ಸ್ವಲ್ಪ ಯೋಚಿಸಿ. ಮೊದಲೇ ಗಾಳಿಗೆ ತತ್ವಾರವಾಗಿರುವ ಪೇಟೆಯ ಸಮಸ್ಯೆಗೆ ಇನ್ನೊಂದು ಏಟು. ಈ ಏಟು ಇಷ್ಟಕ್ಕೇ ನಿಲ್ಲುವುದಿಲ್ಲ. ಮಾರ್ಗ ಅಗಲ ಮಾಡಿದ, ಸಂಚಾರ ಸುಗಮಗೊಳಿಸಿದ ಸಂತಸ ಹೆಚ್ಚು ಸಮಯ ಉಳಿಯುವುದಿಲ್ಲ. ಅಗಲಗೊಂಡ ರಸ್ತೆ ತುಂಬುವಷ್ಟು ವಾಹನಗಳು ಹೊಸ ಸೃಷ್ಟಿಯಾಗುತ್ತವೆ. ಜೀವವಾಯುವಿಲ್ಲದ ಪರಿಸರಕ್ಕೆ ಮತ್ತೆ ಮತ್ತೆ ವಿಷವಾಯುವನ್ನು ಸೇರಿಸುತ್ತವೆ. ಪರಿಸರ ಸ್ನೇಹಿತರಾದ ಪಾದಚಾರಿಗಳು, ಸೈಕಲ್‌ವಾಲರು ನಡೆಯಲಾರದ, ನಡೆಸಲಾರದ ಸ್ಥಿತಿ ತಲೆದೋರುತ್ತದೆ. ಅವರೆಲ್ಲ ಪಳೆಯುಳಿಕೆ ಇಂಧನದ ವಶರಾಗುವಂತೆ ಸಂದರ್ಭದ ಒತ್ತಡ ಮೂಡುತ್ತದೆ. ವಿಜ್ಞಾನ ಎಷ್ಟು ಮುಂದುವರಿದರೂ ವಾಹನಗಳನ್ನು ನಿಷ್ಕೃಷ್ಟ, ನಿರ್ದುಷ್ಟ ಮಾಲಿನ್ಯ ಮಿತಿಯೊಳಗೆ ಇಟ್ಟರೂ ಒಟ್ಟಾರೆ ಮುಗಿಯುವ ಪೆಟ್ರೋಲಿಗೂ, ಮಾಲಿನ್ಯಕ್ಕೂ ನೇರ ಸಂಬಂಧ ಇದ್ದೇ ಇರುತ್ತದೆ. ಹೆಚ್ಚು ವಾಹನ - ಹೆಚ್ಚು ಇಂಧನ - ಹೆಚ್ಚು ಮಾಲಿನ್ಯ, ಎಂಬ ಅಂಶವನ್ನು ಗಮನಿಸಿ ಪ.ಆ.ಅ. ನಡೆಸಬೇಕು. ವಾಹನಗಳ ದುರಸ್ತಿಗೆ, ರಸ್ತೆಗಳ ರಿಪೇರಿಗೆ, ರಸ್ತೆಗಳ ವಿಸ್ತರಣೆಗೆ ಕೊಡುವುದಕ್ಕಿಂತ ಹೆಚ್ಚಿನ ಗಮನವನ್ನು ವೈಯಕ್ತಿಕ ವಾಹನಗಳು ಕಡಿಮೆಯಾಗುವೆಡೆಗೆ, ಸಾರ್ವಜನಿಕ ಸಾಗಾಟವನ್ನು ಬಲಗೊಳಿಸುವೆಡೆಗೆ ಕೊಡಬೇಕು.

ಮುಂಬರುವ ವರ್ಷಗಳಲ್ಲಿ, ಬೆಳೆಯುತ್ತಿರುವ ಯುವ ಜನತೆ ಹೆಚ್ಚು ಹೆಚ್ಚಾಗಿ ಪೇಟೆಗಳಿಗೆ ವಲಸೆ ಬರಲಿದ್ದಾರೆ. ಪೇಟೆಯ ಸೆಳೆತವನ್ನು, ಪೇಟೆಯ ವಿಸ್ತರಣೆಯನ್ನು ಮೌಲ್ಯಾಧಾರಿತವಾಗಿ ನಿಲ್ಲಿಸದಿದ್ದರೆ, ಬದಲಾಯಿಸದಿದ್ದರೆ, ಪೇಟೆಗಳು ಬಹುಮಂದಿಗೆ ಜೀವಂತ ನರಕವಾಗುವ ದಿನ ದೂರವಿಲ್ಲ. ಸಾಮಾಜಿಕ ಅವನತಿಯ ಸ್ಥಿತಿ ದೂರವಿಲ್ಲ.

ಜನರ ರಾಜಕೀಯ ಶಕ್ತಿಯು ಭೂಗತ ಶಕ್ತಿಗಳ ಪಾಲಾಗುತ್ತಿದೆ. ಇದೇ ರೀತಿ ನಾವು ಪೇಟೆಗಳನ್ನು ಬೆಳೆಸುತ್ತಾ ಹೋದರೆ ಬಹಳ ಬೇಗ ನ್ಯಾಯವು ನಮ್ಮ ಕೈಮೀರಿ ಹೋಗಲಿದೆ. ಎಂದೂ (ಸರಿಪಡಿಸಲಾಗದ) ಏಳಲಾಗದ ಹಳ್ಳಕ್ಕೆ ನಾವು ಬೀಳಲಿದ್ದೇವೆ. ಅದೃಶ್ಯ ಶಕ್ತಿಯ ಇಚ್ಛಾನುವರ್ತಿಗಳಾಗಿ ಜನ ಅನೈಚ್ಛಿಕ, ಅನೈತಿಕ ನೃತ್ಯ ಮಾಡಬೇಕಾಗುತ್ತದೆ.

ಟೀಕೆ ಮಾಡುವವರು ಮಾಡುತ್ತಿರಲಿ, ಆದರೆ ಕೊನೆಯಲ್ಲಿ ನಿಲ್ಲುವುದು ಪ್ರಕೃತಿ ಧರ್ಮ ಮಾತ್ರ. ಸಮೃದ್ಧ ಪ್ರಕೃತಿಯನ್ನು, ಸ್ವಾವಲಂಬಿ ಹಳ್ಳಿಗಳನ್ನು ನಾಶಮಾಡಿ ಬೆಳೆಸುವ ಕೈಗಾರಿಕೆ ಆಧಾರಿತ ನಗರೀಕರಣದ ಪರಿಣಾಮ ಘೋರ ಗಂಭೀರ, ಎಂದೂ ಸರಿಪಡಿಸಲಾಗದ, ಸಹಿಸಲಾಗದ ಪ್ರಹಾರ. ಸಾಸಿವೆಯಷ್ಟು ಸುಖಕ್ಕಾಗಿ ಬೆಟ್ಟದಷ್ಟು ಕಷ್ಟಗಳನ್ನು ಸಂಗ್ರಹಿಸುವ ಮಾನವನ ಅವಿವೇಕಕ್ಕೆ, ನಗರೀಕರಣದ ಹುಚ್ಚಿಗೆ, ಪರಿಹರ ಆಘಾತದ ಅಂದಾಜನ್ನು ಪ್ರಚಾರಗೊಳಿಸುವ ಮೂಲಕ ತಡೆ ಒಡ್ಡಬೇಕು. ಸಾರ್ವಜನಿಕ ಧ್ವನಿ, ನೊಂದವರ ಧ್ವನಿ ಅನುರಣಿಸಬೇಕು. ಸಮಾನತೆಯ ಆಧಾರದಲ್ಲಿ ಯೋಜನೆಗಳು ಇರಬೇಕು.

*(ಲೇಖಕರು ಜರ್ನಲ್ ಆಫ್ ಕನ್‌ಸ್ಟ್ರಕ್ಷನ್ ಮ್ಯಾನೇಜ್‌ಮೆಂಟ್‌ನ ಅಕ್ಟೋಬರ್ - ಡಿಸೆಂಬರ್ ೧೯೯೯ರ ಸಂಚಿಕೆಯಲ್ಲಿ ಪ್ರಕಟಿಸಿದ್ದ ಲೇಖನದ ಭಾವಾನುವಾದ ಮಾಡಿಕೊಟ್ಟಿರುವವರು ಮೈಸೂರಿನ ಶ್ರೀ ಎ. ಪಿ. ಚಂದ್ರಶೇಖರ ಅವರು.)*

**ಮೇಜರ್ ಜನರಲ್ ಎಸ್. ಜಿ. ವೊಂಬತ್ಕೆರೆ**
೪೭೫, ೭ನೇ ಮುಖ್ಯ ರಸ್ತೆ ವಿಜಯನಗರ ೧ನೇ ಹಂತ
ಮೈಸೂರು - ೫೭೦ ೦೧೭




## 'ಹೊಸತು' ವರ್ಷದ ಸಭೆ

ಸೆಪ್ಟೆಂಬರ್ ೩ರಂದು ಬೆಂಗಳೂರಿನಲ್ಲಿ ನಡೆದ ವರ್ಷದ ಸಭೆಯಲ್ಲಿ 'ಹೊಸತು' ಓದುಗರು, ಲೇಖಕರು, ಏಜೆಂಟರು, ಸಂಪಾದಕ ಬಳಗದ ಸದಸ್ಯರು ಭಾಗವಹಿಸಿದ್ದರು. ನವಕರ್ನಾಟಕದ ಶ್ರೀ ಆರ್. ಎಸ್. ರಾಜಾರಾಮ್ ಪತ್ರಿಕೆಯ ಉದ್ದೇಶವನ್ನು ವಿವರಿಸಿದರು. ಪ್ರಾರಂಭದ ಸಂಚಿಕೆಯಿಂದ ಇಲ್ಲಿಯವರೆಗೆ ಪತ್ರಿಕೆಯ ನಿಲುವಿನ ಬಗ್ಗೆ ಓದುಗರಿಂದ ಬಂದ ಪ್ರತಿಕ್ರಿಯೆಗಳು, ಕಟು ಟೀಕೆಗಳು ಹಾಗೂ ಮೆಚ್ಚುಗೆಗಳ ಕುರಿತು ಸಂಪಾದಕರು ವಿವರಿಸಿದರು. ಅನಂತರ ಮಾತನಾಡಿದ ಹಿತೈಷಿಗಳು ಇಂಥ ಪತ್ರಿಕೆಯೊಂದರ ಅಗತ್ಯ ಇದ್ದಿತು, 'ಹೊಸತು' ಅದನ್ನು ಪೂರೈಸಿದೆ ಎಂಬುದನ್ನು ಒತ್ತಿ ಹೇಳಿ, ಇದು ಹೆಚ್ಚು ಜನರಿಗೆ ತಲುಪುವಂತೆ ಮಾಡಲು ಅಗತ್ಯವಾದ ಸಲಹೆಗಳನ್ನು ನೀಡಿದರು. ಸಂಪಾದಕರು ಸೂಕ್ತ ಸಲಹೆಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವುದಾಗಿ ಹೇಳಿದರು. ೨೦೦೧ನೇ ಜನವರಿ ತಿಂಗಳು ಪ್ರಕಟವಾಗಲಿರುವ 'ಹೊಸತು' ವಿಶೇಷ ಸಂಚಿಕೆಗೆ ಎಲ್ಲರಿಂದ ಸಹಕಾರ ಕೋರಿದರು.



## ರಾಷ್ಟ್ರೀಯ ಪುರಸ್ಕಾರ



ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ಹಿಂದಿಗೆ ಅನುವಾದಿಸಿದುದಕ್ಕಾಗಿ ಡಾ|| ಪ್ರಧಾನ್ ಗುರುದತ್ತ ಅವರಿಗೆ ಭಾರತ ಸರ್ಕಾರದ ಕೇಂದ್ರೀಯ ಹಿಂದಿ ನಿರ್ದೇಶನಾಲಯ ೧೯೯೯ - ೨೦೦೦ ನೇ ಸಾಲಿನ ರಾಷ್ಟ್ರೀಯ ಪ್ರಶಸ್ತಿ ನೀಡಿ ಗೌರವಿಸಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಡಾ|| ಗುರುದತ್ತರು ಕನ್ನಡ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ಸುಮಾರು ೮೦ರಷ್ಟು ಕೃತಿಗಳನ್ನು ರಚಿಸಿದ್ದಾರೆ. ಹಿಂದಿಯಿಂದ ಕನ್ನಡಕ್ಕೆ ಹಲವು ಅಮೂಲ್ಯ ಕೃತಿಗಳನ್ನು ಅನುವಾದಿಸಿದ್ದಾರೆ. **ನವಕರ್ನಾಟಕ ಸಾಹಿತ್ಯ ಸಂಪದ ಮಾಲಿಕೆಯ** ಸಂಪಾದಕರಲ್ಲೊಬ್ಬರು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕನ್ನಡ ಸಾಹಿತಿಗಳ ಬದುಕು ಬರಹ ಕುರಿತ ಕೃತಿಗಳು ಈ ಮಾಲಿಕೆಯಲ್ಲಿ ಪ್ರಕಟವಾಗಲಿವೆ.

## ಪ್ರಕಟಣಾ ಕ್ಷೇತ್ರಕ್ಕೆ ನೀಡಿದ ಕೊಡುಗೆಗಾಗಿ ಪುರಸ್ಕಾರ

ನವದೆಹಲಿಯಲ್ಲಿರುವ ಅಖಿಲ ಭಾರತ ಪ್ರಕಾಶಕರ ಒಕ್ಕೂಟವು ನವಕರ್ನಾಟಕ ಪ್ರಕಾಶನದ ಹಿರಿಯ ಸಂಪಾದಕರಾದ ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್ ಅವರಿಗೆ ಪುಸ್ತಕ ಪ್ರಕಟಣೆಗೆ ಸಂಬಂಧಿಸಿದಂತೆ ಅವರ ಸುದೀರ್ಘ ಸೇವೆಯನ್ನು ಗಣನೆಗೆ ತೆಗೆದುಕೊಂಡು ಪುರಸ್ಕಾರ ನೀಡಿ ಸನ್ಮಾನಿಸಿದೆ. ತೆರೆಮರೆಯಲ್ಲಿದ್ದುಕೊಂಡೇ ಪುಸ್ತಕ ಪ್ರಕಾಶನ ಮತ್ತು ವಿನ್ಯಾಸದಲ್ಲಿ ನೆರವಾಗುವ ವ್ಯಕ್ತಿಗಳಿಗೆ ನೀಡುವ ಈ ಪ್ರಶಸ್ತಿಯನ್ನು ದಿನಾಂಕ ೧೯-೮-೨೦೦೦ದಂದು ನವದೆಹಲಿಯಲ್ಲಿ ನಡೆದ ಸಮಾರಂಭದಲ್ಲಿ ಡಾ|| ಕರಣ್ ಸಿಂಗ್ ಅವರು ಪ್ರದಾನ ಮಾಡಿದರು.

'ಪ್ರಜಾವಾಣಿ' ಪತ್ರಿಕೆಯ ಪ್ರಾರಂಭದ ದಿನಗಳಲ್ಲಿ 'ವಿಶ್ವದರ್ಪಣ' ಅಂಕಣ ಬರೆಯುತ್ತಿದ್ದ ಇವರು ವಿದ್ಯಾರ್ಥಿ ದೆಸೆಯಿಂದಲೇ ಪ್ರಗತಿಪರ ವಿಚಾರಗಳ ಒಲವಿನವರಾಗಿದ್ದರು. ಶಿಕ್ಷಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಪ್ರಾಯಶಃ ಕನ್ನಡದಲ್ಲಿ ಅನುವಾದ ಸಾಹಿತ್ಯಕ್ಕೆ ಇವರು ನೀಡಿರುವಷ್ಟು ಕೊಡುಗೆಯನ್ನು ಬೇರೆ ಯಾರೂ ನೀಡಿಲ್ಲವೆನ್ನಬಹುದು. ಸುಮಾರು ೨೦ ಸಾವಿರ ಪುಟಗಳಷ್ಟು ರಷ್ಯನ್ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಪೈಕಿ ವಿಜ್ಞಾನ, ತತ್ವಶಾಸ್ತ್ರ, ರಾಜಕೀಯ, ಇತಿಹಾಸ, ಸಾಹಿತ್ಯ ಮತ್ತು ಮಕ್ಕಳ ಪುಸ್ತಕಗಳೂ ಸೇರುತ್ತವೆ.

ಪ್ರಸ್ತುತ, ನವಕರ್ನಾಟಕ ಪ್ರಕಾಶನದ ಸಂಪಾದಕ ಬಳಗದಲ್ಲಿರುವ ಇವರು 'ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ'ದ ಹಾಗೂ ನವಕರ್ನಾಟಕ 'ವಿಜ್ಞಾನ ಪದವಿವರಣ ಕೋಶ'ದ ಪ್ರಧಾನ ಸಂಪಾದಕರಲ್ಲೊಬ್ಬರು.



*ಡಾ|| ಕರಣ್ ಸಿಂಗ್‌ರಿಂದ ಪುರಸ್ಕಾರ ಸ್ವೀಕರಿಸುತ್ತಿದ್ದಾರೆ ಶ್ರೀ ಗೋಪಾಲಕೃಷ್ಣರಾವ್*

## ಪ್ರಾಮಾಣಿಕರು !

'ನಾಯಿಗಳಿವೆ ಎಚ್ಚರಿಕೆ !'
ಎನ್ನುವ ಫಲಕಗಳು
ಇರುವ ಕಡೆಗಳಲೆಲ್ಲಾ.....
ನಾಯಿಗಳು ಇರುವುದಿಲ್ಲ !
ಕೆಲವರು..... ಪ್ರಾಮಾಣಿಕತೆಯನು
ಮೆರೆಯಲೆಂದು.....
ಹಾಗೆ ಪ್ರದರ್ಶಿಸಿರುತ್ತಾರೆ !




ಕ. ಬ. ವೀರಣ್ಣ ಕಣ್ಣಾಗಾಲ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ರಾಜರಾಜೇಶ್ವರಿ ನಗರ
ಬೆಂಗಳೂರು - ೫೬೦ ೦೩೯

# ಸುಳ್ಳು

ಸುಳ್ಳು ಹೇಳುವುದು ಅಪರಾಧ, ಮಹಾಪಾಪ. ಆದರೆ ಕೆಲವು ಸಲ ಸುಳ್ಳು ಹೇಳಲೇಬೇಕಾದ ಸಂದರ್ಭ ಜೀವನದಲ್ಲಿ ಎಲ್ಲರಿಗೂ ಬರುವುದುಂಟು. ಆ ಸಮಯದಲ್ಲಿ ಸುಳ್ಳು ಹೇಳದೆ ಬೇರೆ ಉಪಾಯವೇ ಇರುವುದಿಲ್ಲ.

ಒಂದು ಮಧ್ಯಾಹ್ನ ಕೈಗಡಿಯಾರ ಮಾರುವ ಪ್ರತಿನಿಧಿ ಬಂದಿದ್ದ. ''ಒಂದು ಕೈಗಡಿಯಾರ ಕೊಂಡರೆ ಒಂದು ಉಚಿತ'' ಎಂದ. ಉಚಿತ ಎಂಬ ಮಾಯಾಜಾಲದ ಒಳಗೆ ನಾನೂ ಜಾರಿಬಿದ್ದೆ! ಕೈಗಡಿಯಾರ ಒಳ್ಳೆಯದಿತ್ತು. ಸುಮಾರು ಹೊತ್ತು ಕೊಳ್ಳುವುದೇ ಬೇಡವೇ ಎಂಬ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿಬಿದ್ದೆ. ಕೆಟ್ಟ ಧೈರ್ಯ ಮಾಡಿ ಕೊಳ್ಳುವುದೆಂಬ ತೀರ್ಮಾನಕ್ಕೆ ಬಂದೆ. ನನ್ನ ಅಮ್ಮನ ಕೈಗಡಿಯಾರ ಹಳೆಯದಾಗಿ ರಿಪೇರಿ ಮಾಡಲಾಗದಷ್ಟು ಹಾಳಾಗಿತ್ತು. ಒಂದು ಕೈಗಡಿಯಾರ ಅವರಿಗೆ, ಇನ್ನೊಂದು ಮನೆಯವರಿಗೆ ಇರಲಿ ಎಂದು ಮುಂದಿನ ಭವಿಷ್ಯಕ್ಕೆ ಉಪಾಯ ಮಾಡಿದೆ. ಪ್ರತಿನಿಧಿ ಕೈಗಡಿಯಾರವನ್ನು ಅವನಿಂದಾಗುವಷ್ಟು ಹೊಗಳಿದ. ಇಂಥ ಅವಕಾಶ ಈಗ ಬಿಟ್ಟರೆ ಇನ್ನು ಮುಂದಕ್ಕೆ ಸಿಕ್ಕೀತೇ ? ಎಂದು ಹೆಮ್ಮೆಯಿಂದ ಕೊಂಡುಕೊಂಡೇಬಿಟ್ಟೆ. ಗ್ಯಾರೆಂಟಿ ಕಾರ್ಡು ಕೊಟ್ಟ ಕಾರಣ ನಾನೇನೂ ಬೇಸ್ತು ಬೀಳಲಿಲ್ಲ ಎಂಬ ಧೈರ್ಯ ಮೂಡಿತು. ನಾನು ಹೆಡ್ಡಳಾಗಬಾರದೆಂದು ಮುಂಜಾಗ್ರತೆಯಿಂದ ಅವರ ದೂರವಾಣಿ ಸಂಖ್ಯೆಯನ್ನೂ ಕೇಳಿ ಬರೆದುಕೊಂಡೆ. ಪ್ರತಿನಿಧಿಯೂ ಸರಸರನೆ ದೂರವಾಣಿ ಸಂಖ್ಯೆಯನ್ನು ಹೇಳಿದ. ಆದರಿಂದ ನನಗೆ ಇನ್ನೂ ಹೆಚ್ಚಿನ ಹುಮ್ಮಸ್ಸು ಬಂತು. ಇದು ಸರಿಯಾದ ಮಾಲೇ ಇರಬೇಕು ಎಂದು ಹೆಮ್ಮೆಪಟ್ಟೆ. ಆ ಕೈಗಡಿಯಾರ ಕೊಟ್ಟು ಪ್ರತಿನಿಧಿ ಗೇಟ್ ದಾಟಿದನೋ ಇಲ್ಲವೋ, ಇತ್ತ ಎರಡು ಕೈಗಡಿಯಾರಗಳಲ್ಲಿ ಒಂದು ಸಮಯ ಸರಿ ತೋರಿಸುತ್ತಿರಲಿಲ್ಲ. ಕೆಲವು ದಿನಗಳಲ್ಲಿ ಆ ಕೈಗಡಿಯಾರ ಕೈಕೊಟ್ಟೇ ಬಿಟ್ಟಿತು. ಪ್ರತಿನಿಧಿ ಕೊಟ್ಟ ದೂರವಾಣಿ ಸಂಖ್ಯೆಗೆ ದೂರು-ವಾಣಿಸಿದೆ. ಅತ್ತಲಿಂದ ''ಇದು ಸಾರ್ವಜನಿಕ ದೂರವಾಣಿ ಕೇಂದ್ರ'' ಎಂಬ ಕರೆ ಕೇಳಿದಾಗ ನಾನು ಬೇಸ್ತು ಬಿದ್ದಿರುವುದು ಅರಿವಾಯಿತು. ಆದರೂ ಇವರಿಗೆ ಬುದ್ಧಿ ಕಲಿಸಲೇಬೇಕು ಎಂದು ಪಣ ತೊಟ್ಟೆ. ಅಂಚೆ ಕಾರ್ಡಿನಲ್ಲಿ ಖಾರವಾಗಿ ಖಂಡಿಸಿ ಬರೆದು ಗ್ಯಾರೆಂಟಿ ಕಾರ್ಡಿನಲ್ಲಿ ಕೊಟ್ಟ ವಿಳಾಸ ಬರೆದು ಅಂಚೆಗೆ ಹಾಕಿ ಕೈ ಮುಗಿದು ನನ್ನ ಮಾನ ಕಾಪಾಡೆಂದು ಕೇಳಿಕೊಂಡೆ ! ಪ್ರತ್ಯುತ್ತರ ಬರಲಿಲ್ಲ. ನಾನು ಬರೆದ ಕಾರ್ಡೂ ವಾಪಾಸಾಗಲಿಲ್ಲ. ಸ್ವಲ್ಪ ದಿನ ಕಳೆದಾಗ ಒಂದು ಕಡೆ ಇದೇ ಕಂಪೆನಿಯ ಕೈ ಗಡಿಯಾರ ಮಾರುವ ಪ್ರತಿನಿಧಿ ಸಿಕ್ಕಿದಾಗ ನನ್ನ ಕೈಗಡಿಯಾರ ಹಾಳಾದದ್ದನ್ನು ಹೇಳಿ ಬೇರೆ ಬದಲಿಸಿಕೊಡಲು ಹೇಳಿದೆ. ಹಿಂದಿನ ಪ್ರತಿನಿಧಿ ಮೋಸ ಮಾಡಿದ್ದನ್ನು ಹೇಳಿದೆ. ಅವರು ''ಕೆಲವು ಜನ ಹೀಗೆ ಮೋಸ ಮಾಡುತ್ತಾರೆ, ನಿಮ್ಮ ವಿಳಾಸ ಕೊಡಿ, ನಾವು ನಿಮ್ಮ ಮನೆಗೆ ಬಂದು ಕೈಗಡಿಯಾರ ಬದಲಿಸಿ ಕೊಡುತ್ತೇವೆ'' ಎಂದು ಆಶ್ವಾಸನೆ ಕೊಟ್ಟರು (ಆ ಕ್ಷಣದಲ್ಲಿ ನನ್ನ ಬಳಿ ಕೆಟ್ಟುಹೋದ ಕೈಗಡಿಯಾರ ಇರಲಿಲ್ಲ, ಅದು ಮನೆಯಲ್ಲಿ ಬೆಚ್ಚಗೆ ಕುಳಿತಿತ್ತು). ಅವರ ಆಶ್ವಾಸನೆಯನ್ನು ನಂಬಿ ನಾನು ನಿಶ್ಚಿಂತೆಯಿಂದ ಮನೆಗೆ ಹೋಗಿ ಅವರ ದಾರಿ ಕಾಯುತ್ತಾ ಕುಳಿತೆ. ಎಷ್ಟು ಹೊತ್ತಾದರೂ ಅವರ ಪತ್ತೆ ಇಲ್ಲದಾಗ ಇನ್ನೊಮ್ಮೆ ನಾನು ಹಳ್ಳಕ್ಕೆ ಬಿದ್ದೆ. ಆ ಪ್ರತಿನಿಧಿ ಕಂಡಾಗ ನಾನು ಏನೂ ಹೇಳದೆ ಮೊದಲಿಗೆ ಮನೆಗೆ ಹೋಗಿ ಕೆಟ್ಟುಹೋದ ಕೈಗಡಿಯಾರವನ್ನು ತಂದು ಅವರಿಗೆ ತೋರಿಸಿ ಹೇಳಬೇಕಿತ್ತು. ಕಾಲ ಮಿಂಚಿತ್ತು. ಕೆಟ್ಟ ಮೇಲೆ ಬುದ್ಧಿ ಬಂದರೇನು ಉಪಯೋಗ ? ಆ ಕೈಗಡಿಯಾರ ಏನಾಗಿದೆ ಎಂದು ತಿಳಿಯುವ ಕುತೂಹಲದಿಂದ ನಾನು ಯಾವಾಗಲೂ ರಿಪೇರಿಗೆ ಕೊಡುವಲ್ಲಿಗೆ ಒಯ್ದು ಕೊಟ್ಟೆ. ಅವರು ಅದನ್ನು ನೋಡಿದ ಕೂಡಲೇ ''ಒಂದಕ್ಕೆ ಒಂದು ಉಚಿತ ಸ್ಕೀಂನಲ್ಲಿ ಕೊಂಡದ್ದಾ ?'' ಎಂದು ಕೇಳಿದರು. ಹೌದೆಂದು ಒಪ್ಪಿದೆ.

''ಅಲ್ಲಲ್ಲಾ ಕೊಳ್ಳಲೇಬಾರದು.''

''ಹೌದು, ಬರೀ ಮೋಸ, ಏನೋ ನಮ್ಮ ಅಮ್ಮ ಗೊತ್ತಾಗದೆ ಕೊಂಡುಕೊಂಡಿದ್ದಾರೆ,'' ಎಂದು ಸತ್ಯದ ತಲೆಗೆ ಹೊಡೆದಂತೆ ರೈಲು ಬಿಟ್ಟೆ. ನಾನೇ ಕೊಂಡು ಮೋಸ ಹೋದದ್ದು ಎಂದು ಹೇಳಿದರೆ ಎಂಥ ಅವಮಾನ ಅಲ್ಲವೆ ? ಅವರ ಎದುರು ನನ್ನ ಮರ್ಯಾದೆಯನ್ನು ಕಾಪಾಡಿಕೊಳ್ಳಲು ಸುಳ್ಳು ಹೇಳದೆ ಗತ್ಯಂತರವಿರಲಿಲ್ಲ. ಅವರೇನು ನನ್ನ ಅಮ್ಮನನ್ನು ಕಂಡು ''ನೀವು ಈ ಕೈಗಡಿಯಾರ ಕೊಂಡದ್ದು ಹೌದೇ ?'' ಎಂದು ಕೇಳುವ ಸಂದರ್ಭ ಬರಲು ಸಾಧ್ಯವಿಲ್ಲ ಎಂಬ ಧೈರ್ಯ ನನ್ನನ್ನು ಸುಳ್ಳು ಹೇಳಲು ಪ್ರೇರೇಪಿಸಿತು (ನನ್ನ ತಾಯಿ ಇರುವುದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ).

* * *

ನನ್ನ ಮಾವನ ಸ್ನೇಹಿತರ ಹೆಂಡತಿಗೆ ಒಮ್ಮೆ ಅಸೌಖ್ಯವಾಗಿತ್ತು. ಮಾವ ಅವರನ್ನು ನೋಡಬೇಕೆಂದರು. ಹಾಗೆ ನಾನು ಮಾವನನ್ನು ಕರೆದುಕೊಂಡು ಅವರ ಮನೆಗೆ ಹೋದೆ. ಅವರ ಮನೆಗೆ ನುಗ್ಗಿದ ಕ್ಷಣ ಮಾವ ''ನಿಮ್ಮನ್ನು ನೋಡಬೇಕೆಂದು ನನ್ನ ಸೊಸೆ ಹೇಳಿದಳು. ಹಾಗೇ ಬಂದೆವು,'' ಎಂದು ಒಂದು ಸುಳ್ಳು ಬಿಟ್ಟರು. ಮಾವನ ಮಾತು ಕೇಳಿದ ನಾನು ತಬ್ಬಿಬ್ಬಾಗಿ ಸಂಕೋಚಗೊಂಡು ಒಳಗೆ ಕುಳಿತಿದ್ದವಳು ಎದ್ದು ಹೊರಗೆ ಗೇಟಿನ ಬಳಿ ಬಂದು ನಿಂತೆ ! ಅವರನ್ನು ಹೋಗಿ ನೋಡುವಷ್ಟು ನನಗೆ ಸ್ನೇಹವಿರಲಿಲ್ಲ.

* * *

ನನ್ನ ಮದುವೆ ಆದ ಮೇಲೆ ನಾನು ಪಿ.ಯು.ಸಿ. ಪರೀಕ್ಷೆ ಬರೆದದ್ದು. ನಮ್ಮ ಮದುವೆ ಫೆಬ್ರವರಿ ತಿಂಗಳಲ್ಲಿ, ಪರೀಕ್ಷೆ ಏಪ್ರಿಲ್‌ನಲ್ಲಿ ಇದ್ದದ್ದು. ನನ್ನ ತವರುಮನೆಯಿಂದ ಪರೀಕ್ಷಾ ಕೇಂದ್ರಕ್ಕೆ ಒಂಭತ್ತು ಕಿ.ಮೀ. ದೂರ ಬಸ್ಸಲ್ಲಿ ಹೋಗಬೇಕಾಗಿತ್ತು. ನಾನು ಮದುವೆಗೆ ಮೊದಲು ಏನು ಉಡುಪು ಧರಿಸುತ್ತಿದ್ದೆನೋ ಅದೇ ಉಡುಪು ತೊಟ್ಟು, ಕರಿಮಣಿಸರ, ಕಾಲುಂಗುರ ತೆಗೆದಿಟ್ಟು ಪರೀಕ್ಷೆ ಬರೆಯಲು ಹೋಗುತ್ತಿದ್ದೆ. ನನಗೆ ಮದುವೆ ಆಗಿದೆಯೆಂದು ಪರೀಕ್ಷಾ ಕೊಠಡಿಯಲ್ಲಿ ಯಾರಿಗೂ ತಿಳಿಯುವುದು ಬೇಡವಾಗಿತ್ತು. ಒಂದು ದಿನ ಪರೀಕ್ಷೆಗೆ ಬರೆಯಲೆಂದು ಹೋಗುತ್ತಿರುವಾಗ ಬಸ್ಸಲ್ಲಿ ಪರಿಚಿತ ಮಹಿಳೆ ನನ್ನ ಪಕ್ಕ ಕುಳಿತರು. ''ನಿನ್ನ ಅಕ್ಕ ಸದ್ಯ ಊರಿಗೆ ಬಂದಿದ್ದಾಳ ?'' ಎಂದು ನನ್ನನ್ನು ಕೇಳಿದರು. ''ಇಲ್ಲ'' ಎಂಬ ಚುಟುಕು ಉತ್ತರ ಕೊಟ್ಟು ಸುಮ್ಮನಾದೆ. ಮುಂದೆ ಏನೂ ಪ್ರಶ್ನೆ ಕೇಳದಿರಲಿ ಎಂದು ಗಂಭೀರವಾಗಿ ಓದುವಂತೆ ನಟಿಸಿದೆ. ಆನಂತರ ಅವರು ನನ್ನನ್ನು ಮಾತನಾಡಿಸುವ ಸಾಹಸ ಮಾಡಲಿಲ್ಲ. ಆ ಮಹಿಳೆ ನನ್ನನ್ನು ನನ್ನ ತಂಗಿ ಎಂದು ತಿಳಿದು ಆ ಪ್ರಶ್ನೆ ಕೇಳಿದ್ದೆಂದು ಗೊತ್ತಾದರೂ ನಾನು ಸುಳ್ಳು ಹೇಳಲೇಬೇಕಾದ ಸಂದರ್ಭ ಒದಗಿತ್ತು. ಆಗ ಹಳ್ಳಿಯಲ್ಲಿ, ಮದುವೆ ಆದವರು ಸೀರೆ ಉಡದೆ ಬೇರೆ ಉಡುಪು ಧರಿಸಿದರೆ ಅದೇ ದೊಡ್ಡ ಸುದ್ದಿಯಾಗುತ್ತಿತ್ತು ! ನಾನು ಆವಾಗ ಸೀರೆ ಉಟ್ಟಿರಲಿಲ್ಲವಲ್ಲ ! ಸುಳ್ಳು ಹೇಳದೆ ಬೇರೆ ಉಪಾಯವೇ ಇರಲಿಲ್ಲ. ಮತ್ತೊಂದು ದಿನ ಅದೇ ಮಹಿಳೆ ನನ್ನ ದೊಡ್ಡಪ್ಪನಿಗೆ ಸಿಕ್ಕಿ ಅವರಿಂದ ನಿಜ ವಿಷಯ ಅವರಿಗೆ ಗೊತ್ತಾಯಿತು ! ಆನಂತರ ಅವರು ನನಗೆ ಇದುವರೆಗೂ ಊರಲ್ಲಿ ಕಾಣಲು ಸಿಕ್ಕದೆಯಿದ್ದದ್ದು ನನ್ನ ಅಜ್ಜಿ ಪುಣ್ಯವೆನ್ನಬಹುದು !

* * *

ಸಣ್ಣ ಮಕ್ಕಳು ಮಾತ್ರ ಸುಳ್ಳು ಹೇಳುವುದಿಲ್ಲವೆನ್ನಬಹುದು. ಮಕ್ಕಳಿಗೆ ಸುಳ್ಳು ಹೇಳಲು ಕಲಿಸುವುದೂ ದೊಡ್ಡವರೇ. ನಮ್ಮ ಮಾತನ್ನು ಆಲಿಸಿ ಆನಂತರ ಅದು ಕ್ರಮೇಣ ಸುಳ್ಳು ಹೇಳಲು ಕಲಿಯುತ್ತದೆ. ನನ್ನ ಅಣ್ಣನ ಮಗ ನಾಲ್ಕು ವರ್ಷದವನು ಚೆನ್ನಾಗಿ ರೈಲು ಬಿಡುತ್ತಾನೆ ! ನಿಜ ಹೇಳು ಎಂದು ಗದರಿಸಿದರೆ ಠಕ್ಕು ನಗೆ ನಕ್ಕು ನಿಜ ಹೇಳುತ್ತಾನೆ. ನಮ್ಮ ಬದುಕಿನಲ್ಲಿ ಸುಳ್ಳು ಒಂದು ಅವಿಭಾಜ್ಯ ಅಂಗವಾಗಿದೆ. ನಾವು ಬೆಳೆದಂತೆ ಸುಳ್ಳು ಹೇಳುವ ಪ್ರಮೇಯಗಳು ಹೆಚ್ಚಾಗುತ್ತಿವೆ. ಸುಳ್ಳು ಹೇಳದಿದ್ದರೆ ಅದರಿಂದ ನಾವು ತೊಂದರೆಗೊಳಗಾಗುತ್ತೇವೆ ಎಂಬ ಸಂದರ್ಭ ಬಂದಾಗ ಸುಳ್ಳು ಹೇಳುವುದೇ ಜಾಣರ ಲಕ್ಷಣ ಅಲ್ಲವೇ ? ನೀವೇನಂತೀರ?

**ರುಕ್ಮಿಣಿಮಾಲಾ**
೬೫, ಗುರಿಕಾರ ದೇವಣ್ಣ ರಸ್ತೆ
ಒಂದನೆಯ ಅಡ್ಡರಸ್ತೆ, ಮೈಸೂರು - ೫೭೦ ೦೦೪

*ಗುರು* : *ಲೋ ಗುಂಡ, ಸತ್ಯ ಮತ್ತು ನಂಬಿಕೆಗಳಿಗಿರುವ ಅಂತರವನ್ನು ಉದಾಹರಣೆ ಸಹಿತ ವಿವರಿಸು.*

*ಗುಂಡ* : *ಸತ್ಯ ಮತ್ತು ನಂಬಿಕೆಗಳ ಬಗ್ಗೆ ನೀವು ಒಂದು ಗಂಟೆ ಪಾಠ ಮಾಡಿದ್ದು ಸತ್ಯ ಸಾರ್. ಅದನ್ನು ನಾವೆಲ್ಲಾ ಅರ್ಥಮಾಡಿಕೊಂಡಿದ್ದೀವಿ ಅನ್ನೋದು ನಿಮ್ಮ ನಂಬಿಕೆ ಸಾರ್.*

- ಸಿದ್ದಗಂಗಮ್ಮ, ಹಂಪಿ

# ತಲೆಕೆಳಗಾದ ಚಮತ್ಕಾರ !

*ಡಚ್ ಕಲಾವಿದ ಪೆರ್ಬೀಕ್ ಬಿಡಿಸಿರುವ ಈ ಚಿತ್ರವನ್ನು ಕಣ್ಣಲ್ಲಿಕಣ್ಣಿಟ್ಟು ನೋಡಿ. ನಂತರ ಅದನ್ನು ತಲೆಕೆಳಕ್ಕೂ ಮಾಡಿನೋಡಿ. ನಿಮಗೊಂದು ಅಚ್ಚರಿ ಕಾದಿದೆ.*







## ಕಲಾವಿದ ಕಾಳಪ್ಪನವರ ಚಿತ್ರಗಳ ಕುರಿತು ವಿಮರ್ಶೆ

ಮೂಲತಃ ಕಾಳಪ್ಪನವರು 'ನಿಸರ್ಗ' ಚಿತ್ರರಚನೆಯಲ್ಲಿ ನೆರಳು ಬೆಳಕುಗಳ ಹಿನ್ನೆಲೆಯಲ್ಲಿ ಮೈಗೂಡಿಸಿಕೊಂಡವರು. ಭಾವ ಚಿತ್ರ, ರೂಪಚಿತ್ರ, ಸಂಯೋಜಿತ ಚಿತ್ರಗಳಲ್ಲಿಯೂ ಪರಿಣತರು. ಸಂಯೋಜಿತ ಚಿತ್ರಗಳಲ್ಲಿ ಒಂದು ಮಾತ್ರ ಭಾರತೀಯ ಕಲಾ ಸಂಪ್ರದಾಯದ ಹಿನ್ನೆಲೆಯಲ್ಲಿ ಚಿತ್ರಿತವಾಗಿದೆ. ಉಳಿದವುಗಳು 'ರಿಯಲಿಸ್ಟಿಕ್' ಸಂಪ್ರದಾಯಕ್ಕೆ ಸೇರಿದವು. ಈ ಚಿತ್ರಗಳ ಹಿನ್ನೆಲೆಯಲ್ಲಿ ೪೦ ವರುಷದ ಆಳವಾದ ಅನುಭವವಿದೆ. ಆಧುನಿಕ ರಚನೆಗೆ ಹೊರತಾದುದು. ಸಾಮಾನ್ಯ ಕಲಾಭಿಮಾನಿಗೂ ಸಂವೇದನೆಯನ್ನುಂಟುಮಾಡುವ ಒಂದು ಚೈತನ್ಯವನ್ನು ಈ ಕಲಾಕೃತಿಗಳಲ್ಲಿ ನಾವು ಕಾಣಬಹುದು. ಭಾವಚಿತ್ರ (ಕರಿ ಬಿಳುಪು) ನಾನು ಅವರೂ ಒಂದೆಡೆ ೨ ಗಂಟೆಗಳಲ್ಲಿ ಬಿಡಿಸಿದುದು. ಆ ಚಿತ್ರ ಈಗಲೂ ನನ್ನ ಹತ್ತಿರವಿದೆ. ಹಳೇ ಮೈಸೂರಿನ ಹಿರಿಯ ಕಲಾವಿದರೆಲ್ಲರಿಗೂ ಅವರು ಅವರ ಕಲಾ ಶಾಲೆಯಲ್ಲಿ ಶಾಲು ಹೊದ್ದಿಸಿ ಸನ್ಮಾನ ಮಾಡಿರುವ ಏಕೈಕ ವ್ಯಕ್ತಿ, ಆ ಅದೃಷ್ಟವೂ ಈ ಸಹೃದಯೀ ಕಲಾವಿದನಿಗೂ ಸಂದಿದೆ. ಆ ದಿನ ಈಗಲೂ ನನ್ನ ಕಣ್ಣುಗಳ ಮುಂದೆ ನರ್ತಿಸುತ್ತಿವೆ. ಇಂತಹ ಕಲಾ ಬಂಧು ದಿ|| ಶ್ರೀಯುತ ಕಾಳಪ್ಪನವರಿಗೆ ನನ್ನ ಅನಂತ ನಮನ.

ಮೈಸೂರು *ರಘೂತ್ತಮ ಪುಟ್ಟಿ*

೧) ಸ್ಥಿರ ಜೀವನ : ಹೂಜಿಯ ಬಹು ಪಾರ್ಶ್ವಕ್ಕೆ ಬಿದ್ದ ಬೆಳಕು, ಅದರ ಮೇಲಿನ ವರ್ಣ ಸಂಕೀರ್ಣಕ್ಕೆ ತೇಜಸ್ಸು ನೀಡಿದೆ. ಗೋಡೆಯ ಮೇಲೆ, ಹೂಜಿಯ ಮೇಲಿನ ಹೂವು, ಎಲೆಗಳ ನೆರಳೂ ಬೀಳಲು ಸಾಧ್ಯವಾಗಿದೆ. ಹಣ್ಣಿನ ಹೋಳು, ನೀರಿನ ಮಗ್ಗು, ಹರವಿ ಬಿದ್ದ ಬಿಳಿ ಬಟ್ಟೆ ಪೂರಕ ಸೊಗಸನ್ನೂ ಕೊಟ್ಟಿದೆ. ೨) ಮೇನಕೆ ಹೆತ್ತು, ತ್ಯಜಿಸಿ ಹೋಗಿರುವುದರಿಂದ ಕೂಸು ಶಕುಂತಲೆಯನ್ನು ಹಕ್ಕಿಗಳು ಕಾಪಾಡಿವೆ. ಕಣ್ವ ಋಷಿ ಅನಾಥ ಕೂಸಿಗೆ ಕರುಣೆ ಅನುಕಂಪ ಕೊಡಲು ಬಂದಿದ್ದಾರೆ. ಮರ, ಬಿಳಲು, ಹೂವಿನ ಹೊದರು ನಿಸರ್ಗದ ಸಹಜ ಸೌಂದರ್ಯದ ಮಡಿಲನ್ನೂ ಮಗುವಿಗೆ ಒದಗಿಸಿವೆ. ೩) ಭಾವಚಿತ್ರ : ಕವಿ ಅಥವಾ ಲೇಖಕನ ಮೂಡನ್ನು ಸೆರೆ ಹಿಡಿದ ಕೃತಿ. ೪) ಸ್ಮಶಾನದಲ್ಲಿ ವಿಧವೆಯ ಅಳಲು : ಪತಿಯ ಸಮಾಧಿಯ ಮೇಲೆ ಮುಖವಿಟ್ಟ ಮಡದಿ ಬೆಳಕು ಹೊತ್ತಿಸುತ್ತಿದ್ದಾಳೆ. ಅವಳ ದುಃಖ ಅಪರಿಹಾರ್ಯ, ನೋವು, ಏಕಾಂತದ ಮೌನ ಸಾಂತ್ವನ ಭಾವಪೂರ್ಣವಾಗಿದೆ. ಬೆಳದಿಂಗಳ ತಂಪು, ನಿಸರ್ಗ ನೀಡುವ ಸಮಾಧಾನದ ಸಂಕೇತ. ೫) ಗಂಡನ ಮನೆಗೆ ಶಕುಂತಲೆಯ ನಿರ್ಗಮನ. ಅವಳ ಬಾಲ್ಯ ಗೆಳತಿಯರು ಈಗ ತರುಣಿಯರಾಗಿ, ವಿವಾಹಿತ ಕನ್ನೆಯನ್ನು ಕಳುಹುವಾಗ, ನಾಚಿಕೆ, ಸಂಕೋಚ ಹುಟ್ಟಿಸುವ ಪಿಸುಮಾತು ಹೇಳುವ ಭಾವಪೂರ್ಣ ಸನ್ನಿವೇಶ. ಹಕ್ಕಿ, ಮೊಲ, ಹಂಸ, ಹರಿವ ನೀರಿನ ಹೊನಲು ಗಿಡಮರದ ಬೇರು, ಕಾಂಡ, ಟೊಂಗೆಗಳು ಬದುಕಿನ ಜೀವಂತಿಕೆ, ನಿರಂತರ ಬೆಳವಣಿಗೆ ಸೂಚಿಸುತ್ತವೆ.

ಗದಗ *'ಸರ್ವಜಿತ'*



## ಸರಕಿನ ರೈಲು

*ಬಂತೊ ಬಂತು*
*ಸರಕಿನ ರೈಲು*
*ಶಂಖದ ಹಾಗೆ*
*ಬೆನ್ನಿನ ಮೇಲೆ*
*ಮೂಟೆಯ ಬಿಗಿದ*
*ಸರಕಿನ ರೈಲು*
*ಅರರೇ ಓಡಲು ಇಲ್ಲವೆ ಇಲ್ಲ*
*ಹಳಿಯು*
*ಸಾಗಿದ ಮೇಲೆ ಮೂಡುವ ಹೊಸದೀ*
*ಪರಿಯು*
*ಮುಟ್ಟಿದರಂತೂ*
*ಅಂಟಿನ ನುಣುಪು*
*ತೊಳೆದರು ಕೂಡ*
*ಹೋಗದ ಕೊಳಕು*
*ಅರರೇ ವೇಗದ ವೇಗದ ರೈಲು*
*ತಾಸಿಗೆ ಸೆಂಟಿಮೀಟರು ಹತ್ತು*
*ನಡೆವುದೆ ಈ ರೇಲಿನ ಗತ್ತು*
*ಇದರ ಹೆಸರೆ ಹಿಸ್ಕ*
*ಇಂಗ್ಲಿಷಿನಲಿ ಸ್ನೇಲು*
*ನಾನು ಕರೆವುದು ರೈಲು*

ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೪೩೦
ಹೊನ್ನಾವರ, ಉತ್ತರ ಕನ್ನಡ

# ಹೊಸ ಕೃಷಿ ಸುಧಾರಣೆ ಎತ್ತ ಸಾಗಿದೆ ?

ಪ್ರೊ॥ ಡಿ. ನರಸಿಂಹ ರೆಡ್ಡಿ

ಇಂದು ದೇಶದ ಆರ್ಥಿಕ ಕ್ಷೇತ್ರದಲ್ಲಿ 'ಉದಾರೀಕರಣ', 'ಖಾಸಗೀಕರಣ' ಹಾಗೂ 'ಜಾಗತೀಕರಣ'ಗಳನ್ನು ಪ್ರಗತಿಯ ಪರಮ ನಿರ್ಧಾರಕ ಸೂತ್ರಗಳೆಂದು ಪರಿಗಣಿಸಲಾಗುತ್ತಿದೆಯಷ್ಟೆ. ಸಾಧಕ - ಬಾಧಕಗಳು ಎಲ್ಲ ಕ್ಷೇತ್ರಗಳಲ್ಲೂ ಎಲ್ಲ ತೀವ್ರತೆಯೊಂದಿಗೆ ಗೋಚರಕ್ಕೆ ಬರುತ್ತಿವೆ. ಕೈಗಾರಿಕಾ ರಂಗದಲ್ಲಿ ಇದು ರಫ್ತು ಆಧಾರಿತ ಬೃಹದ್ ಉದ್ಯಮಿಗಳಿಗೆ ಹಾಗೂ ಬಹುರಾಷ್ಟ್ರೀಯ ಕಂಪೆನಿಗಳಿಗೆ ಎಗ್ಗಿಲ್ಲದ ಸವಲತ್ತುಗಳನ್ನು ಒದಗಿಸಿ ಹೆಚ್ಚು ಪ್ರಯೋಜನಕಾರಿಯಾಗಿದ್ದಲ್ಲಿ ಸ್ಥಳೀಯ ಮಾಧ್ಯಮ ಹಾಗೂ ಸಣ್ಣ ಪ್ರಮಾಣದ ಉದ್ಯಮಿಗಳಿಗೆ ಹೇಳಹೆಸರಿಲ್ಲದಂತೆ ನಾಶಗೊಳ್ಳುವ ಭೀತಿ ತಂದೊಡ್ಡಿದೆ.

ಕೃಷಿ ಕ್ಷೇತ್ರವೂ ಇದಕ್ಕೆ ಹೊರತಾಗಿಲ್ಲ. ಹಿಂದೆ 'ಉಳುವವನಿಗೇ ಹೊಲ' ಎಂಬ ಸೂತ್ರದ ಕೆಳಗೆ ಭೂಮಿಯ ಪುನರ್‌ವಿಂಗಡನೆ ನಡೆದಿದ್ದಿತು. ಇದರಿಂದ ರೈತರಿಗೆ, ದೇಶದ ಜನಸಂಖ್ಯೆಯಲ್ಲಿ ಅತ್ಯಧಿಕ ಭಾಗವಾಗಿರುವವರಿಗೆ, ಬಹಳ ಪ್ರಯೋಜನವಾಗುವುದು, ದೇಶ ಶೀಘ್ರ ಪ್ರಗತಿಗೊಳ್ಳುವುದು ಎಂಬುದು ಸಾಮಾನ್ಯ ನಂಬಿಕೆಯಾಗಿದ್ದಿತು. ಅದಕ್ಕನುಗುಣವಾಗಿಯೇ ಜಮೀನ್ದಾರಿ ಪದ್ಧತಿಯನ್ನು ನಾಶಗೊಳಿಸಲು ಭಾರಿ ಹೋರಾಟವನ್ನೇ ನಡೆಸಲಾಯಿತು. ವ್ಯಕ್ತಿಯೊಬ್ಬ ಹೊಂದಿರಬಹುದಾದ ಭೂಮಿ ಪ್ರಮಾಣ ಇಂತಿಷ್ಟು ಗಾತ್ರಕ್ಕೆ ಮೀರಿರಬಾರದು ಎಂದು ಏರುಮಿತಿಯನ್ನೂ ನಿರ್ಧರಿಸಲಾಯಿತು.

ಇಂದು ಇವೆಲ್ಲವನ್ನೂ ಗಾಳಿಗೆ ತೂರಿ ರಫ್ತು ಹಾಗೂ ವಿದೇಶೀ ಹಣ ಗಳಿಕೆಯೇ ಪ್ರಧಾನವೆಂದು ಭಾವಿಸಿ 'ಹೊಸ ಸುಧಾರಣೆಗಳ' ನೆಪದಲ್ಲಿ ಹಳೆಯ ಪದ್ಧತಿಗಳನ್ನೆಲ್ಲ ಬುಡಮೇಲು ಮಾಡಲಾಗುತ್ತಿದೆ. ಕೃಷಿ ಪ್ರಧಾನವಾದ ಆಂಧ್ರ ಪ್ರದೇಶದಲ್ಲಿ ಇದು ಇಂದು ಹೆಚ್ಚು ಎದ್ದು ಕಾಣುತ್ತಿದೆ. ಅದರಲ್ಲೂ ಹೊಸ ಶಕೆಯನ್ನು ಆರಂಭಿಸಿದ ಮಹಾನ್ 'ಮಾಹಿತಿ ತಂತ್ರಜ್ಞಾನ ದ್ರಷ್ಟಾರ'ನೆಂದು ಅಮೆರಿಕನ್ ಪತ್ರಿಕೆಗಳಲ್ಲಿ ವಿಶೇಷವಾಗಿ ಪ್ರಶಂಸೆಗೊಳಗಾದಂಥ ಶ್ರೀ ಚಂದ್ರಬಾಬು ನಾಯ್ಡುರವರು ಎರಡನೆಯ ಬಾರಿಗೆ ಮುಖ್ಯಮಂತ್ರಿಯಾಗಿ ಆಯ್ಕೆಗೊಂಡ ನಂತರವಂತೂ ಈ 'ನವ ಪೀಳಿಗೆಯ ಸುಧಾರಣೆಗಳು' ರಾಜ್ಯಾದ್ಯಂತ ವಿಜೃಂಭಿಸುತ್ತಿವೆ. ಅವರು ಇತ್ತೀಚೆಗೆ ಎರಡನೆಯ ಕಂತಿನ ಸುಧಾರಣೆಗಳನ್ನು ಪ್ರಕಟಿಸಿದ್ದಾರೆ. ಇದನ್ನು "ವಿಷನ್ - ೨೦೨೦: ಸ್ವರ್ಣಾಂಧ್ರ ಪ್ರದೇಶ" ಎಂದು ಕರೆದಿದ್ದಾರೆ.

ಎಷ್ಟೇ ಆಡಂಬರದ ಮಾತುಗಳಿಂದ ವರ್ಣಿಸಿದರೂ ಈ ಸುಧಾರಣೆಗಳು ವಾಸ್ತವವಾಗಿ ಇದುವರೆವಿಗೂ ಸಮಾನ ಹಾಗೂ ನ್ಯಾಯಯುತ ವಿತರಣೆಯ ನೀತಿಯಿಂದಾಗಿ ಗಳಿಸಿದ್ದ ಎಲ್ಲ ಸಾಧನೆಗಳನ್ನೂ ಸಂಪೂರ್ಣವಾಗಿ ನಿರ್ನಾಮಗೊಳಿಸುವ ಗುರಿ ಹೊಂದಿವೆ. ಕೃಷಿ ರಂಗದಲ್ಲಿ ಈಗ ಇಲ್ಲಿ ತರಲಾಗುತ್ತಿರುವ ಪ್ರಧಾನ ಪರಿವರ್ತನೆಗಳೆಂದರೆ - ಕೃಷಿ ಸೇವಾ ಕಾರ್ಯಗಳ ಖಾಸಗೀಕರಣ ಹಾಗೂ ಭೂಸುಧಾರಣೆಗಳ ಸಂಪೂರ್ಣ ರದ್ದತಿ. ಭೂಸುಧಾರಣೆಯನ್ನು ಜಾರಿಗೆ ತಂದು ಭೂಮಾಲೀಕ ಹಾಗೂ ಜಮೀನ್ದಾರಿ ಪದ್ಧತಿಯನ್ನು ಇಲ್ಲವಾಗಿಸಿದರೆ ಶೋಷಣೆಯಿಂದ ಮುಕ್ತನಾಗಿ ಸ್ವಂತ ಭೂಮಿಯಲ್ಲಿ ಸಾಗುವಳಿ ಮಾಡುವ ರೈತ ಹೆಚ್ಚು ಆಸಕ್ತಿ ವಹಿಸಿ ದುಡಿಯುತ್ತಾನೆ, ಉತ್ಪಾದಕತೆ ಹೆಚ್ಚುತ್ತದೆ, ದೇಶದಲ್ಲಿ ಆಹಾರೋತ್ಪಾದನೆ ಅಧಿಕಗೊಂಡು ಬಡತನ - ಹಸಿವುಗಳ ನಿವಾರಣೆಯಾಗುತ್ತದೆ ಎಂಬ ಸದುದ್ದೇಶದಿಂದ ಅದನ್ನು ಜಾರಿಗೆ ತರಲಾಯಿತು.

ಆದರೆ ಅದರ ಫಲವಾಗಿ ದೊಡ್ಡ ಜಮೀನುಗಳೆಲ್ಲ ಸಣ್ಣ ಪುಟ್ಟ ಹೊಲಗಳಾಗಿ ವಿಭಜನೆಗೊಂಡು ಆಧುನಿಕ ಕೃಷಿ ವಿಧಾನಗಳನ್ನೂ ಯಂತ್ರೋಪಕರಣಗಳನ್ನೂ ಬಳಸಲು ಸಾಧ್ಯವಿಲ್ಲವಾಗಿದೆ ಎಂಬುದನ್ನು ಒಂದು ನೆಪವಾಗಿಟ್ಟುಕೊಂಡು ಹೊಸ ಸುಧಾರಣಾ ನೀತಿಯಲ್ಲಿ ಮತ್ತೆ ಹಳೆಯ ಜಮೀನ್ದಾರಿ ಪದ್ಧತಿಯನ್ನೇ ಪುನರುಜ್ಜೀವನಗೊಳಿಸಲು ಹವಣಿಸಲಾಗುತ್ತಿದೆ. ಇದರಿಂದ ಪುನಃ ಉಳುವ ರೈತನ ಶೋಷಣೆಗೆ ದಾರಿ ಮಾಡಿಕೊಟ್ಟಂತಾಗುತ್ತದೆ. ಕಾಲ ಬದಲಿದೆ, ಈಗ 'ರಫ್ತು ಗುರಿಯುಳ್ಳ ಕೃಷಿ' ಮುಖ್ಯವಾಗಿದೆ. ಆದ್ದರಿಂದ 'ಸಂಘಟಿತ ಕೃಷಿ' ಹಾಗೂ 'ಕಾರ್ಪೊರೇಟ್ ಕೃಷಿ' ಜಾರಿಗೆ ತರಲು ಈಗಿರುವ ಭೂ - ಹಿಡುವಳಿ ಮೇಲುಮಿತಿಯನ್ನು ತೊಡೆದು ಹಾಕಬೇಕು, ಎಂದು ವಾದಿಸಲಾಗುತ್ತಿದೆ.

ಕಾಲಧರ್ಮಕ್ಕನುಗುಣವಾಗಿ ಭಾರಿ ಪ್ರಮಾಣದ ಕೃಷಿ ಕ್ಷೇತ್ರಗಳು ಅವಶ್ಯ ಎನ್ನುವುದಾದರೆ ಹಳೆಯ ಜಮೀನ್ದಾರಿ ಪದ್ಧತಿಯನ್ನೇ ತಿರುಗಿ ತರಬೇಕಾಗೇನಿಲ್ಲ. ಈಗಿರುವ ಸಣ್ಣಪುಟ್ಟ ರೈತರನ್ನೇ ಅವರ ಸ್ವಂತ ಇಚ್ಛೆಯ ಮೇರೆಗೇ, ಸಹಕಾರಿ ಸಂಸ್ಥೆಗಳಲ್ಲಿ ಒಂದುಗೂಡಿಸಿ ಬೃಹತ್ ಸಾಮೂಹಿಕ ಕೃಷಿ ಕ್ಷೇತ್ರಗಳನ್ನು ಸ್ಥಾಪಿಸಬಹುದು. ಇದಕ್ಕಾಗಿ ರಿಜಿಸ್ಟ್ರೇಷನ್ ಹಾಗೂ ಸ್ಟಾಂಪ್ ಡ್ಯೂಟಿಗಳನ್ನು ತೆಗೆದುಹಾಕಬಹುದು. ಇದರಿಂದ ಆಧುನಿಕ ಕೃಷಿ ಯಂತ್ರೋಪಕರಣಗಳ ಬಳಕೆಯೂ ಸಾಧ್ಯವಾಗುತ್ತದೆ, ಶೋಷಣೆಯೂ ಇಲ್ಲವಾಗುತ್ತದೆ.

ಈಗ ಘೋಷಿಸಲಾಗಿರುವ ಕೃಷಿ ಸುಧಾರಣೆಯ ಇನ್ನೊಂದು ಅಂಶವೆಂದರೆ - ಕೃಷಿಗಾಗಿ ರಾಜ್ಯ ಮಾಡುತ್ತಿರುವ ಖರ್ಚುಗಳನ್ನು ಕಡಿಮೆ ಮಾಡಲೋಸುಗ ಸರಕಾರೀ ಕೃಷಿ ಸೇವಾ ಕಾರ್ಯಕರ್ತರ ಇಡೀ ವಿಭಾಗವನ್ನು ಮುಚ್ಚಿ ಈ ಸೇವಾ ಕಾರ್ಯಗಳನ್ನೆಲ್ಲ ಖಾಸಗಿಯವರಿಗೆ ವಹಿಸುವುದು, ಗೊಬ್ಬರ ಕ್ರಿಮಿನಾಶಕ ತಳಿಬೀಜ ಇತ್ಯಾದಿಗಳ ಮಾರಾಟ ಹಾಗೂ ಸರಬರಾಜನ್ನು ಖಾಸಗೀಕರಿಸುವುದು, ಹೀಗೆ ರಾಜ್ಯ ಬೀಜ ಕಾರ್ಪೊರೇಷನ್ ಮೇಲಿನ ಹೊರೆಯನ್ನು ಕಡಿಮೆ ಮಾಡುವುದು, ಎಂದು ಮುಂತಾಗಿ ಖಾಸಗೀಕರಣದ ಮಂತ್ರ ಪಠಿಸಲಾಗಿದೆ. ಇದನ್ನು ಆಗು ಮಾಡಲು ಸಾರ್ವಜನಿಕ ಭೂಮಿಗಳನ್ನು ಹರಾಜು ಮೂಲಕ ಖಾಸಗಿ ವಲಯಕ್ಕೆ ದೀರ್ಘ ಕಾಲಗಳವರೆಗೆ 'ಲೀಸ್' ಕೊಡುವ ಯೋಜನೆ ಹಾಕಿಕೊಳ್ಳಲಾಗಿದೆ. ವಿಭಿನ್ನ ಕಂಪೆನಿಗಳಿಗೆ ವಿಭಿನ್ನ ಬೆಳೆಗಳನ್ನು ಬೆಳೆಯಲು ವಿಭಿನ್ನ ವಲಯಗಳನ್ನು ಗೊತ್ತುಪಡಿಸುವ ಮೂಲಕ 'ಕಾಂಟ್ರಾಕ್ಟ್ ಕೃಷಿ'ಗೆ ಉತ್ತೇಜನ ನೀಡಲು ಹವಣಿಸಲಾಗುತ್ತಿದೆ.

ಕೃಷಿ ವಲಯದಲ್ಲಿ ಖಾಸಗಿಯವರು ಭಾರಿ ಬಂಡವಾಳ ತೊಡಗಿಸುವಂತೆ ಪ್ರೋತ್ಸಾಹಿಸಲೋಸುಗ ಕೃಷಿಯನ್ನೂ ಕೈಗಾರಿಕೆಗೆ ಸರಿಸಮನಾಗಿ ಪರಿಗಣಿಸಲಾಗುತ್ತಿದೆ. ಕೃಷಿ ಶಿಕ್ಷಣ, ಸಂಶೋಧನೆ, ವಿಸ್ತರಣೆ ಇತ್ಯಾದಿಗಳನ್ನು ಖಾಸಗಿಯವರಿಗೆ ವಹಿಸಿಕೊಡಲಾಗುತ್ತಿದೆ. ಎಲ್ಲವನ್ನೂ 'ಕಾಂಟ್ರಾಕ್ಟ್' ಪದ್ಧತಿಗೆ ಅಳವಡಿಸಲಾಗುತ್ತಿದೆ.

ಇವೆಲ್ಲವುಗಳ ಫಲವಾಗಿ ಕೃಷಿಯ ಮೇಲೆಯೇ ಅವಲಂಬಿಸಿದಂಥ ಕುಟುಂಬಗಳ ಸಂಖ್ಯೆ ಕಡಿಮೆಯಾಗುವುದು ಎಂಬುದು ಈ ನವ ಸುಧಾರಕರ ಅಂಬೋಣ. ಇದಕ್ಕೆ ಅವರು ೧೯೫೦ರಲ್ಲಿ ಜಪಾನ್, ಕೊರಿಯ ಹಾಗೂ ತೈವಾನ್‌ಗಳಲ್ಲಾದ ಪರಿವರ್ತನೆಯ ಉದಾಹರಣೆ ನೀಡುತ್ತಾರೆ. ಆದರೆ ಎಲ್ಲ ದೇಶಗಳಲ್ಲೂ ಭೂ ಸುಧಾರಣೆಗಳ ಫಲವಾಗಿ ಸಣ್ಣ ಕೃಷಿ ಕ್ಷೇತ್ರಗಳು ಉಗಮವಾದುದಕ್ಕೂ ಸಣ್ಣ ಕೃಷಿಕರು ಹೆಚ್ಚು ಉತ್ತಮ ಬಾಳು ಬಾಳುವಂತೆ ಮಾಡುವುದು ಆ ಎಲ್ಲ ದೇಶಗಳಲ್ಲಿನ ಸುಧಾರಣೆಗಳ ಪ್ರಧಾನ ಗುರಿಯಾಗಿದ್ದುದಕ್ಕೂ ಕೃಷಿ ವೈವಿಧ್ಯೀಕರಣ ಹಾಗೂ ಗ್ರಾಮಾಂತರ ಕೈಗಾರಿಕೆಗಳ ವಿಸ್ತರಣೆ ಫಲವಾಗಿಯಷ್ಟೇ ಆ ದೇಶಗಳಲ್ಲಿ ರೈತ ಕುಟುಂಬಗಳ ಸಂಖ್ಯೆ ಕ್ರಮೇಣ ಕಡಿಮೆಯಾಗತೊಡಗಿತೆಂಬುದಕ್ಕೂ ಈ ಸುಧಾರಕರ ವಾದಗಳಲ್ಲಿ ಉಲ್ಲೇಖವೇ ಇಲ್ಲ.

ದೇಶದ ಇತರೆಲ್ಲ ರಾಜ್ಯಗಳಲ್ಲಿರುವಂತೆ ಆಂಧ್ರಪ್ರದೇಶದಲ್ಲೂ ಸಣ್ಣ ಕೃಷಿಕರೇ ರೈತ ಸಮುದಾಯದ ಶೇ. ೮೦ರಷ್ಟಾಗಿದ್ದಾರೆ. ಶೇ. ೪೦ರಷ್ಟು ಕೃಷಿ ಭೂಮಿಯನ್ನು ಇವರೇ ಉಳುತ್ತಿದ್ದಾರೆ. ಇವರ ಆದಾಯ ಹೆಚ್ಚಿಸಿ ಹೆಚ್ಚು ಉತ್ತಮ ಬಾಳು ಬಾಳುವಂತೆ ಮಾಡುವ ಯಾವ ಕಾಳಜಿಯೂ ನವಸುಧಾರಣೆಯಲ್ಲಿಲ್ಲ. ಕೃಷಿ ಕ್ಷೇತ್ರವನ್ನೂ ಮುಕ್ತ ಮಾರುಕಟ್ಟೆಗೆ ಸರಿಹೊಂದಿಸುವುದೇ ಅದರೆಲ್ಲ ಗುರಿ. ಕಳೆದ ವರ್ಷ ಗ್ರಾಮಾಂತರ ಪ್ರದೇಶಗಳಲ್ಲಿ ಖಾಸಗಿ ಗೊಬ್ಬರ - ಕ್ರಿಮಿನಾಶಕ - ಬೀಜ ಮಾರಾಟಗಾರರ ದರೋಡೆಕೋರ ಕ್ರಮಗಳ ಫಲವಾಗಿ ಅನೇಕ ಸಣ್ಣ ಕೃಷಿಕರು ಹತಾಶರಾಗಿ ಆತ್ಮಹತ್ಯೆ ಮಾಡಿಕೊಂಡಂಥ

ಕಾಲದಲ್ಲೇ ಮತ್ತೆ ಖಾಸಗಿ ಬಂಡವಳಗಾರರ ಪ್ರಾಬಲ್ಯ ಹೆಚ್ಚಿಸುವ ಈ ನವ ಸುಧಾರಣಾ ನೀತಿಯನ್ನು ಜಾರಿಗೆ ತರ ಹೊರಟಿರುವುದು ಒಂದು ದೊಡ್ಡ ವಿಪರ್ಯಾಸವೇ ಸರಿ.

ಜೊತೆಗೆ ಈ ನವ ಸುಧಾರಣಾ ನೀತಿಯು, ಪ್ರಸ್ತುತದಲ್ಲಿ ಹಳ್ಳಿಗಾಡಿನ ರೈತರಿಗೆ ಭಾರಿ ಬೆದರಿಕೆ ಒಡ್ಡಿರುವಂಥ ಭೂಗರ್ಭ ಜಲಾಭಾವದ ಗಂಭೀರ ಸ್ಥಿತಿಯನ್ನು ಗಣನೆಗೆ ತಂದುಕೊಂಡೇ ಇಲ್ಲ. ಮುಂದಿನ ೫-೮ ವರ್ಷಗಳಲ್ಲಿ ಭೂಗರ್ಭ ಜಲಾಧಾರಿತ ಕೃಷಿ ಪ್ರಮಾಣವನ್ನು ಇಮ್ಮಡಿಗೊಳಿಸುವ ಸಲಹೆ ಮಾಡಲಾಗಿದೆ. ಅಂದರೆ ಕೃಷಿ ಉದ್ದೇಶಗಳಿಗಾಗಿ ಹೆಚ್ಚಾಗಿ ಕಾಲುವೆ ನೀರಾವರಿ ಪ್ರದೇಶಗಳಲ್ಲಿ ವಿದ್ಯುತ್ ಬಳಕೆಯನ್ನು ಇಮ್ಮಡಿ ಗೊಳಿಸಬೇಕಾಗುತ್ತದೆ. ಆದರೆ ಇದನ್ನು ಹೇಗೆ ನಿಭಾಯಿಸ ಲಾಗುತ್ತದೆ ಎಂಬ ಬಗೆಗೆ ಚಕಾರ ಎತ್ತಿಲ್ಲ. ಜಲಾಭಾವ ಪ್ರದೇಶಗಳ ರೈತರನ್ನು ಉಪವಾಸ ಕೆಡವಿ ಬೇರೆಡೆಗಳಲ್ಲಿನ 'ಸಂಘಟಿತ ಕೃಷಿ'ಯನ್ನು ದೃಢಗೊಳಿಸುವುದೇ ಈ ನವ ಸುಧಾರಣೆಯ ವ್ಯೂಹೋಪಾಯವೆಂದು ಕಂಡುಬರುತ್ತದೆ.

ರಫ್ತು - ಗುರಿಯುಳ್ಳ ಕೃಷಿ, ಮೌಲ್ಯ ಸೇರ್ಪಡೆ ಹಾಗೂ ವೆಚ್ಚ ಇಳುವರಿ - ಇವುಗಳ ಮೇಲೆಯೇ ಹೆಚ್ಚು ಒತ್ತುಗಳನ್ನು ಗಣನೆಗೆ ತಂದುಕೊಂಡಾಗ, ಕಡಿಮೆ ವೆಚ್ಚದ ಸಣ್ಣ ಪ್ರಮಾಣದ ಕೃಷಿಗೆ ಬದಲಿ ಬೇರೇನೂ ಇಲ್ಲ ಎಂದೇ ಕಂಡುಬರುತ್ತದೆ. ವೆಚ್ಚ ಕಡಿಮೆ ಏಕೆಂದರೆ ಸಣ್ಣ ಕೃಷಿ ಕ್ಷೇತ್ರಗಳು ಗಣನೀಯವಾಗಿ ಕುಟುಂಬ ಸದಸ್ಯರ ಶ್ರಮದ ಮೇಲೆಯೇ ಆಧರಿಸಿರುತ್ತದೆ ಮತ್ತು ಆ ಸದಸ್ಯರು ತಮ್ಮೆಲ್ಲ ಶ್ರಮವನ್ನೂ ಅದರಲ್ಲಿ ತೊಡಗಿಸಿರುತ್ತಾರೆ. ಇದರಲ್ಲಿ ಪರರ ಶೋಷಣೆ ಇರುವುದಿಲ್ಲ.

ದೇಶದ, ಹೆಚ್ಚಾಗಿ ಆಂಧ್ರದ, ಕೃಷಿ ರಂಗದಲ್ಲಿ ಸುಧಾರಣೆ ಅತ್ಯವಶ್ಯ ಅನ್ನವುದರಲ್ಲಿ ಸಂಶಯವಿಲ್ಲ. ಆದರೆ ಈ ಸುಧಾರಣೆ ದೇಶದ ಆರ್ಥಿಕತೆಯ ಬೆನ್ನೆಲುಬಾದ ಸಣ್ಣ ಕೃಷಿ ಆರ್ಥಿಕತೆಯನ್ನು ಬಲಪಡಿಸುವಂತಹುದಾಗಿರಬೇಕು. ಸಣ್ಣ ಹಾಗೂ ಅಂಚಿನಲ್ಲಿರುವ ಕೃಷಿ ಕ್ಷೇತ್ರಗಳ ಉತ್ಪಾದಕತೆಯನ್ನೂ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ಮಾರಾಟವನ್ನೂ ಹೆಚ್ಚಿಸುವ ಮೂಲಕ ಅವುಗಳನ್ನು ಒಂದುಗೂಡಿಸುವುದು ಸುಧಾರಣೆಗಳ ಗುರಿಯಾಗಿರಬೇಕು. ಇದಕ್ಕಾಗಿ ಸೂಕ್ತ ಸಾಂಸ್ಥಿಕ ಹಾಗೂ ಪ್ರಾಕೃತಿಕ ಅಧಿರಚನೆಯನ್ನು ಸೃಜಿಸಿ ಸಣ್ಣ ಕೃಷಿ ಆರ್ಥಿಕತೆಯನ್ನು ಹೆಚ್ಚು ಉತ್ಪಾದಕವನ್ನಾಗಿ ಮಾಡಬೇಕು. ಕೃಷಿಕರು ತಮ್ಮ ಕಸುಬನ್ನು ಬಿಟ್ಟು ಬೇರೆ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಬಹುದಾದಂಥ ಅವಕಾಶ ಅತ್ಯಲ್ಪವಾಗಿರುವಾಗ ಅವರ ನಡುವೆಯೇ ಸ್ಪರ್ಧಾತ್ಮಕತೆಯನ್ನು ಸುಧಾರಿಸುವುದು ಕೃಷಿ ಸುಧಾರಣೆಗಳ ವ್ಯೂಹವಾಗಿರಬೇಕೇ ಹೊರತು ಅದರ ಬದಲಿಗೆ 'ಸಂಘಟಿತ ಕೃಷಿ' ಅನ್ನುವಂಥ ವ್ಯವಸ್ಥೆಯನ್ನು ಏರ್ಪಡಿಸುವುದಲ್ಲ. ಕೃಷಿ ಉತ್ಪನ್ನದಲ್ಲಿ ಜನರ ಅವಶ್ಯವಿರುವಷ್ಟನ್ನು ತೆಗೆದಿಟ್ಟ ನಂತರ ಉಳಿದುದನ್ನಷ್ಟೇ ರಫ್ತು ಮಾರುಕಟ್ಟೆಗೆ ನೀಡಬೇಕೇ ಹೊರತು ರಫ್ತೇ ಪರಮಗುರಿಯಾಗಿರಬಾರದು. ಜನರ ಬಳಕೆಗೆ ಅವಶ್ಯವಾದುದನ್ನು ಉತ್ಪಾದಿಸುವುದು ಮುಖ್ಯ ಗುರಿಯಾಗಿರಬೇಕೇ ಹೊರತು ಮಾರುಕಟ್ಟೆಗೆ ಅವಶ್ಯವಾದುದನ್ನು ಉತ್ಪಾದಿಸುವುದಲ್ಲ. ಆದರೆ ದುರದೃಷ್ಟವಶಾತ್ ಆಂಧ್ರ ಸರಕಾರವು 'ವಿಷನ್ ೨೦೨೦' ಅನ್ನುವಂಥ ಭ್ರಾಮಕ ಪರಿಕಲ್ಪನೆಯ ಹೆಸರಿನಲ್ಲಿ ನಡೆಸುತ್ತಿರುವ ಕೃಷಿ ಸುಧಾರಣೆಯು ಯಾವುದು ಅವಶ್ಯವೋ ಅದಕ್ಕೆ ವಿರುದ್ಧವೇ ಆಗಿದೆ. ಈ ಸುಧಾರಣೆಗಳನ್ನು ಜಾರಿಗೆ ತಂದಲ್ಲಿ ಕೃಷಿ ಸಮುದಾಯದ ಬಹುಸಂಖ್ಯಾತರಿಗೆ ಲಭಿಸುವುದು ಅಭಿವರ್ಧನೆಯಲ್ಲ, ದಾರಿದ್ರ್ಯ, ನಿರ್ಗತಿಕತೆ.

*('ಹೊಸತು'ವಿಗಾಗಿಯೇ ಬರೆದ ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್ ಅವರು.)*

**ಪ್ರೊ॥ ಡಿ. ನರಸಿಂಹ ರೆಡ್ಡಿ**
ಅರ್ಥಶಾಸ್ತ್ರ ಪ್ರಾಧ್ಯಾಪಕರು
ಹೈದರಾಬಾದ್ ವಿಶ್ವವಿದ್ಯಾಲಯ, ಹೈದರಾಬಾದ್

# ಸೆಪ್ಟೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

ನಾವು ಹಿಂದೆ ಹೇಳಿದಂತೆ, ಎರಡು ವಿಭಿನ್ನ ಉತ್ತರಗಳಿವೆ. ಅವುಗಳನ್ನು ಕೆಳಗೆ ತೋರಿಸಿದ್ದೇವೆ.

| | 'ಕ' | | | | | | 'ಖ' | | | | | |
|---|---|---|---|---|---|---|---|---|---|---|---|---|
| ೧) | ೧ | ೨ | ೩ | ೪ | ೫ | ೬ | ೧ | ೨ | ೩ | ೪ | ೫ | ೬ |
| ೨) | ೧ | ೩ | ೪ | ೫ | ೬ | ೮ | ೧ | ೨ | ೨ | ೩ | ೩ | ೪ |

ಕಳೆದ ತಿಂಗಳ ಪ್ರಶ್ನೆ ಮತ್ತು ಅದಕ್ಕೆ ಮೇಲೆ ನೀಡಿದ ಉತ್ತರವನ್ನು ಆಸ್ವಾದಿಸಲು ಅನುಕೂಲವಾಗುವಂತೆ ಕೆಲವು ವಿವರಣೆಗಳನ್ನು ಕೊಡಬಯಸುತ್ತೇವೆ :

ಒಂದರಿಂದ ಆರರವರೆಗಿನ ಚುಕ್ಕೆಗಳನ್ನು ಕ್ರಮವಾಗಿ ಅದರ ಆರು ಮುಖಗಳಲ್ಲಿ ಗುರುತಿಸಿರುವ ಘನಾಕೃತಿಯ ಸಣ್ಣ ದಾಳವು ಎಲ್ಲರಿಗೂ ಪರಿಚಿತವಾದದ್ದೆ. ಅಂತಹ ದಾಳವು 'ಶಕುನಿ'ಯ ಮೋಸದ ದಾಳವಾಗಿಲ್ಲದಿದ್ದಲ್ಲಿ, ಅದನ್ನು ಉರುಳಿಸಿದಾಗ ಒಂದರಿಂದ ಆರರವರೆಗಿನ 'ಗರ'ವು ಬೀಳುವ 'ಸಂಭವನೀಯತೆ' ಎಲ್ಲ ಗರಗಳಿಗೂ ಸಮಾನವಾಗಿರುತ್ತದೆ (ಪ್ರತಿಯೊಂದು ಗರಕ್ಕೂ ಈ ಸಂಭವನೀಯತೆಯು ಆರರಲ್ಲಿ ಒಂದು).

ಮೇಲೆ ಹೇಳಿದಂತಹ ಎರಡು ದಾಳಗಳನ್ನು ಒಟ್ಟಿಗೆ ಉರುಳಿಸಿ ಆಡುವ ಆಟವೊಂದರಲ್ಲಿ, ಪ್ರತಿಸಲ ಎರಡು ದಾಳಗಳಲ್ಲಿ ಬೀಳುವ ಗರಗಳ ಒಟ್ಟು ಮೊತ್ತವನ್ನು ಆಟಕ್ಕೆ ಪರಿಗಣಿಸಲಾಗುತ್ತದೆ. ಈ ಮೊತ್ತಗಳ ಸಂಖ್ಯೆ ೨ರಿಂದ ೧೨ರವರೆಗೆ ಯಾವುದಾದರೊಂದು ಸಂಖ್ಯೆಯಷ್ಟೆ. ಅಲ್ಲದೆ ಸಾಧ್ಯವಿರುವ ಇಂತಹ ಮೊತ್ತಗಳೆಲ್ಲವನ್ನೂ ಗಣನೆಗೆ ತೆಗೆದುಕೊಂಡಾಗ ೩೬ ಸಂಖ್ಯೆಗಳುಳ್ಳ ಒಂದು ಶ್ರೇಢಿಯು ಬರುತ್ತದೆ. ಈ ಶ್ರೇಢಿಯಲ್ಲಿ ಪ್ರತಿ ಗರದ 'ಆವರ್ತನ' ಸಂಖ್ಯೆಯು ಸೆಪ್ಟೆಂಬರ್ ತಿಂಗಳಲ್ಲಿ ನಿಬಂಧಿಸಿದಂತೆಯೇ ಇವೆ. ಮೇಲಿನ '೧'ನೆಯ ಉತ್ತರದಲ್ಲಿ ನಮೂದಿಸಿರುವ ಸಂಖ್ಯೆಗಳು ('ಕ' ಮ 'ಖ' ದಾಳಗಳೆರಡರಲ್ಲಿಯೂ) ಕ್ರಮವಾಗಿ ೧-೬ರವರೆಗಿವೆ. ಪ್ರಶ್ನೆಗೆ ಇರುವ ಎರಡನೆ ಉತ್ತರದ ಅರ್ಥವೇನೆಂಬುದು ಈಗ ಸ್ಪಷ್ಟವಾಗಿರಬಹುದಲ್ಲವೆ ?

ದಾಳದ ಆರು ಮುಖಗಳಲ್ಲಿ ಎಂದಿನಂತೆ ೧ ರಿಂದ ೬ ರವರೆಗೆ ಚುಕ್ಕೆಗಳನ್ನಿಟ್ಟಿರುವ ಎರಡು ದಾಳಗಳನ್ನು ಉರುಳಿಸಿ ಆಡುವ ಆಟಕ್ಕೂ ('ಮನುಜ'ರು ಆಡುವ ಆಟ) ಎರಡನೆಯ ಉತ್ತರದಲ್ಲಿರುವ ಸಂಖ್ಯೆಗಳಿಗನುಗುಣವಾಗಿ ಚುಕ್ಕೆಗಳನ್ನು ಇಟ್ಟಿರುವ 'ಕ' ಮತ್ತು 'ಖ' ದಾಳಗಳನ್ನು ಉರುಳಿಸಿ ಆಡುವ ಆಟಕ್ಕೂ ('ಯಕ್ಷ'ರು ಆಡುವ ಆಟ !) ಏನೂ ವ್ಯತ್ಯಾಸವಿಲ್ಲ !

ಹೀಗೆ ಚಾಲನೆಯಲ್ಲಿರುವ ದಾಳಗಳಿಗಿಂತ ವಿಭಿನ್ನವಾದ ಆದರೆ ಆಟಕ್ಕೆ ಅಷ್ಟೇ ಉಪಯೋಗಿಯಾಗಿರುವ ಇನ್ನೊಂದು ಜೊತೆ ದಾಳಗಳಿರುವುದು ಸೋಜಿಗವೆನಿಸುತ್ತದೆ.

ಹಿಂದೆ ಹೇಳಿದ ಆರು ಮುಖದ ದಾಳಗಳಿಗಿಂತ 'ಪಗಡೆ' ಆಟದಲ್ಲಿ ಬಳಸುವ ನಾಲ್ಕು ಮುಖದ ದಾಳಗಳು ನಮ್ಮಲ್ಲಿ ಹೆಚ್ಚು ಪ್ರಚಲಿತವಾಗಿವೆ. ಆ ದಾಳದ ನಾಲ್ಕು ಮುಖಗಳಲ್ಲಿ ಕ್ರಮವಾಗಿ ಒಂದು, ಮೂರು, ನಾಲ್ಕು ಮತ್ತು ಆರು ಚುಕ್ಕಿಗಳಿರುತ್ತವೆ. ಅಂತಹ ಎರಡು ದಾಳಗಳನ್ನು ಉರುಳಿಸಿ ಪಗಡೆ ಆಟವಾಡಲಾಗುತ್ತದೆ. ಈ ದಾಳಗಳಿಗಿಂತ ವಿಭಿನ್ನವಾದ (ನಾಲ್ಕು ಮುಖದ ಎರಡು ದಾಳ) ಆದರೆ ಆಟಕ್ಕೆ ಅಷ್ಟೇ ಉಪಯೋಗವಾಗಬಲ್ಲ ಬೇರೆ ಜೊತೆ ದಾಳಗಳಿಲ್ಲ.

ಇದಕ್ಕೆ ಒಂದು ಕಾರಣ : ಪಗಡೆಯ 'ಜೋಡಿ'ಗಳನ್ನು 'ಜೋಡಿ'ಯಾಗಿಯೇ ನಡೆಸಬೇಕಾದರೆ ಜೋಡಿ ಗರಗಳಾದ ೧-೧, ೩-೩, ೪-೪ ಅಥವಾ ೬-೬ ಬೀಳಲೇಬೇಕಾಗುತ್ತದೆ. ಒಂದು ವೇಳೆ ನಿಯಮವನ್ನು ಸಡಿಲುಗೊಳಿಸಿ ಹಿಂದೆ ಹೇಳಿದ ಆರು ಮುಖಗಳ ದಾಳದಾಟದಂತೆ ಎರಡು ದಾಳಗಳಲ್ಲಿ ಬಿದ್ದ ಗರಗಳ ಮೊತ್ತವೇ ಪ್ರಧಾನವೆಂದು ಪರಿಗಣಿಸಿದಾಗಲೂ ಪಗಡೆಯ ದಾಳಗಳಿಗೆ 'ಎಣೆ'ಯಾದ ನಾಲ್ಕು ಮುಖದ ಬೇರೆ ಜೊತೆ ದಾಳಗಳಿಲ್ಲ.

### ಈ ತಿಂಗಳ ಪ್ರಶ್ನೆ

ಎರಡು ಮುಖಗಳ ಒಂದು ದಾಳವನ್ನೂ, ಹದಿನೆಂಟು ಮುಖಗಳ ಇನ್ನೊಂದು ದಾಳವನ್ನೂ ಜೋಡಿಯಾಗಿ ಉರುಳಿಸಿ ಆಡುವ ಆಟವು ಈ ತಿಂಗಳ ಉತ್ತರದಲ್ಲಿ ಕಂಡುಬಂದ ದಾಳಗಳಿಂದ ಆಡುವ ಆಟಕ್ಕೆ 'ಎಣೆ'ಯಾಗುವಂತೆ ದಾಳಗಳ ಮುಖಗಳಲ್ಲಿ ಸಂಖ್ಯೆಗಳನ್ನು ಹೇಗೆ ನಮೂದಿಸಬೇಕು ?

ಬಂಟ್ವಾಳದ ಕೆ. ಶ್ರೀಧರ ಶೆಟ್ಟಿ ಹಾಗೂ ಹಾವೇರಿ ಜಿಲ್ಲೆಯ ಹನುಮಾಪುರದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿರುವ ಶ್ರೀ ನಾಗರಾಜ ಹ. ದೇವಾಂಗದ ಅವರು ಸೆಪ್ಟೆಂಬರ್ ಪ್ರಶ್ನೆಗೆ ಉತ್ತರ ಹೀಗೆ ಕಳಿಸಿದ್ದಾರೆ.

| ಕ | | | | | | ಖ | | | | | |
|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೧ | ೨ | ೩ | ೪ | ೫ | ೬ |

ಮೇಲಿನ 'ಕ' ಪಟ್ಟಿಯಲ್ಲಿರುವ ಪ್ರತಿಯೊಂದು ಸಂಖ್ಯೆಯನ್ನು 'ಖ' ಪಟ್ಟಿಯಲ್ಲಿರುವ ಪ್ರತಿಯೊಂದು ಸಂಖ್ಯೆಯೊಡನೆ ಕೂಡಿಸಿದಾಗ ಬರುವ ೩೬ ಸಂಖ್ಯೆಗಳನ್ನು ಕೊಟ್ಟಿದ್ದಾರೆ.

ಅ) '೨'ರಿಂದ '೧೨' ರ ವರೆಗಿನ ಎಲ್ಲಾ ಸಂಖ್ಯೆಗಳೂ ಇವೆ.

ಆ) ಸಂಖ್ಯೆ '೨' ರಿಂದ '೬'ವರೆಗಿನ ಎಲ್ಲ ಸಂಖ್ಯೆಗಳು ಕ್ರಮವಾಗಿ ೧,೨,೩,೪ ಮತ್ತು ೫ ಬಾರಿ ಇವೆ.

ಇ) ಸಂಖ್ಯೆ '೮' ರಿಂದ '೧೨'ರ ವರೆಗಿನ ಎಲ್ಲ ಸಂಖ್ಯೆಗಳು ಕ್ರಮವಾಗಿ ೫,೪,೩,೨ ಮತ್ತು ೧ ಇವೆ.

ಈ) ಸಂಖ್ಯೆ '೭' ಮಾತ್ರ ೬ ಬಾರಿ ಇದೆ.

# ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| 1 | | 2 | | 3 | ■ | 4 | | 5 |
| | ■ | | ■ | 6 | | | ■ | |
| 7 | 8 | | 9 | ■ | ■ | 10 | | |
| ■ | | ■ | 11 | 12 | | ■ | ■ | |
| 13 | | | ■ | | ■ | 14 | 15 | |
| | ■ | ■ | 16 | | 17 | ■ | | ■ |
| 18 | | 19 | ■ | ■ | 20 | 21 | | 22 |
| | ■ | 23 | | 24 | ■ | | ■ | |
| 25 | | | ■ | 26 | | | | |

**ಎಡದಿಂದ ಬಲಕ್ಕೆ**

೧. ಅವನ ಹೆಸರು ವರ್ಚಸ್ಸು ಯಾರಿಗೂ ತಿಳಿದಿಲ್ಲ [illegible]
೪. ಸೇವೆಗೆ ಪ್ರತಿಯಾಗಿ ನೀಡಿದ ಸಂಭಾವನೆ ೩
೬. ಮಿತಿಮೀರಿದ ಕತ್ತಲೆಯಲಿ ಮನ್ಮಥನ ಮಡದಿಯು ಇದ್ದಾಳೆ ೩
೭. ಪಾತಾಳ ಲೋಕಕ್ಕೆ ಹೋಗುವಾಗ ಸಾಲವೇಕೆ ಸೇರಿತು ? ೪
೧೦. ಚೇಷ್ಟೆ ಮಾಡುತ್ತಲೆ ನಿರ್ವಹಿಸಿದ ಕೆಲಸ ಕಾರ್ಯ ತಿರುವು ಮುರುವಾಗಿದೆ ೩
೧೧. ಮಾಮರ ಚಿಗುರಿ ಕೋಗಿಲೆ ಹಾಡುವ ಸುಂದರ ಋತು ೩
೧೩. ವಿನಯದಿಂದ ಪಡೆದ ಗೆಲುವು ೩
೧೪. ಕಾನನದಲ್ಲಿ ದೊರೆತ ಬಂಗಾರ ೩
೧೬. ಅತಿ ಹತ್ತಿರದಲ್ಲೆ ಇರುವಂತಹುದು ೩
೧೮. ಮನೆಯ ಎದುರಿನ ಕಟ್ಟೆ ವಿಲೋಮವಾಗಿದೆ ೩
೨೦. ಗುರುವು ತನ್ನ ಶಿಷ್ಯವೃಂದಕ್ಕೆ ಹೇಳಿದ ಪಾಠ ೪
೨೩. ಸಭೆಯಲ್ಲಿ ಕೈಗೊಂಡ ಗೊತ್ತುವಳಿ ೩
೨೫. ತವರುಮನೆಗೆ ಹೋಗುವಾಗ ಎದುರಾದ ಕಳ್ಳ ೩
೨೬. ಬೆವರಿಳಿಸಿ ದುಡಿಯುವ ಅನ್ನದಾತ ೫

**ಮೇಲಿನಿಂದ ಕೆಳಕ್ಕೆ**

೧. ಮರಣವಿಲ್ಲದ ಮಹಾನುಭಾವ ೩
೨. ಮತಭೇದ ಮೀರಿ ನಿಂತ ಧರ್ಮಾಧಿಕಾರಿ ೩
೩. ಯಯಾತಿಯಲ್ಲಿ ಹುಡುಕಿದರೆ ದೊರೆಯುವ ಯೋಗಿ ೨
೪. ನಾಟ್ಯಶಾಸ್ತ್ರ ಬರೆದ ಮುನಿ ೩
೫. ಅಂತರಂಗದಲ್ಲಿಯೇ ಹುದುಗಿರುವ ಅಪ್ರಕಟಿತ ಸಾಮರ್ಥ್ಯ [illegible]
೮. ಸಾಮಾನ್ಯ ಪ್ರಾಣಿಯಲ್ಲಿ ಇದು ದೈತ್ಯ ಗಾತ್ರದ ಆನೆ ೩
೯. ಶ್ರೀರಾಮನ ಸುತ ೨
೧೨. ಸಮಸ್ಯೆಯೊಂದನ್ನು ಬಗೆಹರಿಸಲು ಮಾಡಿಕೊಂಡ ಒಪ್ಪಂದ ೩
೧೩. ಬ್ರಹ್ಮ ಬರೆದ ಭವಿಷ್ಯವಂತೆ [illegible]
೧೫. ಹಿಂದೆ ಮುಂದೆ ಹೇಗೆ ಓದಿದರೂ ಇದೊಂದು ಪುಟ್ಟ ಸವುಟು ಅಷ್ಟೆ ೩
೧೭. ಪ್ರಗತಿಯಲ್ಲಿ ಸಿಗುವ ನಕಲು ತಿರುಗಿದೆ ೨
೧೯. ಜನರ ಉದರದಲ್ಲಿರುವ ಜೀರ್ಣಾಂಗ ೩
೨೧. ಲಯವಾಗದ ನಿರ್ದಿಷ್ಟ ಪ್ರದೇಶ ೩
೨೨. ಈ ವಿಶ್ವದಲ್ಲಿ ಯಾರೂ ಶಾಶ್ವತವಲ್ಲ ೩
೨೪. ಸಾವಯವ ಕೃಷಿಯಲ್ಲಿ ವಿಪುಲವಾದ ಬೇಡಿಕೆಯಿರುವ ಕಳೆ ಪದಾರ್ಥ ತಿರುಗಿ ಕುಳಿತಿದೆ ೨

ಜಿ. ಆರ್. ಪ್ರಸನ್ನ ಕುಮಾರ್
ಎ.ಐ.ಎಸ್.ಎಫ್. ಕಾರ್ಯಕರ್ತ, ಮೂಡಿಗೆರೆ, ಚಿಕ್ಕಮಗಳೂರು

# ಬೇಸಿಗೆಯ ತ್ರಿಕೋಣ-ಹೊಸ ವೀಕ್ಷಕರಿಗೊಂದು ಮಾರ್ಗದರ್ಶಿ

ಆಕಾಶದಲ್ಲಿ ನಕ್ಷತ್ರಗಳನ್ನು ಗುರುತಿಸಲು ಹೊರಟವರಿಗೆ ತಬ್ಬಿಬ್ಬಾಗುವುದು ಸಹಜವೇ. ಏಕೆಂದರೆ ಎಲ್ಲೆಗಳನ್ನು ಗುರುತಿಸುವ ಉಪಾಯವೇ ಅಲ್ಲಿಲ್ಲ. ಬಾಹ್ಯಾಕಾಶದಿಂದ ತೆಗೆದ ಏಷಿಯಾ ಖಂಡದ ಚಿತ್ರದಲ್ಲಿ ಭಾರತದ ಗಡಿ ಹುಡುಕುವುದು ಇದಕ್ಕಿಂತ ಸುಲಭ ಎನ್ನಬಹುದು. (ನದಿ, ಪರ್ವತಗಳಂತಹ ಹೆಗ್ಗುರುತುಗಳು ಇರುವುದರಿಂದ !). ಹೊಸ ವೀಕ್ಷಕರಿಗೆ ಸುಲಭವಾಗಲು ಕೆಲವೊಂದು ಚಿಹ್ನೆಗಳನ್ನು ಆಕಾಶದಲ್ಲಿ ಹೆಸರಿಸಲಾಗಿದೆ. ''ಬೇಸಿಗೆಯ ತ್ರಿಕೋಣ'' ಎಂಬುದು ಅವುಗಳಲ್ಲೊಂದು. ಯುರೋಪಿಯನ್ನರಿಗೆ ಬೇಸಿಗೆಯಲ್ಲಿ ರಾತ್ರಿ ಇಡೀ (ರಾತ್ರಿಯ ಅವಧಿ ಐದಾರು ಗಂಟೆಗಳು ಮಾತ್ರ ಎಂಬುದನ್ನು ನೆನಪಿಡಿ) ಕಾಣುವುದರಿಂದ ಈ ಹೆಸರು ಬಂದಿದೆ.

ನಕ್ಷೆಯಲ್ಲಿ ಎದ್ದು ಕಾಣುವ ನಕ್ಷತ್ರ ಪುಂಜಗಳು ಸಿಗ್ನಸ್ (ರಾಜಹಂಸ), ಅಕ್ವಿಲಾ (ಗರುಡ) ಮತ್ತು ಲೈರಾ (ವೀಣಾ). ಇವುಗಳ ಪ್ರಕಾಶಮಾನ ನಕ್ಷತ್ರಗಳು ಕ್ರಮವಾಗಿ ಹಂಸಾಕ್ಷಿ (ದೆನೆಬ್), ಶ್ರವಣ (ಆಲ್ಟೇರ್) ಮತ್ತು ಅಭಿಜಿತ್ (ವೇಗಾ). ತಿಳಿಯಾದ ಮೋಡವಿದ್ದರೂ ಕಾಣುವ ಈ ನಕ್ಷತ್ರಗಳನ್ನು ನಕ್ಷೆಯ ಸಹಾಯದಿಂದ ಗುರುತಿಸಿ ನಕ್ಷೆಯನ್ನು ನೆತ್ತಿಯ ಮೇಲೆ ಹಿಡಿದು ಉತ್ತರ ದಕ್ಷಿಣಗಳನ್ನು ಹೊಂದಿಸಿ ಹಿಡಿದುಕೊಳ್ಳಿ. ಈ ಮೂರು ನಕ್ಷತ್ರಗಳು ಒಂದು ಲಂಬ ತ್ರಿಕೋಣವನ್ನು ರಚಿಸುತ್ತವೆ ಎಂಬುದನ್ನು ಗಮನಿಸಿ. ಇದೇ ಬೇಸಿಗೆಯ ತ್ರಿಕೋಣ.

ಈ ತ್ರಿಕೋಣವನ್ನು ಕಂಡುಹಿಡಿಯಲು ನೀವು ಸಮರ್ಥರಾದರೆ ಆಕಾಶ ವೀಕ್ಷಣೆಯ ಮೊದಲನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದೀರಿ ಎಂದರ್ಥ.

ಸೂರ್ಯಾಸ್ತದ ನಂತರ (ಸುಮಾರು ಏಳು ಗಂಟೆಯಲ್ಲಿ) ನೆತ್ತಿಯಲ್ಲಿ ಕಾಣುವ ಈ ತ್ರಿಕೋಣವನ್ನು ಎರಡು-ಮೂರು ಗಂಟೆಗಳ ಬಳಿಕ ಅಂದರೆ ಸುಮಾರು ಒಂಭತ್ತು-ಹತ್ತು ಗಂಟೆಯ ಹೊತ್ತಿನಲ್ಲಿ ಪುನಃ ಗಮನಿಸಿ. ಇಡೀ ತ್ರಿಕೋಣವೇ ಪಶ್ಚಿಮಕ್ಕೆ ಸರಿದಿರುವುದು ವ್ಯಕ್ತವಾಗುತ್ತದೆ. ಇದೇ ನಕ್ಷತ್ರಗಳ ದೈನಂದಿನ ಚಲನೆ. ಭೂಮಿ ತನ್ನ ಅಕ್ಷದ ಮೇಲೆ ಸುತ್ತುವ ಕಾರಣ ಸೂರ್ಯ ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುಗಿದಂತೆ ನಕ್ಷತ್ರಗಳೂ ಪೂರ್ವದಿಂದ ಪಶ್ಚಿಮಕ್ಕೆ ಸರಿದಂತೆ ಕಾಣುತ್ತವೆ. ಈ ಅಂಶ ಹೀಗೆ ನಕ್ಷತ್ರಗಳ ವಿನ್ಯಾಸವನ್ನು ಗಮನಿಸುವುದರಿಂದ ತಿಳಿಯುತ್ತದೆ. ಇನ್ನೊಂದು ಅಂಶವೆಂದರೆ ವಾರ್ಷಿಕ ಚಲನೆ. ಪ್ರತಿರಾತ್ರಿ ಈ ವಿನ್ಯಾಸವನ್ನು ಗಮನಿಸುತ್ತಾ ಬಂದರೆ, ಅವು ಕ್ರಮೇಣ ಹೆಚ್ಚು ಹೆಚ್ಚು ಪಶ್ಚಿಮಕ್ಕೆ ಸರಿದಿರುವುದು ತಿಳಿಯುತ್ತದೆ. ಇದನ್ನು ವಿವರಿಸಲು ನಾವು ಚಂದ್ರನ ಸಹಾಯವನ್ನು ಪಡೆಯೋಣ. ಅಕ್ಟೋಬರ್ ೧ರಂದು ಸಂಜೆ ಪಶ್ಚಿಮದತ್ತ ನೋಟ ಹರಿಸಿ. ಗಣಪತಿಯ ಸೊಂಡಿಲಂತೆ ಕಾಣುವ ವೃಶ್ಚಿಕ ರಾಶಿಯ ಅನುರಾಧಾ ನಕ್ಷತ್ರದ ಬಳಿ ಚಂದ್ರನನ್ನು ಕಾಣಬಹುದು. ಪಶ್ಚಿಮ ದಿಗಂತ ಶುಭ್ರವಾಗಿದ್ದರೆ ಶುಕ್ರ ಮತ್ತು ಬುಧ ಗ್ರಹಗಳನ್ನೂ ಕಾಣಬಹುದು. ಪುನಃ ಅಕ್ಟೋಬರ್ ೨೯ರಂದು ಸಂಜೆ ಸೂರ್ಯಾಸ್ತವಾದ ಕೂಡಲೇ ಪಶ್ಚಿಮದತ್ತ ತಿರುಗಿ. ಬಾಲಚಂದ್ರ ಪುನಃ ಅನುರಾಧಾ ನಕ್ಷತ್ರದ ಬಳಿಯೇ ಕಾಣುತ್ತದೆ ಯಾದರೂ, ವೃಶ್ಚಿಕರಾಶಿಯ ಹೆಚ್ಚಿನ ನಕ್ಷತ್ರಗಳು ಮುಳುಗಿಹೋಗಿರುತ್ತವೆ. ಅಂದರೆ ಒಂದು ತಿಂಗಳಲ್ಲಿ ಈ ಬಗೆಯ ಬದಲಾವಣೆ ಉಂಟಾಗುತ್ತದೆ.




೬ ರಂದು ಬುಧಗ್ರಹ ಸೂರ್ಯನಿಂದ ಗರಿಷ್ಠ ಕೋನ ದಲ್ಲಿರುವುದರಿಂದ ಅಕ್ಟೋಬರ್ ಮೊದಲವಾರ ಬುಧಗ್ರಹವನ್ನು ಹುಡುಕುವ ಪ್ರಯತ್ನ ಯಶಸ್ವಿ ಯಾಗುವುದು.

ಹದಿಮೂರರಂದು (೧೪ ಗಂಟೆ ೩೦ ನಿ) ಹುಣ್ಣಿಮೆ. ಆಗ ಚಂದ್ರನ ಸಮೀಪ ಇರುವ ನಕ್ಷತ್ರವೇ ಅಶ್ವಿನಿ. ಆದ್ದರಿಂದ ಈ ತಿಂಗಳ ಹೆಸರು ಆಶ್ವಯುಜ. ಇದು ಅಷ್ಟೇನೂ ಪ್ರಕಾಶಮಾನವಾದ ನಕ್ಷತ್ರವಲ್ಲ, ಆದ್ದರಿಂದ ಸಂಜೆ




ಚಂದ್ರೋದಯವಾದಾಗ ಅಶ್ವಿನಿ ಇರುವ ಮೇಷರಾಶಿಗಿಂತ ಸ್ವಲ್ಪ ಉತ್ತರಕ್ಕಿರುವ ಚೌಕ ಪೆಗಸಸ್ (ನಕುಲ) ಅನ್ನು ಗುರುತಿಸುವುದು ಸುಲಭ. ಹದಿನಾರರಂದು ಚಂದ್ರನ ಪಕ್ಕ ಕಾಣುವ ಗ್ರಹ ಶನಿ. ೧೭ರಂದು ಗುರುಗ್ರಹ ಚಂದ್ರನ ಪಕ್ಕ ಇರುತ್ತದೆ. ಸಮೀಪದಲ್ಲೇ ಕೆಂಪುನಕ್ಷತ್ರ ರೋಹಿಣಿಯೂ ಇರುತ್ತದೆ. ಹೀಗೆ ಮುಂದುವರಿದ ಚಂದ್ರ ಬಾಲಚಂದ್ರನ ಆಕಾರ ಪಡೆದಾಗ (೨೪ರಂದು) ಮಂಗಳಗ್ರಹದ ಪಕ್ಕ ಕಾಣುತ್ತದೆ. ೨೭ರಂದು (೧೩ ಗಂ. ೨೮ ನಿ) ಅಮಾವಾಸ್ಯೆ. ೨೯-೩೦ರ ಸಂಜೆ ಬಾಲಚಂದ್ರ ಶುಕ್ರಗ್ರಹವನ್ನು ಸಮೀಪಿಸಿ ಬೇರೆ ಆಗುವುದನ್ನು ಕಾಣಬಹುದು.

ಗುರು ಮತ್ತು ಶನಿ ಸೂರ್ಯಾಸ್ತವಾದ ಮೇಲೆ ಸುಮಾರು ಎರಡು ಗಂಟೆಗಳ ಬಳಿಕ ಉದಯಿಸುತ್ತವೆ. ಆದ್ದರಿಂದ ೧೩ರ ನಂತರ ಚಂದ್ರನನ್ನು ಸಂಜೆ ಸೂರ್ಯಾಸ್ತವಾದ ತಕ್ಷಣವೇ ನೋಡುವುದು ಸಾಧ್ಯವಿಲ್ಲ ಎಂಬುದನ್ನು ಗಮನಿಸಿ.

ದಕ್ಷಿಣದ ವೃಶ್ಚಿಕರಾಶಿಯಿಂದ ಉತ್ತರದ ಸಿಗ್ನಸ್ (ರಾಜಹಂಸ) ಮತ್ತು ಕೆಸಿಯೋಪಿಯ ಮೂಲಕ ಹಾದು ಹೋಗುವ ಆಕಾಶಗಂಗೆಯನ್ನು ನೋಡಲು ಇದು ಪ್ರಶಸ್ತವಾದ ಸಮಯ (ಮಳೆ, ಮೋಡ ಬಿಡುವು ಕೊಟ್ಟರೆ ಮಾತ್ರ !). ಇದಲ್ಲದೆ ಈ ತಿಂಗಳಲ್ಲಿ ಎರಡು ಪ್ರಮುಖ ಉಲ್ಕಾವೃಷ್ಟಿಗಳಿವೆ. ಜಿಯೋಕೋಬಿನಿ ಝಿನ್ನರ್ ಎಂಬ ಧೂಮಕೇತು ೧೯೯೮ರ ನವೆಂಬರ್‌ನಲ್ಲಿ ಸೂರ್ಯನನ್ನು ಸಮೀಪಿಸಿ ಹಿಂತಿರುಗಿತು. ಅಕ್ಟೋಬರ್ ೮ರಂದು ಗರಿಷ್ಠ ಮುಟ್ಟುವ ಡ್ರಾಕೊನಿಡಿ ಉಲ್ಕಾವೃಷ್ಟಿಗೆ ಇದರ ಧೂಳೀ ಕಾರಣ. ಸುಮಾರು (ಗಂಟೆಗೆ) ೬೦-೭೦ ಉಲ್ಕೆಗಳನ್ನು ನಿರೀಕ್ಷಿಸಬಹುದು. ಹ್ಯಾಲೀ ಧೂಮಕೇತುವಿನ ಧೂಳು ಸೃಷ್ಟಿಸುವ ಒರಿಯನಿಡ್ಸ್ ಉಲ್ಕೆಗಳು ಅಕ್ಟೋಬರ್ ೨೧ರಂದು ಗರಿಷ್ಠ ಸಂಖ್ಯೆ ಮುಟ್ಟುವುವು. ಆದರೆ ಚಂದ್ರನ ಬೆಳಕು ಹೆಚ್ಚಾಗಿರುವುದರಿಂದ ಕ್ಷೀಣವಾದ ಉಲ್ಕೆಗಳನ್ನು ನೋಡುವುದು ಸಾಧ್ಯವಾಗದು.

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಶ್ರೀ ಟಿ. ಚೌಡಯ್ಯ ರಸ್ತೆ, ಬೆಂಗಳೂರು- ೫೬೦ ೦೦೧

# ಉಣ್ಣೆಗಳಿಂದ ಅಪಾಯವಿದೆಯೇ ?

ಉಣ್ಣೆಗಳ (Ticks) ಗಾತ್ರ ಕಣ್ಣಿಗೆ ಕಾಣಿಸಿಕೊಳ್ಳುವಂತಿದ್ದರೂ ಅವು ನಮ್ಮ ಗಮನ ಸೆಳೆಯುವುದು ರಕ್ತ ಹೀರಿ ಉಬ್ಬಿಕೊಂಡಾಗಲೇ. ಉಣ್ಣೆಗಳು ರಕ್ತ ಹೀರುವ, ಸಂಧಿಪದಿಗಳ ಗುಂಪಿಗೆ ಸೇರಿದ ಬಾಹ್ಯ ಪರಾವಲಂಬಿ ಜೀವಿಗಳು. ಇವುಗಳ ದೇಹ ದೀರ್ಘ ವೃತ್ತಾಕಾರವಾಗಿದ್ದು ೨-೩ ಮಿ. ಮೀ. ಉದ್ದವಿರುತ್ತದೆ. ವಿಂಗಡಿಸಲ್ಪಟ್ಟ ದೇಹ ಭಾಗಗಳಿಲ್ಲದ ಉಣ್ಣೆಗಳಿಗೆ ೪ ಜೊತೆ ಕಾಲುಗಳಿರುತ್ತವೆ. ರಕ್ತ ಹೀರುವ ವಿಶಿಷ್ಟ ರೀತಿಯ ಬಾಯಿಯಿರುತ್ತದೆ.

ಏಕೇರಿ ವರ್ಗಕ್ಕೆ ಸೇರಿದ ಈ ಜೀವಿಗಳಲ್ಲಿ ಸುಮಾರು ೮೫೦ ಪ್ರಭೇದಗಳಿವೆ. ಇವುಗಳಲ್ಲಿ ಎಗ್ರೇಸಿಡೆ ಕುಟುಂಬಕ್ಕೆ ಸೇರಿದ ಉಣ್ಣೆಗಳ ದೇಹ ಮೃದುವಾಗಿರುತ್ತದೆ. ಇಕ್ಸೋಡಿಡೆ ಕುಟುಂಬಕ್ಕೆ ಸೇರಿದವುಗಳ ದೇಹ ಗಟ್ಟಿಯಾಗಿರುತ್ತದೆ.

ಉಣ್ಣೆಗಳು ಮನುಷ್ಯರ ಮತ್ತು ಜಾನುವಾರುಗಳ ರಕ್ತ ಹೀರುವುದಲ್ಲದೆ ಕೆಲವು ರೋಗಾಣುಗಳಿಗೆ ವಾಹಕಗಳಾಗಿಯೂ ಕಾರ್ಯನಿರ್ವಹಿಸುವುದರಿಂದ ಅವುಗಳಿಗೆ ವೈದ್ಯಕೀಯ ಪ್ರಾಮುಖ್ಯತೆಯಿದೆ. ಇವು ಮನುಷ್ಯರಿಗೆ ರೋಗಗಳನ್ನುಂಟುಮಾಡುವ ವೈರಸ್, ಪ್ರೊಟೊಜೋವ, ರಿಕ್ಕೆಟ್ಸಿಯಾ ಮತ್ತು ಬ್ಯಾಕ್ಟೀರಿಯಾಗಳಿಗೆ ವಾಹಕಗಳಾಗಿವೆ. ಈ ಗುಂಪುಗಳಿಗೆ ಸೇರಿದ ಕೆಲವು ರೋಗಗಳ ಉದಾಹರಣೆಗಳನ್ನು ಇಲ್ಲಿ ನೀಡಲಾಗಿದೆ.

**೧. ವೈರಸ್ ರೋಗ**

ಕ್ಯಾಸನೂರು ಕಾಡಿನ ಕಾಯಿಲೆ ೧೯೫೭ರಲ್ಲಿ ಪ್ರಥಮವಾಗಿ ಕರ್ನಾಟಕದಲ್ಲಿ ಕಾಣಿಸಿಕೊಂಡಿತು. ಕಾಡಿನಲ್ಲಿ ಮಂಗಗಳು ಸಾವಿಗೀಡಾದುವು. ಕಾಡು ಪ್ರದೇಶಗಳಲ್ಲಿ ವಾಸವಾಗಿದ್ದ ಜನರಿಗೂ ಈ ರೋಗ ಹರಡಿಕೊಂಡಿತು. ಈ ರೋಗ ಹರಡಲು ಸಹಾಯಕವಾಗುವ ಹೆಮಾಫ್ಯಾಸಾಲಿಸ್ ಸ್ಪಿನಿಜೆರ ಎಂಬ ಉಣ್ಣೆಗಳು ಜಾನುವಾರುಗಳ ಮೇಲೂ ಕಾಣಿಸಿಕೊಳ್ಳುತ್ತವೆ.

**೨. ಪ್ರೊಟೊಜೋವಗಳು**

ಬೆಬೆಸಿಯೋಸ್ ಜಾನುವಾರುಗಳಲ್ಲಿ ಕಾಣಿಸಿಕೊಳ್ಳುವ ಒಂದು ಪ್ರಾಮುಖ್ಯ ರೋಗ. ಬೆಬೆಸಿಯೋಸ್ ಡಾತವರ್ಜಿನ್ಸ್ ಎಂಬ ಪ್ರೊಟೊಜೋವ ಇಕ್ಸೋಡಿಸ್ ರಿಸಿನಸ್ ಪ್ರಭೇದದ ಉಣ್ಣೆಗಳಿಂದ ಹರಡುತ್ತದೆ. ಮನುಷ್ಯರಲ್ಲಿ ಈ ರೋಗ ಕಾಣಿಸಿಕೊಳ್ಳುವುದು ಅಪರೂಪವಾದರೂ ಯುರೋಪ್ ಮತ್ತು ರಷ್ಯಾ ದೇಶದ ಕೆಲವು ಭಾಗಗಳಿಂದ ವರದಿಯಾಗಿದೆ.

**೩. ರಿಕೆಟ್ಸಿಯೇ**

ರಾಕ್ಕಿ ಪರ್ವತದ ಜ್ವರ ಎಂದು ಕರೆಯಲ್ಪಡುವ ಕಾಯಿಲೆಯು ರಾಕ್ಕಿ ಪರ್ವತ ಪ್ರದೇಶದಲ್ಲಿ ಪ್ರಥಮವಾಗಿ ಕಾಣಿಸಿಕೊಂಡಿತು. ಮೂಷಕ ವರ್ಗಕ್ಕೆ ಸೇರಿದ ಪ್ರಾಣಿಗಳ ಸಂಖ್ಯೆ ಅಧಿಕವಿರುವಲ್ಲಿ ಈ ರೋಗದ ಬಾಧೆ ಹೆಚ್ಚಾಗಿರುತ್ತದೆ. ಹೆಂಗಸರು ಮತ್ತು ಮಕ್ಕಳು ಈ ರೋಗಕ್ಕೆ ತುತ್ತಾಗುವುದು ಅಧಿಕ. ಡರ್ಮಾಸೆಂಟರ್ ಆ್ಯಂಡರ್ಸೋನಿ ಪ್ರಭೇದದ ಉಣ್ಣೆಗಳು ಈ ರೋಗಾಣುಗಳಿಗೆ ವಾಹಕಗಳಾಗಿವೆ.

**೪. ಬ್ಯಾಕ್ಟೀರಿಯಾಗಳು**

ಟುಲರೇಮಿಯ ಎಂಬ ರೋಗ ಪ್ಲೇಗ್ ರೋಗದಷ್ಟೇ ಮಾರಕವಾದದ್ದು. ಈ ರೋಗ ಕ್ಯಾಲಿಫೋರ್ನಿಯದ ಟುಲಾರೆ ಪ್ರದೇಶದಲ್ಲಿ ಪ್ರಥಮವಾಗಿ ೧೯೧೧ರಲ್ಲಿ ಅಳಿಲುಗಳಲ್ಲಿ ಕಾಣಿಸಿಕೊಂಡಿತು. ಫ್ರಾನ್ಸಿಸೆಲ್ಲ ಟುಲರೆನ್ಸಿಸ್ ಎಂಬ ಬ್ಯಾಕ್ಟೀರಿಯಾ ಈ ರೋಗಕ್ಕೆ ಕಾರಣವಾಗಿದೆ.

ಇಕ್ಸೋಡಿಸ್ ಮತ್ತು ಡರ್ಮಸೆಂಟರ್ ಪ್ರಭೇದಗಳಿಗೆ ಸೇರಿದ ಉಣ್ಣೆಗಳು ಈ ಬ್ಯಾಕ್ಟೀರಿಯಾಕ್ಕೆ ವಾಹಕಗಳಾಗಿವೆ.



ಉಣ್ಣೆಗಳು ವಾಹಕವಾಗಿ ಮನುಷ್ಯರಿಗೆ ಹರಡುವ ಇನ್ನೂ ಹಲವು ರೋಗಗಳಿವೆ. ರೋಗ ಹರಡುವ ಉಣ್ಣೆಗಳನ್ನು ನಿರ್ಲಕ್ಷಿಸಬಾರದು. ಈ ರೋಗಗಳನ್ನು ದೂರವಿರಿಸಲು ಕಾಡು ಪ್ರದೇಶಗಳಿಗೆ ಭೇಟಿ ನೀಡುವಾಗ ಉಣ್ಣೆಗಳ ಕಡಿತಕ್ಕೊಳಗಾಗದಂತೆ ರಕ್ಷಣೆ ಒದಗಿಸಿಕೊಳ್ಳಬೇಕು. ವಾಸಸ್ಥಳ ಮತ್ತು ದೇಹದ ಸ್ವಚ್ಛತೆಗೆ ಗಮನ ಹರಿಸಬೇಕು.

# ವಿಸ್ಮಯಕಾರಿ ಬದುಕುವ ತಂತ್ರ

ಅಲಸಂದೆ, ಅವರೆ, ಬದನೆ ಮೊದಲಾದ ತರಕಾರಿ ಗಿಡಗಳ, ಗುಲಾಬಿ, ಸೇವಂತಿಗೆ, ದಾಸವಾಳ ಮೊದಲಾದ ಅಲಂಕಾರ ಸಸ್ಯಗಳ ಚಿಗುರು, ಎಲೆ ಮತ್ತು ಮೃದು ಕಾಂಡಗಳ ಮೇಲೆ ಸಸ್ಯ ಹೇನುಗಳ ಸಮೂಹವೇ ಕಾಣಿಸಿಕೊಳ್ಳುವುದುಂಟು. ಸಸ್ಯ ಹೇನುಗಳ ರಸ ಹೀರುವಿಕೆಯಿಂದ ಎಲೆ, ಚಿಗುರುಗಳು ಮುದುಡಿಕೊಳ್ಳುತ್ತವೆ. ನಂಜು ರೋಗಗಳು ಹರಡಿಕೊಳ್ಳುತ್ತವೆ, ಬೆಳವಣಿಗೆ ಕುಂಠಿತವಾಗಿ ಇಳುವರಿ ಕಡಿಮೆಯಾಗುತ್ತದೆ.



ಸಸ್ಯ ಹೇನುಗಳು ಮೃದು ದೇಹದ ಚಿಕ್ಕ ಕೀಟಗಳು. ಇವು ತಮ್ಮ ಹೀರು ಕೊಳವೆಯನ್ನು ಸಸ್ಯಭಾಗಗಳಿಗೆ ಚುಚ್ಚಿ ದಿನಗಟ್ಟಲೆ ರಸ ಹೀರುತ್ತಾ ಇರುತ್ತವೆ. ಪೋಷಕಾಂಶಗಳು ಚಲಿಸುವ ಭಾಗಕ್ಕೆ ಒಮ್ಮೆ ಹೀರುಕೊಳವೆಯನ್ನು ಚುಚ್ಚಿದ ಬಳಿಕ ಅವು ಚಲಿಸುವುದೇ ಕಡಿಮೆ. ಸಸ್ಯ ಹೇನುಗಳು ನಿರಂತರ ಹೀರುವ ಈ ರಸದಲ್ಲಿ ಸುಕ್ರೋಸ್‌ನಂತ ಸಕ್ಕರೆಯ ಅಂಶವೇ ಅಧಿಕವಾಗಿದ್ದು ಅವು ಅವಶ್ಯಕ ಅಮೈನೊ ಆಸಿಡ್‌ಗಳನ್ನು ಹೇಗೆ ಒದಗಿಸಿಕೊಳ್ಳುತ್ತವೆ ಎಂಬುದು ವಿಜ್ಞಾನಿಗಳಿಗೊಂದು ಸಮಸ್ಯೆಯಾಗಿತ್ತು. ಇಂಗ್ಲೆಂಡಿನ ಯಾರ್ಕ್ ವಿಶ್ವವಿದ್ಯಾಲಯದ ಜೀವಶಾಸ್ತ್ರ ವಿಭಾಗದ ವಿಜ್ಞಾನಿ ಡಾ|| ಅಂಜೇಲ ಡುಗ್ಲಾಸ್ ಮತ್ತು ಅವರ ತಂಡ ಇದರ ರಹಸ್ಯವನ್ನು ಕಂಡುಹಿಡಿದಿದೆ.

ಸಸ್ಯ ಹೇನುಗಳ ದೇಹದಲ್ಲಿ ಸಾಮಾನ್ಯ ಕೋಶಗಳಿಗಿಂತ ದೊಡ್ಡ ಗಾತ್ರದ ಕೆಲವು ವಿಶಿಷ್ಟ ಕೋಶಗಳಿರುತ್ತವೆ. ಈ ಕೋಶಗಳಲ್ಲಿ ಸಾವಿರಾರು ಬ್ಯಾಕ್ಟೀರಿಯಾಗಳು ಜೀವಿಸುತ್ತವೆ. ಒಂದು ಸಸ್ಯಹೇನಿನ ದೇಹದೊಳಗೆ ೧೦ ಮಿಲಿಯ ಬ್ಯಾಕ್ಟೀರಿಯಾಗಳಿರಬಹುದೆಂದು ಅಂದಾಜುಮಾಡಲಾಗಿದೆ. ಈ ಬ್ಯಾಕ್ಟೀರಿಯಾಗಳು ತಾಯಿ ಕೀಟದಿಂದ ಮರಿಗಳಿಗೂ ವರ್ಗಾಯಿಸಲ್ಪಡುತ್ತವೆ. ಬ್ಯಾಕ್ಟೀರಿಯಾ ಮತ್ತು ಹೇನುಗಳು ಸಹಜೀವನ ನಡೆಸುತ್ತವೆ. ಇದನ್ನು ಸಿಂಬಯೋಸಿಸ್ ಎನ್ನುತ್ತಾರೆ.

ಬ್ಯಾಕ್ಟೀರಿಯಾಗಳ ಪಾತ್ರವೇನೆಂದು ನಿರ್ಧರಿಸಲು ವಿಜ್ಞಾನಿಗಳು ಪ್ರತಿಜೈವಿಕ (ಆಂಟಿಬಯಾಟಿಕ್)ಗಳನ್ನು ಉಪಯೋಗಿಸಿ ಸಸ್ಯ ಹೇನುಗಳನ್ನು ಬ್ಯಾಕ್ಟೀರಿಯಾದಿಂದ ಮುಕ್ತಗೊಳಿಸಿದರು. ಪರಿಣಾಮ ಕುತೂಹಲಕಾರಿಯಾಗಿತ್ತು. ಬ್ಯಾಕ್ಟೀರಿಯಾ ರಹಿತ ಸಸ್ಯಹೇನುಗಳ ಬೆಳವಣಿಗೆ ಕಡಿಮೆಯಾಗಿ ಸಾಮಾನ್ಯ ಗಾತ್ರದ ೧/೫ ಭಾಗಕ್ಕೆ ಇಳಿಯಿತು. ಸಾಮಾನ್ಯ ಹೇನುಗಳು ೩ ವಾರಗಳ ಅವಧಿಯಲ್ಲಿ ೫೦-೮೦ ಮರಿಗಳನ್ನಿಟ್ಟರೆ ಬ್ಯಾಕ್ಟೀರಿಯಾಗಳಿಲ್ಲದ ಹೇನುಗಳು ಕೆಲವೇ ಮರಿಗಳನ್ನಿಟ್ಟವು. ಈ ಮರಿಗಳು ಒಂದೆರಡು ದಿವಸಗಳಲ್ಲಿ ಸತ್ತುಹೋದುವು.

ಸಸ್ಯ ಹೇನುಗಳ ಸಾಮಾನ್ಯ ಬೆಳವಣಿಗೆ ಮತ್ತು ಸಂತಾನೋತ್ಪತ್ತಿಗೆ ಅವಶ್ಯಕವಾದ ಅಮೈನೊ ಆಮ್ಲಗಳನ್ನು ಬ್ಯಾಕ್ಟೀರಿಯಾಗಳು ಒದಗಿಸುತ್ತಿವೆ ಎಂಬುದು ಇದರಿಂದ ಖಚಿತವಾಯಿತು. ಪ್ರತಿ ಜೈವಿಕಗಳನ್ನು ಉಪಯೋಗಿಸಿ ಹಾನಿಕಾರಕ ಸಸ್ಯ ಹೇನುಗಳ ಸಂಖ್ಯೆಯನ್ನು ಕಡಿಮೆಮಾಡುವ ಸಾಧ್ಯತೆಗಳಿವೆ. ಆದರೆ ಈ ಕೆಲಸವನ್ನು ಸಸ್ಯ ಹೇನುಗಳ ಪರಭಕ್ಷಕ ಕೀಟಗಳಾದ ಗುಲಗಂಜಿ ಕೀಟಗಳು (ಲೇಡಿಬರ್ಡ್ ಬೀಟಲ್ಸ್) ನಿಸರ್ಗದಲ್ಲಿ ನಿರ್ವಹಿಸುತ್ತಿವೆ.

**ಡಾ|| ಪಿ. ಶಿವರಾಮ ರೈ**

# ಆಹಾರದ ಅಭಾವಕ್ಕೊಂದು ಪರ್ಯಾಯ ವ್ಯವಸ್ಥೆ

ಜಾಗತಿಕ ಮಟ್ಟದಲ್ಲಿ ಜನಸಂಖ್ಯೆ ಏರುತ್ತಿದ್ದಂತೆಯೇ ಆಹಾರ ಧಾನ್ಯಗಳ ಉತ್ಪಾದನೆ ಕಡಿಮೆಯಾಗುತ್ತಾ ಬರುತ್ತಿದೆ. ಜನಸಂಖ್ಯೆ ಹೆಚ್ಚಾದಂತೆ ವ್ಯವಸಾಯ ಕೈಗೊಳ್ಳುವ ಜಮೀನಿನ ವಿಸ್ತೀರ್ಣ ಕಡಿಮೆಯಾಗುತ್ತಾ ಬರುತ್ತಿದೆ. ವಿಶ್ವಸಂಸ್ಥೆಯ ಆಹಾರ ಮತ್ತು ಕೃಷಿ ಸಂಸ್ಥೆಯ ಲೆಕ್ಕಾಚಾರದಂತೆ ೧೯೯೮-೯೯ನೇ ವರ್ಷದಲ್ಲಿ ವಿಶ್ವದ ಆಹಾರಧಾನ್ಯಗಳ ಉತ್ಪಾದನೆ ೧.೮ ಬಿಲಿಯ ಟನ್ನುಗಳೆಂದು ಅಂದಾಜು ಮಾಡಲಾಗಿದ್ದರೂ ಅದು ಅವಶ್ಯಕತೆಗಿಂತ ಶೇಕಡಾ ೧.೩ರಷ್ಟು ಕಡಿಮೆಯಾಗಿತ್ತು. ಇದೇ ರೀತಿ ಕೊರತೆಯುಂಟಾದರೆ ಮುಂದೊಂದು ದಿನ ಆಹಾರ ವಸ್ತುಗಳ ಅಭಾವ ಕಂಡುಬರುವುದಂತೂ ಸತ್ಯ ಸಂಗತಿ. ಅಭಾವ ತಲೆದೋರಿದಾಗ ಮನುಷ್ಯ ತನ್ನನ್ನು ಪೋಷಿಸಿಕೊಳ್ಳಲು ಪರ್ಯಾಯ ವ್ಯವಸ್ಥೆಯೊಂದನ್ನು ಕಂಡುಕೊಳ್ಳಬೇಕಷ್ಟೆ ?

ಕೆನಡಾ ದೇಶದ ಮೊಂಟ್ರಿಯಾಲಿನ ಕೀಟ ಪ್ರಯೋಗ ಶಾಲೆಯ ಸ್ಥಾಪಕ ನಿರ್ದೇಶಕರಾದ ಜಾರ್ಜ್ ಬೋಸ್ಸಾರ್ಡ್ ಎಂಬ ಕೀಟ ತಜ್ಞರು ಇದಕ್ಕೊಂದು ಪರ್ಯಾಯ ವ್ಯವಸ್ಥೆ ಸೂಚಿಸಿದ್ದಾರೆ. ಇವರ ವ್ಯವಸ್ಥೆಗೆ ಮನ್ನಣೆ ನೀಡುವುದಾದರೆ ಮನುಷ್ಯ ಕೀಟಗಳನ್ನು ತನ್ನ ಆಹಾರದಲ್ಲಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಬೋಸ್ಸಾರ್ಡ್‌ರು ತನ್ನ ಸಲಹೆಗೆ ಸಮರ್ಥನೆಯನ್ನೂ ನೀಡಿದ್ದಾರೆ. ಇದೇನೆಂದು ತಿಳಿದುಕೊಳ್ಳೋಣ.

ಮನುಷ್ಯ ಶ್ರೀಮಂತನಾದಂತೆಯೇ ಮಾಂಸಾಹಾರದತ್ತ ಅವನ ಒಲವು ಅಧಿಕವಾಗುತ್ತದೆ. ಒಬ್ಬ ಮನುಷ್ಯನ ಅವಶ್ಯಕತೆಗೆ ಸಾಕಾಗುವಷ್ಟು ಮಾಂಸ ಉತ್ಪಾದಿಸಲು ಅವನ ಅವಶ್ಯಕತೆಗಿಂತ ಅಧಿಕ ಪಾಲು ಕಾಳುಗಳನ್ನು ಪ್ರಾಣಿಗಳಿಗೆ ಆಹಾರವಾಗಿ ನೀಡಬೇಕಾಗುತ್ತದೆ. ಒಂದು ಕಿಲೋಗ್ರಾಂ ಮಾಂಸ ದೊರೆಯಲು ಹಲವು ಕಿಲೋಗ್ರಾಂಗಳಷ್ಟು ಕಾಳು ಕಡ್ಡಿಗಳನ್ನು ಅವುಗಳಿಗೆ ಆಹಾರವಾಗಿ ಕೊಡಬೇಕಾಗುತ್ತದೆ. ಹಸಿವನ್ನು ನೀಗಿಸಿಕೊಳ್ಳಲು ಕೀಟಗಳನ್ನು ಆಹಾರವಾಗಿ ಮನುಷ್ಯ ಉಪಯೋಗಿಸಿಕೊಂಡರೆ ಕೆಲವೊಂದು ಪ್ರಯೋಜನಗಳಿವೆ.

ಪೌಷ್ಟಿಕಾಂಶಗಳನ್ನು ಒದಗಿಸುವಲ್ಲಿ ಕೀಟಾಹಾರವೇನೂ ಕೆಳದರ್ಜೆಯದ್ದಲ್ಲ. ಕೀಟಗಳ ದೇಹವು ಅಧಿಕ ಪ್ರೊಟೀನಿನ ಅಂಶವನ್ನೊಳಗೊಂಡಿದೆ. ಕೋಳಿಯ ಮಾಂಸದಲ್ಲಿ ಶೇ. ೧೪-೨೦ರಷ್ಟು ಪ್ರೊಟೀನಿನ ಅಂಶವಿದ್ದರೆ ಕೀಟಗಳ ದೇಹ ಶೇಕಡಾ ೮೦ರಷ್ಟು ಪ್ರೊಟೀನನ್ನೊಳಗೊಂಡಿದೆ. ಕೀಟಗಳನ್ನು ಸಾಕಲು ಬೆಳೆಗಳನ್ನು ಬೆಳೆಸಲು ಬೇಕಾಗುವಷ್ಟು ವಿಸ್ತಾರದ ಜಮೀನಿನ ಅವಶ್ಯಕತೆಯಿರುವುದಿಲ್ಲ. ಆದ್ದರಿಂದ ಆಹಾರ ಸಂಸ್ಕರಣಾ ಕೈಗಾರಿಕೆಗಳು ಮುಂದಿನ ದಿನಗಳಲ್ಲಿ ಕೀಟಗಳನ್ನು ಉತ್ಪಾದಿಸಿ ಆಹಾರ ಉತ್ಪನ್ನಗಳನ್ನು ತಯಾರಿಸುವ ಉದ್ದಿಮೆಯನ್ನು ಸ್ಥಾಪಿಸಬಹುದು.

ಕೀಟಗಳನ್ನು ಆಹಾರವಾಗಿ ಉಪಯೋಗಿಸುವ ಪದ್ಧತಿ ಹೊಸದೇನೂ ಅಲ್ಲ. ಪ್ರಪಂಚದ ವಿವಿಧ ಭಾಗಗಳಲ್ಲಿ ಇದು ರೂಢಿಯಲ್ಲಿದೆ. ಉದಾಹರಣೆಗೆ, ವಿದೇಶಗಳಲ್ಲಿ ಜಿರಲೆಗಳನ್ನು ತಿನ್ನುವವರಿದ್ದಾರೆ. ಅದೊಂದು ಉತ್ತಮ ಆಹಾರವೆಂದೂ, ಅದರ ದೇಹದಲ್ಲಿರುವ ವಿಶಿಷ್ಟ ರಾಸಾಯನಿಕವೊಂದು ಹಲವು ರೋಗಗಳಿಗೆ ಔಷಧಿಯಾಗಿದೆಯೆಂದೂ ಹೇಳಲಾಗಿದೆ. ಚಿಟ್ಟೆ, ಮಿಡತೆಗಳನ್ನು ಹುರಿದು ತಿನ್ನುವವರಿದ್ದಾರೆ. ಜೇನು ಹುಟ್ಟಿನಲ್ಲಿರುವ ಮರಿ, ಕೋಶಗಳನ್ನು, ಕೆಂಪಿರುವೆಗಳ ಮೊಟ್ಟೆ, ಮರಿಗಳನ್ನು ತಿನ್ನುವ ಕೆಲವು ಜನಾಂಗಗಳಿವೆ.

**ಸಮಸ್ಯಾತ್ಮಕ ಕೀಟಗಳು**

ಗಾತ್ರದಲ್ಲಿ ಕಿರಿದಾದರೂ ಶ್ರಮ ಜೀವಿಗಳಾದ ಕೀಟಗಳು ಭೂಮಿಯ ಮೇಲೆ ಯಶಸ್ವಿಯಾಗಿ ಜೀವಿಸಲು ಸಸ್ತನಿಗಳಿಗಿಂತ ಹೆಚ್ಚು ವಿಕಾಸ ಹೊಂದಿವೆ. ಕೀಟಗಳಿಂದಾಗಿ ಕಳೆದ ೬೦ ವರ್ಷಗಳಲ್ಲಿ ಸಂಭವಿಸಿದ ಪ್ರಾಕೃತಿಕ ಸಂಪನ್ಮೂಲಗಳ ನಾಶವು ಹಿಂದಿನ ೬,೦೦೦ ವರ್ಷಗಳಲ್ಲಾದ ನಾಶಕ್ಕಿಂತಲೂ ಅಧಿಕವೆಂದು ಬೋಸ್ಸಾರ್ಡ್‌ರ ಅಭಿಪ್ರಾಯ. ಬೆಳೆಗಳ ರಕ್ಷಣೆಗಾಗಿ ಕೀಟನಾಶಕಗಳನ್ನು ಮುಕ್ತ ಹಸ್ತದಿಂದ ಬಳಸಲಾಗುತ್ತಿದೆ. ಕೀಟ ನಾಶಕಗಳ ಅತಿಯಾದ ಬಳಕೆಯಿಂದ ಕೀಟಗಳು ಕೀಟನಾಶಕಗಳಿಗೆ ನಿರೋಧ ಶಕ್ತಿಯನ್ನು ಹೊಂದುತ್ತವೆ. ನಿರೋಧ ಶಕ್ತಿಯನ್ನು ಹೊಂದಿದ ಕೀಟ ಸಂತತಿಗಳ ನಾಶಕ್ಕಾಗಿ ಹೆಚ್ಚು ವಿಷಕಾರಿ ಕೀಟನಾಶಕಗಳನ್ನು ಉಪಯೋಗಿಸಬೇಕಾಗುತ್ತದೆ. ಇದರಿಂದ ನಿರೋಧ ಶಕ್ತಿ ಇನ್ನಷ್ಟು ಪ್ರಬಲವಾಗಿ, ಕೀಟನಾಶಕಗಳ ಅಂಶ ಆಹಾರ ಧಾನ್ಯಗಳಲ್ಲಿ ಉಳಿದು ಕೊಂಡು ಮನುಷ್ಯನೇ ವಿಷವಸ್ತುಗಳ ದುಷ್ಪರಿಣಾಮಗಳಿಗೆ ಈಡಾಗುವ ಸಂದರ್ಭಗಳು ಒದಗಿಬರುತ್ತವೆ.

ಕೀಟಗಳ ವಿರುದ್ಧದ ರಾಸಾಯನಿಕ ಸಮರದಲ್ಲಿ ಕೀಟಗಳೇ ಜಯ ಗಳಿಸಿವೆ. ಉಪಕಾರಿ ಕೀಟಗಳನ್ನು ಸಂರಕ್ಷಿಸಿ ಇತರ ಆಯ್ಕೆಯ ಕೀಟಗಳನ್ನು ಆಹಾರವಾಗಿ ಉಪಯೋಗಿಸಿ ಕೊಂಡರೆ ಕೀಟ ಸಮಸ್ಯೆಗಳಿಗೆ ಒಂದು ಸುಲಭ ಪರಿಹಾರೋಪಾಯವನ್ನು ಕಂಡುಕೊಂಡಂತಾಗುವುದು; ಆಹಾರದ ಅಭಾವವನ್ನೂ ನೀಗಿಸಿಕೊಂಡಂತಾಗುವುದು.

(ಸಾಧಾರ)

**ಡಾ॥ ಪಿ. ಶಿವರಾಮು ರೈ**
೧೬, ಗುರುಪ್ರಸಾದ ಗಲ್ಲಿ, ಕಂಕನಾಡಿ, ಮಂಗಳೂರು -೫೭೫ ೦೦೨




(೩೭ನೇ ಪುಟದಿಂದ) *ಗ್ರಹಣ ಹಿಡಿಯುತ್ತಿರುವ ಉಚ್ಚ ಶಿಕ್ಷಣ....*

ವೈದಿಕ ಸಂಸ್ಕೃತಿ''ಯನ್ನು ವೈಭವೀಕರಿಸುವ ನಿಟ್ಟಿನಲ್ಲಿ ವಿಶ್ವವಿದ್ಯಾಲಯಗಳಲ್ಲಿ ಈ ಬಗ್ಗೆ ಸ್ನಾತಕೋತ್ತರ ಅಧ್ಯಯನವನ್ನು ಪ್ರಾರಂಭಿಸುವ ತಯಾರಿಯಲ್ಲಿದೆ. ರಾಷ್ಟ್ರದ ಅಧಿಕೃತ ಪುರೋಹಿತರಾದ ಮುರಳಿ ಮನೋಹರ ಜೋಶಿ ಅವರ ಆಶೀರ್ವಚನವೇ ಈ ಯೋಜನೆಗೆ ಕಾರಣವಾಗಿದೆ. ಇದಕ್ಕಾಗಿ ಸರಕಾರ ಭರಿಸಲಿರುವ ಕೋಟ್ಯಂತರ ರೂಪಾಯಿಗಳು ಎಲ್ಲಿಂದ ಬರುತ್ತದೆ ಎಂದು ಪ್ರಧಾನಿಯವರನ್ನು ಕೇಳಲೇಬೇಕಾಗಿದೆ.

ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆಯ ಸಲಹೆಯಂತೆ ಉಚ್ಚ ಶಿಕ್ಷಣದ ಅವಕಾಶಗಳನ್ನು ಹೆಚ್ಚು ಹೆಚ್ಚು ವಿದ್ಯಾರ್ಥಿಗಳಿಗೆ ತೆರವು ಮಾಡಿಕೊಡಬೇಕೆಂಬ ಅರಿವು ಕೇಂದ್ರ ಮತ್ತು ಪಂಜಾಬ್ ಸರಕಾರಗಳಿಗೆ ಮೂಡಿಬರಬೇಕಾಗಿದೆ. (ಇತರ ರಾಜ್ಯಗಳಲ್ಲಿಯೂ ಇದೇ ಪರಿಸ್ಥಿತಿ ಇದೆಯೆಂದು ನನ್ನ ಅನಿಸಿಕೆ). ಇಲ್ಲದಿದ್ದಲ್ಲಿ, ಈಗಿರುವ ಬಿಕ್ಕಟ್ಟಿನಿಂದ ಮತ್ತು ಮುಂದಿನ ದಿನಗಳಲ್ಲಿ ಎರಗಿ ಬರಲಿರುವ ವಿಪತ್ತಿನಿಂದ ಉಚ್ಚ ಶಿಕ್ಷಣವನ್ನು ಪಾರುಮಾಡುವುದು ಕನಸಿನ ಮಾತಾಗುತ್ತದೆ.

**ಡಾ॥ ವಿ. ಕೆ. ತಿವಾರಿ**
ಇಂಗ್ಲಿಷ್ ಪ್ರಾಧ್ಯಾಪಕ, ಡಿ.ಎ.ವಿ. ಕಾಲೇಜು, ಜಲಂಧರ್, ಪಂಜಾಬ್

# ಮಕ್ಕಳ ಮಾರಕ ರೋಗ ಮೆದುಳು ಜ್ವರ

"....... ಎರಡ ಎರಡ ದಿನ ಜ್ವರಾ ಬಂದವು, ನೆಗಡಿ ಜಡ್ಡಂತ ಸಡ್ಲ ಬಿಟ್ಟಿ, ಮಾರನೇ ದಿನ ಜ್ವರಾ ಅಂದ್ರ ಅಂಥಾ ಇಂಥಾ ಜ್ವರ ಅಲ್ಲ. ಹೊಟ್ಟಿಮ್ಯಾಗ ಅಳ್ಳ ಸಿಡಿಯುವಷ್ಟು. ತಲಿ ಚಿಟ ಚಿಟ ಅನ್ನತ್ತಂತ ಹಣಿ ಹಣಿ ಬಡಕೊಂತಿದ್ದಾ. ಒಂದೆರ್ಡ ಸೂಜಿನೂ ಮಾಡಿದ್ದವಿ. ಏಟೇಟೂ ಕಡಿಮಿ ಆಗಿಲ್ಲ. ಇವತ್ತ ಮುಂಜ್ಯಾನಿಂದ 'ವಾ' ಅಂದ ಬಾಯಿ ಮುಚ್ಚವಲ್ದು. ತೇಲಗಣ್ಣ ಹಾಕ್ಕೊಂಡ. ಜೀವಾ ಉಳಸ್ರಿ" ಎಂದು ಹತ್ತು ವರ್ಷದ ಮಗನನ್ನು ಹೊತ್ತು ತಂದ ಕೆಂಚ ಹಲಬುತ್ತಾನೆ.

ಡಾಕ್ಟರಿಗೆ ಸಂಶಯ ಬರುತ್ತದೆ. ವಾಸಿಸುವ ಮನೆಯ ಸುತ್ತಮುತ್ತಲಿನ ಪರಸರದ ಬಗ್ಗೆ ಕೇಳುತ್ತಾರೆ. ಮಗುವಿನ ದೀರ್ಘ ತಪಾಸಣೆ ಮಾಡುತ್ತಾರೆ. ಬೆನ್ನಲ್ಲಿ ನೀರು ತೆಗೆದು ವಿಶ್ಲೇಷಿಸುತ್ತಾರೆ. ರಕ್ತ ಪರೀಕ್ಷೆ ಮಾಡುತ್ತಾರೆ. ವರದಿಗಳನ್ನು ಒರೆಗಚ್ಚಿ ಕ್ರೋಡೀಕರಿಸಿದಾಗ ಸಿಕ್ಕ ಉತ್ತರ - ಮೆದುಳು ಜ್ವರ.

ಇದು ಸಾಮಾನ್ಯವಾಗಿ ಚಿಕ್ಕ ಮಕ್ಕಳನ್ನು ಕಾಡಿಸುವ ರೋಗವಾದರೂ, ಎಲ್ಲ ವಯಸ್ಸಿನವರೂ ಈ ರೋಗಕ್ಕೆ ತುತ್ತಾಗಿ ತತ್ತರಿಸಿ ಅಸುನೀಗಿದ ದಾಖಲೆಗಳಿವೆ. ಜಗತ್ತಿನ ಮೂಲೆ ಮೂಲೆಗಳಲ್ಲಿ ಕಂಡುಬಂದರೂ, ಪೆಸಿಫಿಕ್ ನಡುಗಡ್ಡೆಗಳು, ಫಿಲಿಪೈನ್ಸ್, ತೈವಾನ್, ಮಲೇಶಿಯಾ, ಸಿಂಗಪೂರುಗಳಲ್ಲಿ ತನ್ನ ಕರಾಳ ಛಾಯೆಯಿಂದ ಜನರನ್ನು ಅಂಜಿಸಿದೆ. ಭಾರತದಲ್ಲಿ ಮಾತ್ರ ಆಗಾಗ ಗೋಚರಿಸಿ ಕಣ್ಣು ಮುಚ್ಚಾಲೆ ಆಡುತ್ತಲೇ ಇದೆ. ಸಮಶೀತೋಷ್ಣವಲಯಗಳಲ್ಲಿ ಬೇಸಿಗೆಯ ಅಂತ್ಯ ಹಾಗೂ ಮಳೆಗಾಲದ ಪ್ರಾರಂಭದಲ್ಲಿ ಕಂಡುಬಂದರೆ, ಉಷ್ಣವಲಯದಲ್ಲಿ ಎಲ್ಲ ಕಾಲದಲ್ಲೂ ಕಂಡುಬರುತ್ತದೆ. ಈ ರೋಗದ ವೈಶಿಷ್ಟ್ಯವೆಂದರೆ ರೋಗಕಾರಕ ವೈರಸ್ ನರಮಂಡಲಕ್ಕೆ ಮುತ್ತಿಗೆ ಹಾಕಿ ರೋಗದ ಲಕ್ಷಣಗಳನ್ನು ಹೊರಹೊಮ್ಮಿಸುವುದು. ಇದು ಮುಖ್ಯವಾಗಿ ಮೂರು ರೂಪಗಳಲ್ಲಿ ತಲೆದೋರುತ್ತದೆ. ಪಿಡುಗು ರೂಪ, ಸ್ಥಳಜನ್ಯವಾಗಿ, ಅಲ್ಲಲ್ಲಿ ಇದ್ದಕ್ಕಿದ್ದಂತೆ ಗೋಚರಿಸುವುದು. ಪಿಡುಗುರೂಪದ ಪ್ರದೇಶಗಳಲ್ಲಿ ಲಸಿಕೆಯ ಸಮೀಕ್ಷೆಯು ರೋಗ ಹೊರಗೆಡವದ ಸ್ಥಿತಿಯಲ್ಲಿ ಹೆಚ್ಚು ಜನ ಇರುವುದು, ರೋಗಿಗಳು ಅಲ್ಲೊಂದು ಇಲ್ಲೊಂದು ಕಾಣುವುದನ್ನು ಸಾದರಪಡಿಸಿದೆ.

**ಇತಿಹಾಸ**

೧೮೭೧ರಲ್ಲಿ ಮೊಟ್ಟಮೊದಲು ಈ ರೋಗ ಜಪಾನಿನಲ್ಲಿ ಕಾಣಿಸಿಕೊಂಡಿತು. ೧೯೩೫ರಲ್ಲಿ ಸಾಂಕ್ರಾಮಿಕ ಸ್ವರೂಪ ತಾಳಿತು. ಸಾವು ನೋವುಗಳ ವಿರಾಟ ದರ್ಶನವಾಯಿತು. ರೋಗಕಾರಕ ವೈರಸ್ಸನ್ನು ಪತ್ತೆ ಹಚ್ಚಲಾಯಿತು. ಪೂರ್ವ ಏಶಿಯಾದ ವಿವಿಧ ಭಾಗಗಳಿಗೆ ಹೆಜ್ಜೆ ಹಾಕಿತು. ರಶಿಯಾ, ಕೊರಿಯಾ, ಬರ್ಮಾ, ಮಲೇಶಿಯಾಗಳಿಗೆ ಮುತ್ತಿಗೆ ಹಾಕತೊಡಗಿತು. ಗಂಡೆದೆಯ ಗುಂಡಿಗೆಗಳಲ್ಲೂ ನಡುಕ ಹುಟ್ಟಿಸಿತು. ೧೯೩೫ರಲ್ಲಿ ಇದಕ್ಕೆ ಸಂಬಂಧಿಸಿದ ವೈರಸ್ಸನ್ನು ವೆಲ್ಲೂರಿನಲ್ಲಿ ಸೊಳ್ಳೆಯಿಂದ ಪ್ರತ್ಯೇಕಿಸಲಾಯಿತು. ಮೊದಮೊದಲು ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಹಾವಳಿ ಎಬ್ಬಿಸಿತು. ಕಾಲಕ್ರಮೇಣ ಹಾವಳಿಯ ಹರವು ಕರ್ನಾಟಕ, ಕೇರಳ, ಗೋವಾ, ಉತ್ತರ ಪ್ರದೇಶ, ಬಿಹಾರ,



ಅಸ್ಸಾಂ, ಪಶ್ಚಿಮ ಬಂಗಾಳಕ್ಕೂ ಹಬ್ಬಿತು.

ಜಪಾನಿನ ಕೊಕ್ಕರೆ ಜಾತಿಯ ಹಲವು ಹಕ್ಕಿಗಳಲ್ಲಿ ಮೊದಲು ಈ ವೈರಸ್‌ಗಳು ಕಾಣಿಸಿಕೊಂಡವು. ಕ್ಯೂಲೆಕ್ಸ್ ಜಾತಿಯ ಸೊಳ್ಳೆಗಳು ಈ ಪಕ್ಷಿಗಳನ್ನು ಕಚ್ಚಿದಾಗ ವೈರಸ್‌ಗಳು ಸೊಳ್ಳೆಗಳನ್ನು ಸೇರಿದವು. ವೈರಸ್‌ಗಳನ್ನು ಬಳುವಳಿಯಾಗಿ ಪಡೆದ ಸೊಳ್ಳೆಗಳು ಬೇರೆ ಬೇರೆ ಪಕ್ಷಿ ಮತ್ತು ಪ್ರಾಣಿಗಳಿಗೆ ಅವುಗಳನ್ನು ವರ್ಗಾಯಿಸಿದವು. ಜಪಾನಿನ ಈ ಪಕ್ಷಿಗಳು ಭಾರತಕ್ಕೆ ವಲಸೆ ಬಂದಾಗ ಮೆದುಳು ಜ್ವರಕ್ಕೆ ಕಾರಣೀಭೂತವಾದ ವೈರಸ್‌ಗಳನ್ನು ನಮ್ಮ ದೇಶದ ಪಕ್ಷಿಗಳಿಗೂ ಸೊಳ್ಳೆಗಳ ಮುಖಾಂತರ ಕಾಣಿಕೆ ನೀಡಿದವು. ರೋಗಕಾರಣ ವೈರಸ್ ಹೊಂದಿದ ಹಂದಿ ಹಾಗೂ ಇತರ ಸಾಕುಪ್ರಾಣಿಗಳು, ಪಕ್ಷಿಗಳು ಈ ರೋಗದ ಸೋಂಕಿನ ಮೂಲವಾಗಿರುತ್ತವೆ. ಇವು ವೈರಸ್‌ಗಳ ವೃದ್ಧಿ, ಮಾರ್ಪಾಡು

ಡಾ॥ ಕರವೀರಪ್ರಭು ಕ್ಯಾಲಕೊಂಡ

ಹಾಗೂ ಬೆಳವಣಿಗೆಯ ಕೇಂದ್ರಗಳಂತೆ ವರ್ತಿಸುತ್ತವೆ. ಸೊಳ್ಳೆಗಳು ಇಂತಹ ಪಶು-ಪಕ್ಷಿಗಳನ್ನು ಕಚ್ಚಿ ವೈರಸ್‌ಗಳನ್ನು ಪಡೆದು ನಮ್ಮ ಜನರಿಗೆ ನೀಡಿದವು. ಈ ರೀತಿ ಮೆದುಳು ಜ್ವರವು ಜಪಾನಿನಿಂದ ನಮ್ಮ ದೇಶಕ್ಕೆ ಬಂತು.

**ರೋಗದ ಪ್ರಕಾರಗಳು**

ರೋಗಕಾರಕ ವೈರಸ್ ಮೇಲಿಂದ ಮುಖ್ಯವಾಗಿ ಐದು ಪ್ರಕಾರಗಳನ್ನು ಇಲ್ಲಿಯವರೆಗೆ ಗುರುತಿಸಲಾಗಿದೆ.

೧. ಸೇಂಟ್ ಲೂಯಿಸ್ ಮೆದುಳು ಜ್ವರ

೨. ಪೂರ್ವ ತಟ್ಟಿನ ಮೆದುಳು ಜ್ವರ

೩. ಪಶ್ಚಿಮ ತಟ್ಟಿನ ಮೆದುಳು ಜ್ವರ

೪. ಕ್ಯಾಲಿಫೋರ್ನಿಯಾ ಮೆದುಳು ಜ್ವರ

೫. ಜಪಾನಿನ ಮೆದುಳು ಜ್ವರ

ಭಾರತದಲ್ಲಿ ಕಂಡುಬರುವ ಮೆದುಳು ಜ್ವರ 'ಜಪನೀಜ -ಬಿ. ಎನ್‌ಕೆಫೆಲೈಟಿಸ್ ವೈರಸ್'ದಿಂದ ಬರುತ್ತದೆ. ಬಳ್ಳಾರಿಗೆ ಬಂದ ಬ್ರೇನ್ ಫೀವರ್ ಭೂತ ಮಕ್ಕಳಿದ್ದ ಮನೆಯ ಬಾಗಿಲನ್ನು ತಟ್ಟಿತು. ಕೈಗೆ ಸಿಕ್ಕವರ ಕಾಡಿಸಿ ಕಾಡಿಸಿ ಪ್ರಾಣ ತೆಗೆಯಿತು. ಬಳ್ಳಾರಿಯ ಬಿಸಿಲಿನ ಬೇಗೆ ಅದಕ್ಕೂ ತಗಲಿರಬೇಕು; ಹೀಗಾಗಿ ರಾಯಚೂರು ಜಿಲ್ಲೆಗೂ ಧಾವಿಸಿತು. ಕೊಪ್ಪಳಕ್ಕೂ ಹೆಜ್ಜೆ ಹಾಕಿತು. ಕೋಲಾರದಲ್ಲೂ ಕೂಗಿತು.... ಚಿತ್ರದುರ್ಗದಲ್ಲಿ ಚಲ್ಲಾಟಕ್ಕಿಳಿಯಿತು. ಈ ವರ್ಷ ಈಗಾಗಲೇ ೩೧೦ ಜನರಿಗೆ ಮುತ್ತಿಗೆ ಹಾಕಿ, ೫೮ ಮಕ್ಕಳ ಮೇಲೆ ಮಣ್ಣು ಎಳೆದಿರುವ ಬ್ರೇನ್ ಫೀವರ್ ಭೂತದ ಚೇಷ್ಟೆ ಇನ್ನೂ ತಗ್ಗಿಲ್ಲ......

ವರ್ಷದಲಿ ಸೆಪ್ಟಂಬರ್‌ನಿಂದ ಜನವರಿ ತಿಂಗಳ ಮಧ್ಯೆ ಕಾಡುವ ಈ ಕಾಯಿಲೆ ಆತಂಕದಲ್ಲಿ ಮುಳುಗಿಸಿ ಅನೇಕ ಎಳೆ ಪ್ರಾಣಿಗಳನ್ನು ಬಲಿ ತೆಗೆದುಕೊಂಡು ಮರೆಯಾಗುವ 'ಮೆದುಳು ಜ್ವರ'ದ ಬಗ್ಗೆ ರಾಷ್ಟ್ರೀಯ ಮಟ್ಟದಲ್ಲಿ 'ತುರ್ತಾಗಿ ಪರಿಹರಿಸಬೇಕಾದ ರೋಗ' ಎಂದು ಕೇಂದ್ರ ಮತ್ತು ರಾಜ್ಯ ಸರಕಾರಗಳು ಜಂಟಿ ನಿರ್ಧಾರ ತೆಗೆದುಕೊಳ್ಳದಿದ್ದಲ್ಲಿ, ಹೊಸ ಶತಮಾನದಲ್ಲಿ ಮಕ್ಕಳಿಗೆ, ವಿಶೇಷವಾಗಿ ಬಡಮಕ್ಕಳಿಗೆ, ಶಾಪವಾಗಿ ನಿರಂತರವಾಗಿ ಕಾಡುವುದರಲ್ಲಿ ಅನುಮಾನಗಳಿಲ್ಲ. ಆಂಧ್ರಪ್ರದೇಶ, ಕರ್ನಾಟಕದಲ್ಲಿ ಆಗಿರುವ ಸಾವು ನೋವುಗಳಿಂದ ಉದ್ಭವಿಸಿದ ಭೀಕರ ಭಯಾನಕ ಚಿತ್ರ ದೇಶದ ಮುಂದಿದೆ. ಈ ಜ್ವರದ ತಾಪಕ್ಕೆ ಅನೇಕ ಹಸುಳೆಗಳು ಸಾವನ್ನಪ್ಪಿವೆ. ಬದುಕಿ ಉಳಿದವು ಅಂಗವಿಕಲತೆಯ 'ಬಳುವಳಿ' ಪಡೆದಿವೆ.

**ರೋಗವಾಹಕ**

ಕ್ಯೂಲೆಕ್ಸ್ ವಿಷ್ಣುಯಿ ಟ್ರೈಟ ನಿಯೊರಿಂಕಸ್ ಜಾತಿಯ ಸೊಳ್ಳೆ ಈ ರೋಗ ಹರಡುವಿಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇದು ಭತ್ತದ ಗದ್ದೆಯಲ್ಲಿ, ನಿಂತ ನೀರಲ್ಲಿ ತತ್ತಿಯನ್ನಿಟ್ಟು ವಂಶಾಭಿವೃದ್ಧಿ ಮಾಡುತ್ತದೆ. "ಸೊಳ್ಳೆಗಳ ಮೊಟ್ಟೆಗಳಿಂದ ಹೊರಬರುವ ಮರಿಗಳನ್ನು ಕಪ್ಪೆಗಳು ತಿಂದು ತೇಗುವುದರಿಂದ ಸೊಳ್ಳೆಗಳ ಸಂತಾನಾಭಿವೃದ್ಧಿ ಕುಂಠಿತವಾಗುತ್ತದೆ. ಆದರೆ ಆ ರೀತಿಯ ಪ್ರಾಕೃತಿಕ ಸಮತೋಲನ ಕಪ್ಪೆಕಾಲುಗಳಿಗೆ ಕಪ್ಪೆಗಳನ್ನು ಕೊಲ್ಲುವುದರ ಮೂಲಕ ಇತ್ತೀಚಿನ ದಿನಗಳಲ್ಲಿ ತಪ್ಪಿಹೋಗುತ್ತಿದೆ. ಈ

ನಿಟ್ಟಿನಲ್ಲಿ ಕಪ್ಪೆಯ ಕಾಲುಗಳ ಅಧಿಕ ನಿರ್ಯಾತ ಸೊಳ್ಳೆಗಳ ಹೆಚ್ಚಳಕ್ಕೆ ಕಾರಣ ಎಂದು ತಿಳಿದುಕೊಳ್ಳಬೇಕಾಗಿದೆ,'' ಎಂದು ಲೋಕಸಭೆಯಲ್ಲಿ ೧೯೮೭ರ ಸಾಂಕ್ರಾಮಿಕ ವೇಳೆಯಲ್ಲಿ ಸಚಿವರು ಗಮನ ಸೆಳೆಯುವ ಸೂಚನೆಗೆ ಉತ್ತರ ಮಂಡಿಸಿದ್ದು ಉಲ್ಲೇಖನೀಯ. ಸೊಳ್ಳೆಗಳ ಹತೋಟಿಯಲ್ಲಿ ಕಪ್ಪೆಗಳ ಪಾತ್ರವನ್ನು ಮನಗಂಡ ಫ್ರಾನ್ಸ್ ಸರ್ಕಾರ ''ಕಪ್ಪೆ ಕಾಲುಗಳಿಲ್ಲದೇ ಮನುಷ್ಯ ಬದುಕಬಲ್ಲ. ಆದರೆ ತನ್ನ ಕಾಲುಗಳಿಲ್ಲದ ಕಪ್ಪೆ ಬದುಕಿರಲಾರದು'' ಎಂದು ಘೋಷಿಸಿ ಕಪ್ಪೆಗಳ ಉಳಿವಿಗಾಗಿ ಕರೆ ನೀಡಿತು. ಸಾರ್ವಜನಿಕರ ಸಹಕಾರ ಕೋರಿತು. ಇದು ನಮ್ಮ ದೇಶಕ್ಕೂ ಇಂದು ಅತ್ಯವಶ್ಯ ಮತ್ತು ಅನಿವಾರ್ಯ.

ಕ್ಯೂಲೆಕ್ಸ್ ಜಾತಿಯ ಈ ಸೊಳ್ಳೆ ಮುಖ್ಯವಾಗಿ ಹಂದಿಯನ್ನು ಕಚ್ಚುತ್ತಾದರೂ, ಎತ್ತು, ಎಮ್ಮೆ, ದನ-ಕರುಗಳನ್ನು, ಹಕ್ಕಿಗಳನ್ನೂ ಕಚ್ಚುತ್ತದೆ. ಕಾರಣ, ಹಂದಿಗಳಲ್ಲಿದ್ದಲ್ಲಿ ಮಾತ್ರ ಈ ರೋಗ ಬರುತ್ತದೆ ಎಂಬುದು ತಪ್ಪು ಗ್ರಹಿಕೆ. ಮನುಷ್ಯನು ಆಕಸ್ಮಿಕವಾಗಿ ವಾಹಕ ಸೊಳ್ಳೆಯ ಕಡಿತಕ್ಕೆ ಬಲಿಯಾಗಿ ಮೆದುಳು ಜ್ವರದಿಂದ ನರಳಿ ನಶಿಸಬೇಕಾಗುತ್ತದೆ.

ರೋಗವಾಹಕ ಸೊಳ್ಳೆ ಆರೋಗ್ಯವಂತನನ್ನು ಕಚ್ಚಿದಾಗ ರಕ್ತದ ಮೂಲಕ ವೈರಸ್‌ಗಳು ದೇಹ ಪ್ರವೇಶ ಮಾಡುತ್ತವೆ. ಅವು ಬಿಡುಗಡೆ ಮಾಡುವ ವಿಷವಸ್ತುಗಳಿಂದಾಗಿ ರೋಗಿಯು ಜ್ವರದಿಂದ ನರಳತೊಡಗುತ್ತಾನೆ. ನಂತರ ವೈರಸ್‌ಗಳು ನರಮಂಡಲಕ್ಕೆ ಮುತ್ತಿಗೆ ಹಾಕುತ್ತವೆ. ಪರಿಣಾಮವಾಗಿ ಶಿಥಿಲಗೊಂಡ ನರಕೋಶಗಳು ರಕ್ತನಾಳಗಳ ಸುತ್ತುವರಿದು ಹತ್ತಿಕ್ಕುವುದರಿಂದ ರಕ್ತಸಂಚಾರ ದಲ್ಲಿ ಅಡತಡೆಯುಂಟಾಗುತ್ತದೆ. ಹೀಗಾಗಿ ಮೆದುಳು ಜ್ವರ ಅಪಾಯಕರ ಪರಿಣಾಮಗಳನ್ನುಂಟುಮಾಡುತ್ತದೆ. ಸೂಕ್ತ ಸಮಯದಲ್ಲಿ ಯೋಗ್ಯ ಚಿಕಿತ್ಸೆ ದೊರೆಯದಿದ್ದಲ್ಲಿ ರೋಗಿಯು ಸಾವನ್ನಪ್ಪುತ್ತಾನೆ. ಒಂದು ವೇಳೆ ಬದುಕಿ ಉಳಿದರೂ ಮಾನಸಿಕ ಇಲ್ಲವೇ ದೈಹಿಕ ನ್ಯೂನತೆಗಳಿಗೆ ಒಳಗಾಗುತ್ತಾನೆ.

**ರೋಗಕಾರಕ**

ಇದು ವೈರಸ್‌ನಿಂದ ಬರುವ ಕಾಯಿಲೆ. ಇಲೆಕ್ಟ್ರಾನ್ ಮೈಕ್ರೋಸ್ಕೋಪಿನಲ್ಲಿ ನೋಡಲು ಚಂಡಿನಂತೆ ಕಾಣುವುದು. ಮೈತುಂಬ ಕೂದಲುಗಳಂಥ ಅಂಗಾಂಗಗಳನ್ನು ಹೊಂದಿರುವುದು. ಇವುಗಳ ಸಹಾಯದಿಂದ ಇದು ಜೀವಕೋಶಗಳ ಮೇಲೆ ಅಡ್ಡಾಡುವುದು, ಓಡಾಡುವುದು, ಅವುಗಳನ್ನು ತಬ್ಬಿಕೊಳ್ಳುವುದು. ಜೀವಕೋಶಗಳ ಭಿತ್ತಿಗಳಲ್ಲಿ ರಂಧ್ರ ಕೊರೆದು ಅವುಗಳ ಅಂತರಂಗಕ್ಕೆ ಸೇರಬಲ್ಲುದು. ಜೀವಕೋಶಕ್ಕೆ ಸರಬರಾಜು ಆಗುವ ಆಹಾರಾಂಶಗಳನ್ನು ಅಡ್ಡಿ ಆತಂಕಗಳಿಲ್ಲದೆ ಹೀರಿ ತಾನು ಬದುಕುವುದು. ಆಶ್ರಯದಾತನಿಗೆ ಅಶಕ್ತತೆಯ ಉಡುಗೊರೆ ನೀಡುವುದು. ಜೀವಕೋಶ ಇದನ್ನೆಲ್ಲಾ ಸಹಿಸಿದರೂ, ವೈರಸ್ ಉಪಟಳ ಕಡಿಮೆಯಾಗುವುದಿಲ್ಲ. 'ಉಂಡಮನೆಗಳಾ ಎಣಿಸುವ' ಮನೋಭಾವ ಮೈಗೂಡಿಸಿಕೊಂಡಿರುವ ಈ ವೈರಸ್, ಜೀವಕೋಶಗಳಿಗೆ ಚಿತ್ರಹಿಂಸೆ ಕೊಟ್ಟು ಛಿದ್ರ ಛಿದ್ರಗೊಳಿಸಬಹುದು. ಮನುಷ್ಯನ ದೇಹದಲ್ಲಿಯ ಯಾವುದೇ ಜೀವಕೋಶಗಳ ಮೇಲೆ ಇದು ದಾಳಿ ಮಾಡಬಹುದು. ಆದರೆ, ಈ ವೈರಸ್‌ಗೆ ಮೆದುಳಿನ ಜೀವಕೋಶಗಳೆಂದರೆ ಅತ್ಯಂತ ಪ್ರೀತಿ.

ಈ ರೋಗಕ್ಕೆ ಕಾರಣವಾಗಿರುವ ವೈರಸ್ ಹಂದಿಗಳ ದೇಹದಲ್ಲಿ ಸಮೃದ್ಧಿಯಾಗಿ ಬೆಳೆಯುವುದು. ಇದರ ವಂಶಾಭಿವೃದ್ಧಿಗೆ ಸ್ಥಳದಾನ ಮಾಡಿದ ಹಂದಿಯನ್ನು ಇದು ಎಂದೂ ಪೀಡಿಸುವುದಿಲ್ಲ. ಅಷ್ಟರಮಟ್ಟಿಗೆ ಇದು ಕೃತಜ್ಞ! ಕ್ಯೂಲೆಕ್ಸ್ ವಿಷ್ಣುಯಿ ಟ್ರೆಜಿನಿಯೋರಿಂಕಸ್ ಜಾತಿಯ ಸೊಳ್ಳೆ ಈ ವೈರಸ್ ಜೀವಿಯನ್ನು ಹಂದಿಯಿಂದ ಹಂದಿಗೆ, ಹಂದಿಯಿಂದ ಇತರೆ ಪ್ರಾಣಿ ಪಕ್ಷಿಗಳಿಗೆ ಸ್ಥಳಾಂತರಿಸುವುದು. ಹಂದಿಯಿಂದ ಮಾನವರಿಗೂ ವರ್ಗಾಯಿಸುವುದು. ಆದರೆ, ಇಂದಿನವರೆಗೆ ಮಾನವರಿಂದ ಮಾನವರಿಗೆ ರೋಗ ಪ್ರಸಾರವಾಗುವುದು ಕಂಡುಬಂದಿಲ್ಲ.

**ರೋಗದ ಲಕ್ಷಣಗಳು**

ರೋಗವು ಸಾಮಾನ್ಯವಾಗಿ ೪-೧೪ ದಿನಗಳೊಳಗೆ ಉಲ್ಬಣಗೊಳ್ಳುತ್ತದೆ. ಮಗು ಮಂಕಾಗಿರುತ್ತದೆ. ತೀವ್ರ ತಲೆನೋವು, ಮೈಕೈ ನೋವು, ವಾಂತಿ, ನಡುಕದಿಂದೊಡಗೂಡಿದ ವಿಪರೀತ ಜ್ವರ ಕಾಣಿಸಿಕೊಂಡ ಒಂದೆರಡು ದಿನಗಳಲ್ಲೇ ಅಂಗಾಂಗಗಳ ನಿಯಂತ್ರಣ ತಪ್ಪುತ್ತದೆ. ಮೆದುಳಿನಲ್ಲಿ ಉರಿತ, ಅನುವಳಿಕೆ, ಬದಲಾವಣೆಗಳು ಕಂಡುಬರುತ್ತವೆ. ಹೀಗಾಗಿ ಕುತ್ತಿಗೆ ಅಲ್ಲಾಡಿಸಲು ಬರುವುದಿಲ್ಲ. ದಿನಗಳೆದಂತೆ ದೃಷ್ಟಿ ಮಂದವಾಗುವುದಲ್ಲದೆ, ಧ್ವನಿಯೂ ಉಡುಗುತ್ತದೆ. ಅಸಂಬದ್ಧವಾಗಿ ಪ್ರತಿಕ್ರಿಯಿಸುವ ಪಾಪೆ, ಮಾಂಸಖಂಡಗಳ ಸೆಳೆತ, ಸೆಳವುಗಳು, ಪ್ರಜ್ಞಾಹೀನತೆ, ಲಕ್ವ ಹೊಡೆಯುವುದು ಈ ರೋಗದ ಅಂತಿಮ ಹಂತದಲ್ಲಿ ಕಂಡುಬರುವ ಲಕ್ಷಣಗಳು. ತೂಕವು ತ್ವರಿತಗತಿಯಲ್ಲಿ ಇಳಿಯುತ್ತದೆ. ಜ್ವರ ಇಳಿಯದೇ ಇರುವುದು, ಬಹಳ ಬೆವರು ಸುರಿಸುವಿಕೆ, ವೇಗದ ಉಸಿರಾಟಗಳು ಅಪಾಯಕರ ಮುನ್ಸೂಚನೆಯನ್ನು ತಿಳಿಸುವ ಚಿನ್ಹೆಗಳು.

ಈ ರೋಗದ ಬಾಹುಬಂಧನದಲ್ಲಿ ಬಂಧಿತರಾದವರು ಶೇ. ೬೦ರಷ್ಟು ಜನ ಸಾವನ್ನಪ್ಪುತ್ತಾರೆ. ಉಳಿದವರಲ್ಲಿ ಶೇ. ೧೦ರಿಂದ ೨೦ ಜನ ನರಗಳಿಗೆ ಸಂಬಂಧಿಸಿದ ಕಾಯಿಲೆಗಳಿಂದ ಬಳಲುತ್ತಾರೆ. ಬುದ್ಧಿಮಾಂದ್ಯ, ಅಪಸ್ಮಾರ, ಪಾರ್ಶ್ವವಾಯು, ಕಿವುಡುತನ, ದೃಷ್ಟಿಮಾಂದ್ಯಗಳು ಬಳುವಳಿಯಾಗಿ ಉಳಿಯಬಹುದು.

**ಚಿಕಿತ್ಸೆ**

ಇದು ವೈರಸ್‌ನಿಂದ ಬರುವ ರೋಗವಾದ್ದರಿಂದ ತಕ್ಕ ಜೀವಿರೋಧಕಗಳಾವುವೂ ಇಲ್ಲ. ಔಷಧೋಪಚಾರ ಲಕ್ಷಣಕ್ಕನುಗುಣವಾಗಿ ಉಪಚಾರ ಮಾಡುತ್ತ, ಅಲ್ಲಸಲ್ಲದ ಅಪಾಯಗಳು ಜರುಗದಂತೆ ನಿರೀಕ್ಷಿಸುವುದು ಮಾತ್ರ ಆಗಿರುತ್ತದೆ.

೧. ರೋಗಿಯನ್ನು ಚೆನ್ನಾಗಿ ಗಾಳಿ, ಬೆಳಕು ಇರುವ ಸ್ಥಳದಲ್ಲಿ ಮಲಗಿಸಬೇಕು.
೨. ಮೂತ್ರಕೋಶ, ಗುದನಾಳ, ಶ್ವಾಸನಾಳಗಳ ಕಾಳಜಿ ತೆಗೆದುಕೊಳ್ಳಬೇಕು.
೩. ಜ್ವರ ತೀವ್ರವಾಗಿ ಏರದಂತೆ ನೋಡಿಕೊಳ್ಳಬೇಕು.
೪. ಸಿರಗಳ ಮೂಲಕ ಗ್ಲೂಕೋಜ, ಲವಣ ದ್ರವಗಳ ಕೊಟ್ಟು ದೇಹ ದ್ರವ್ಯಗಳ ಸಮತೋಲನ ಕಾಯ್ದಿಡುವುದು ಇತ್ಯಾದಿ.

**ರೋಗ ನಿಯಂತ್ರಣ**

೧. ಯಾರ ಮನೆಯಲ್ಲಿಯೇ ಆಗಲಿ, ಯಾವ ಸ್ಥಳದಲ್ಲಿಯೇ ಆಗಲಿ ಈ ರೋಗ ಬಂದೊಡನೆ ಆರೋಗ್ಯ ಇಲಾಖೆಗೆ ತಿಳಿಸಬೇಕು.
೨. ಈ ರೋಗವು ತಲೆದೋರಬಹುದಾದಂತಹ ಪ್ರದೇಶಗಳಲ್ಲಿ ಜನರಿಗೆ ರೋಗ ನಿರೋಧಕ ಲಸಿಕೆ ಹಾಕಿಸಿ ಸಕ್ರಿಯ ನಿರೋಧ ಶಕ್ತಿಯನ್ನು ಸಾಮೂಹಿಕವಾಗಿ ಉತ್ಪನ್ನ ಮಾಡುವುದು.
೩. ಎಳೆಯದಿರುವಾಗ ರೋಗ ಗುರುತು ಹಚ್ಚಿ, ಯಶಸ್ವಿ ಚಿಕಿತ್ಸೆ ಮತ್ತು ಶುಶ್ರೂಷೆ ಮಾಡುವುದು.
೪. ಸೊಳ್ಳೆಗಳಿಂದ ರಕ್ಷಣೆ ಪಡೆಯುವುದು.
೫. ಸೊಳ್ಳೆಗಳನ್ನು ಸೂಕ್ತ ಕ್ರಿಮಿನಾಶಕಗಳಿಂದ ನಾಶಪಡಿಸುವುದು.
೬. ಮನೆಯ ಸುತ್ತಮುತ್ತ ಕೊಳಚೆ ಪ್ರದೇಶಗಳಿಗೆ ಅವಕಾಶ ಕೊಡದಿರುವುದು.
೭. ಮಲಗುವಾಗ ಸೊಳ್ಳೆ ಪರದೆಯನ್ನು ಉಪಯೋಗಿಸುವುದು. ಮನೆಗಳಿಗೆ ಸೊಳ್ಳೆಗಳು ತೂರಲಾರದಂತೆ ತಂತಿ ಜಾಲಗಳನ್ನು ಹಾಕಿಸುವುದು. ಸೊಳ್ಳೆಗಳನ್ನು ಓಡಿಸುವ ಘಾಟು ಪದಾರ್ಥಗಳನ್ನು ಉಪಯೋಗಿಸುವುದು.
೮. ಈ ರೋಗ ಕಂಡುಬಂದ ಕೂಡಲೇ ಹಂದಿಗಳನ್ನೆಲ್ಲಾ ಮಾನವ ವಾಸದಿಂದ ಕನಿಷ್ಠ ೨ ಕಿ. ಮೀ. ದಷ್ಟಾದರೂ ದೂರ ಓಡಿಸುವುದು. ಹಂದಿಗಳು ಮೆದುಳು ಜ್ವರದ ಪ್ರವರ್ಧಕಗಳಾಗಿರುವುದರಿಂದ ಹಂದಿಗೂಡುಗಳು ಮತ್ತು ಜಾನುವಾರುಗಳನ್ನು ಕಟ್ಟಿಹಾಕುವ ಜಾಗೆಗಳು ಮನೆಯ ಪರಿಸರದಿಂದ ದೂರ ಇರುವಂತೆ ನೋಡಿಕೊಳ್ಳುವುದು.

ಮೆದುಳು ಜ್ವರ ಈ ದೇಶಕ್ಕೆ ಹೊಸ ರೋಗವಂತೂ ಅಲ್ಲ. ಕಳೆದ ಎರಡೂವರೆ ದಶಕಗಳಿಂದ ದೇಶದಲ್ಲಿ ಚೆಲ್ಲಾಟವಾಡುತ್ತಲೇ ಇದೆ. ಈ ಜ್ವರಕ್ಕೆ ನಿಖರವಾದ, ನಿರ್ದಿಷ್ಟವಾದ ಔಷಧಿಗಳಿಲ್ಲದೆ, ವೈದ್ಯಕೀಯ ವಿಜ್ಞಾನಕ್ಕೆ ಸವಾಲೊಡ್ಡಿರುವುದಂತೂ ನಿಜ. ಆದರೆ, ಈಗಿನ ವ್ಯವಸ್ಥೆಯಲ್ಲಿ 'ಯುದ್ಧಕಾಲೇ ಶಸ್ತ್ರಾಭ್ಯಾಸ'ದ ಧೋರಣೆಯಿಂದಾಗಿ, ವರ್ಷ ವರ್ಷವೂ ಇದಕ್ಕೆ ಬಲಿಯಾಗುವವರು ಹೆಚ್ಚುತ್ತಲೇ ಇದ್ದಾರೆ. ಜ್ವರ ಕಾಣಿಸಿಕೊಂಡು ಸುದ್ದಿಯಾದಾಗ ಸಂಬಂಧಪಟ್ಟ ಸ್ಥಳಗಳಲ್ಲಿ ಅದರ ನಿಯಂತ್ರಣಕ್ಕೆ ಕ್ರಮಗಳನ್ನು ಕೈಗೊಂಡು ನಂತರ ಕೈ ತೊಳೆದುಕೊಳ್ಳುತ್ತಿರುವುದು ಹೊಸತೇನಲ್ಲ. ಈ ಮನೋಭಾವದ ಲಾಭವನ್ನು ಮೆದುಳು ಜ್ವರ ಚೆನ್ನಾಗಿ ಬಳಸಿಕೊಂಡಿದೆ. ಜನರಿಗೆ ಚಳ್ಳೇಹಣ್ಣು ತಿನಿಸುತ್ತಲೇ ಇದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಂಯುಕ್ತವಾಗಿ ಇದರ ನಿಯಂತ್ರಣಕ್ಕೆ ಯುದ್ಧೋಪಾದಿಯಲ್ಲಿ ಸಮಗ್ರ ಕಾರ್ಯಕ್ರಮ ರೂಪಿಸದೇ ಹೋದಲ್ಲಿ ನಾಳೆಯ ಬದುಕನ್ನು ಕಾಣಬೇಕಾದ ಅನೇಕ ಕಂದಮ್ಮಗಳು ಇಂದೇ ಸಾವನ್ನಪ್ಪುವಂತಹ ವ್ಯವಸ್ಥೆ ಹೊಸ ಶತಮಾನಕ್ಕೆ ಮುಂದುವರೆದರೆ ದೇಶದ ಸಾಧನೆ ಸೊನ್ನೆಯೇ ಆದೀತು.

**ಡಾ॥ ಕರವೀರಪ್ರಭು ಕ್ಯಾಲಕೊಂಡ**
ಆರೋಗ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ,
ಬಾದಾಮಿ-೫೮೭ ೨೦೧, ಜಿ : ಬಾಗಲಕೋಟೆ

# ದಲಿತ ಮಹಿಳಾಲೋಕ ಮತ್ತು ಮೀಸಲಾತಿ

ಒಟ್ಟಾರೆಯಲ್ಲಿ ಎಲ್ಲ ಅಸಮಾನತೆ, ಅನ್ಯಾಯ, ಶೋಷಣೆಗಳಿಗೂ ಜಾತಿಪದ್ಧತಿಯೇ ಪ್ರಮುಖ ಕಾರಣವೆಂಬುದನ್ನು ಒಪ್ಪಬಹುದಾದರೂ ಸ್ತ್ರೀ-ಪುರುಷ ಸಂಬಂಧಗಳ ಪ್ರಶ್ನೆ ಬಂದಾಗ ಎಲ್ಲ ಜಾತಿ, ವರ್ಗಗಳ ಹೆಂಗಸರ ಪಾಡೂ ಸಮಾನವೇ ಆಗಿಬಿಡುತ್ತದೆಂಬುದು ನಮ್ಮ ಭಾರತೀಯ ಸಮಾಜದಲ್ಲಿ ಜಾರಿಯಲ್ಲಿರುವ ಒಂದು ಕುತೂಹಲಕರ ಸಂಗತಿ. ಮೇಲುಜಾತಿಯ ವರ್ಗದ ಹೆಂಗಸು ಕೆಳಜಾತಿಯ ವರ್ಗದ ಹೆಂಗಸನ್ನು ನಡೆಸಿಕೊಳ್ಳುವ ಪರಿ ಒಂದೇ ಕುಟುಂಬದಲ್ಲಿನ ಅತ್ತೆ - ಸೊಸೆಯರ ಘರ್ಷಣೆಗೆ ಸಮಾನವಾದುದು. ಮನೆಯ ಯಜಮಾನನಾದ ಮಗ/ಗಂಡನ ಹತ್ತಿರ ವಲಯದವರೆಂದು ಪ್ರತಿಷ್ಠಾಪಿತರಾಗಲು ಈ ಹೆಂಗಸರಿಬ್ಬರೂ ಬಡಿದಾಡುತ್ತಿದ್ದಾರಷ್ಟೇ. ಅಧಿಕಾರ ವಲಯಕ್ಕೆ ಸಮೀಪದವರೆನಿಸುವುದು ಅವರ ಬದುಕಿನ ಅಳಿವು - ಉಳಿವಿನ ಪ್ರಶ್ನೆಯಲ್ಲವೇ ? ಸ್ವತಃ ಆ ಹೆಂಗಸರಲ್ಲಿ ದ್ವೇಷಕ್ಕೆ ಕಾರಣವಾಗುವ ಸಂಗತಿ ಇರಬೇಕಾದ್ದು ಇಲ್ಲ. ಅಂದರೆ ಹೆಂಗಸರ ಪರಸ್ಪರ ಬಡಿದಾಟ ಪುರುಷ ಚಿಂತನೆಯ ದೌರ್ಜನ್ಯ ಪ್ರವೃತ್ತವಾಗುವ ಒಂದು ಮಾದರಿಯಷ್ಟೇ. ನಮ್ಮ ಈ ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಭಾರತೀಯ ಮಹಿಳೆಯರಲ್ಲಿ 'ದಲಿತ ಮಹಿಳಾಲೋಕ'ದ ಪ್ರತ್ಯೇಕತೆಯ ಪ್ರಶ್ನೆಯನ್ನು ಹೆಚ್ಚಿನ ಎಚ್ಚರದಿಂದ ಪರಿಶೀಲಿಸುವ ಅಗತ್ಯವಿದೆ.

ಸಂಸ್ಕೃತಿ ಅಧ್ಯಯನಗಳಲ್ಲಿ 'ದಲಿತ ಮಹಿಳಾ ಲೋಕ'ವೊಂದನ್ನು ಮಾದರಿಯಾಗಿ ರೂಪಿಸಿಕೊಳ್ಳುವಾಗಿನ ಉದ್ದೇಶಗಳು ಬೇರೆ. ಒಂದು ಮೂಲೆಗೆ ಒತ್ತರಿಸಲಾದ ಸಮುದಾಯವನ್ನು ಗುರುತಿಸುವ, ಅದರ ಅಸ್ತಿತ್ವವನ್ನು ಗೌರವಿಸುವ, ವೈಶಿಷ್ಟ್ಯಗಳನ್ನು ಪರಿಭಾವಿಸುವ ಉದ್ದೇಶದ ಸಾಂಸ್ಕೃತಿಕ ಅಧ್ಯಯನಗಳಿಗೆ ವ್ಯಾವಹಾರಿಕ ಚಾಚುಗಳು ಅಷ್ಟೇನೂ ಇರುವುದಿಲ್ಲ. ಇಂತಹ ಅಧ್ಯಯನಗಳು ತಮ್ಮ ತಿಳುವಳಿಕೆಯನ್ನು ವಿಸ್ತರಿಸಿಕೊಳ್ಳಲು, ಆಸಕ್ತಿಗಳನ್ನು ತಣಿಸಿಕೊಳ್ಳಲು ತೊಡಗಿರುತ್ತವೆ. ನೇರವಾಗಿ ಆ ಸಮುದಾಯಗಳಿಗೆ ಇದರಿಂದ ಲಾಭವೇನೂ ಆಗಲಾರದು. ಅಷ್ಟರಮಟ್ಟಿಗೆ ಇಂತಹ ಸಾಂಸ್ಕೃತಿಕ ಅಧ್ಯಯನಗಳನ್ನು ವಸ್ತುನಿಷ್ಠವೆಂದು ಪರಿಗಣಿಸಬಹುದು. ಜೊತೆಗೆ ನಿರಪಾಯಕಾರಿಯೆಂದು ಹೇಳಬಹುದು.

ಆದರೆ ವ್ಯಾವಹಾರಿಕ ವಲಯಗಳಲ್ಲಿ 'ದಲಿತ ಮಹಿಳಾಲೋಕ' ಎಂಬುದೊಂದನ್ನು ವರ್ಗೀಕರಿಸಿ ಪ್ರಸ್ತಾಪಿಸಿದಾಗ ಇದರ ಚಾಚುಗಳು ಎತ್ತೆತ್ತ ಸಾಗಿವೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸುವುದು ಅಗತ್ಯವೆನಿಸುತ್ತದೆ. ನಮ್ಮ ಎಲ್ಲ ಹೋರಾಟಗಳೂ ಶೋಷಣೆಯ ವಿರುದ್ಧವಾಗಿ ಮತ್ತು ತಮ್ಮ ಸಬಲೀಕರಣಕ್ಕಾಗಿ ನಡೆಯುತ್ತವೆನ್ನುವುದು ಒಂದು ಹಂತದವರೆಗೆ ನಿಜ. ಆದರೆ ಮುಂದಿನ ಹಂತದಲ್ಲಿ ಇವು ಸ್ವತಃ ಅಧಿಕಾರ ಗ್ರಹಣಕ್ಕಾಗಿ ಪೈಪೋಟಿಯಲ್ಲಿ ನಿಲ್ಲುತ್ತವೆ. 'ದಲಿತ ಮಹಿಳಾಲೋಕ'ವೊಂದನ್ನು ಸೃಷ್ಟಿಸಿ ಅದನ್ನು ಮಹಿಳಾ ಸಮುದಾಯದ ಮೇಲೆ ಎತ್ತಿಕಟ್ಟಿ, ಪ್ರತ್ಯೇಕತೆಯ ಪ್ರಶ್ನೆಯನ್ನು ಹುಟ್ಟು ಹಾಕಿರುವ ಸಂದರ್ಭ, ಪುರುಷ ಪ್ರಧಾನ ಚಿಂತನೆಯ ಕುತಂತ್ರವಾಗಿರಬಹುದೇ ಎಂಬ ಬಲವಾದ ಅನುಮಾನಕ್ಕೆ ಅವಕಾಶವಿದೆ. ಮಹಿಳೆಯರನ್ನು ಪ್ರತ್ಯೇಕಿಸುವ ಒಂದು ಮುಖ್ಯವಾದ ಸಂದರ್ಭ ಪ್ರಸ್ತುತ ರಾಜಕೀಯ ಕ್ಷೇತ್ರದಲ್ಲಿ ಎದ್ದಿರುವ 'ಮಹಿಳಾ ಮೀಸಲಾತಿ' ಮಸೂದೆಯ ಪ್ರಕರಣದಲ್ಲಿ ವಿಶಿಷ್ಟವಾಗಿ ರೂಪು ತಳೆದದ್ದು. 'ಮಹಿಳಾ ಮೀಸಲಾತಿ' ಮಸೂದೆ ಸಂಸತ್ತಿನ ಅಧಿವೇಶನಗಳಲ್ಲಿ ಪ್ರಸ್ತಾಪಕ್ಕೆ ಬರುವ ಹಂತದಲ್ಲೇ ವಿರೋಧಗಳನ್ನು



ಎದುರಿಸುತ್ತಾ, ಅಂತೂ ಇಂತೂ ಪ್ರಸ್ತಾಪಗೊಂಡರೂ ವಿಪರೀತದ ಗೊಂದಲಗಳಲ್ಲಿ ಸಿಲುಕಿ ಬಳಲುತ್ತಾ, ತೀರ್ಮಾನಕ್ಕೆ ಬರುವ ಸಾಧ್ಯತೆಗಳೆಲ್ಲವೂ ಗಂಟುಗಂಟಾಗುತ್ತಾ ಮುಂದು ಮುಂದಕ್ಕೆ ಹೋಗುತ್ತಿದೆ. ನ್ಯಾಯ, ತರ್ಕಗಳ ಮಾತಷ್ಟೇ ಆದರೆ ಈ ಮಸೂದೆಗೆ ಯಾವ ವಿರೋಧವೂ ಸಾಧ್ಯವಿಲ್ಲ. ಸ್ವಾತಂತ್ರ್ಯ ಬಂದ ನಂತರ ಐವತ್ತು ವರ್ಷಗಳು ಕಳೆದ ಮೇಲಾದರೂ ಮಹಿಳೆಯರಿಗೆ ಹೆಚ್ಚಿನ ಒಂದಿಷ್ಟು ಅವಕಾಶಗಳು ದೊರೆಯಬೇಕೆಂಬುದು ನ್ಯಾಯವೇ. ಪುರುಷರಿಗೆ ಸಮಾನ ಸಂಖ್ಯೆಯಲ್ಲಿ ಇದ್ದರೂ ಸೀಟುಗಳಲ್ಲಿ ಸಮಾನ ಸಂಖ್ಯೆಯನ್ನೇನೂ ಕೇಳದೆ ಅದಾವುದೋ ಲೆಕ್ಕಾಚಾರದಲ್ಲಿ ಶೇ. ೩೩ ಭಾಗವನ್ನಷ್ಟೇ ಕೇಳುತ್ತಿರುವುದು. ಇದಕ್ಕೆ ಪ್ರತಿತರ್ಕ ಹೂಡುವ ಸಾಧ್ಯತೆಯೇ ಇಲ್ಲ. ಆದರೆ ಇಷ್ಟೆಲ್ಲಾ ವರ್ಷಗಳಲ್ಲಿ ಎಲ್ಲ ಸೀಟುಗಳಲ್ಲೂ ತಾವೇ ಕುಳಿತು ವಿಜೃಂಭಿಸುತ್ತಾ ಬಂದ ಪುರುಷರಿಗೆ ಇದು ನುಂಗಲಾರದ ತುತ್ತು. ಈಗ ಪ್ರತಿಶತ ೩೩ರಷ್ಟು ಸೀಟುಗಳನ್ನು ಮಹಿಳೆಯರಿಗೆ ಬಿಟ್ಟುಕೊಟ್ಟು ಬಿಡಬೇಕು ಎಂದರೆ ಆ ಸೀಟುಗಳಲ್ಲಿರುವ ಪುರುಷರು ಕಂಗಾಲಾಗುವುದು ಸಹಜ. ಹೇಗಾದರೂ ಮಾಡಿ ಮಹಿಳೆಯರ ಪ್ರವೇಶವನ್ನು ತಡೆಯಲೇಬೇಕಾಗಿದೆ. ಈಗ ನ್ಯಾಯ, ತರ್ಕಗಳ ಮಾತುಗಳು ಅವರ ನೆರವಿಗೆ ನಿಲ್ಲಲಾರವಲ್ಲ. 'ದಲಿತ ಮಹಿಳೆಯರಿಗೆ ಒಳ ಮೀಸಲಾತಿ' ಎಂಬ ಅತಿ ಬುದ್ಧಿವಂತಿಕೆಯ ವಾದಸರಣಿಯೊಂದು ಹುಟ್ಟಿಕೊಂಡು, ಪುರುಷರ ಸವಲತ್ತುಗಳನ್ನು ಕಾಯುವ ಆಯುಧವಾಗಿ ಕೆಲಸ ಮಾಡತೊಡಗಿದೆ. ಮೇಲುನೋಟಕ್ಕೆ 'ಒಳಮೀಸಲಾತಿ'ಯ ಈ ಮಾತು ಜಾತಿ/ವರ್ಗ ಶ್ರೇಣೀಕರಣಗಳ ನ್ಯಾಯ, ತರ್ಕಗಳನ್ನು ಹಿಡಿದು ಹೊರಟ ಸಭ್ಯ ಚಿಂತನೆಯಂತೆಯೇ ತೋರುತ್ತದೆ. ಆದರೆ ದಲಿತ ಮಹಿಳೆಯರೂ ಒಳಗೊಂಡಂತೆ ಒಟ್ಟು ಮಹಿಳಾ ಸಮುದಾಯವೇ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಸಿಲುಕಿರುವ ಅನೇಕ ಸಮಸ್ಯೆಗಳನ್ನು ಸೂಕ್ಷ್ಮ ವಿಶ್ಲೇಷಣೆಗಳಲ್ಲಿ ಗಮನಿಸಿದರೆ ಇಲ್ಲಿ ವ್ಯಕ್ತವಾಗಿರುವ ದಲಿತ ಮಹಿಳೆಯರ ಬಗೆಗಿನ ಕಾಳಜಿ ಅಷ್ಟೇನೂ ಸರಳವಾದದ್ದಲ್ಲ ಎಂಬುದು ತಿಳಿಯುತ್ತದೆ. ಮಹಿಳಾ ಸಮುದಾಯವನ್ನು ಒಡೆದು ಆಳುವ ರಾಜಕೀಯ ತಂತ್ರವಾಗಿ ಮಾತ್ರ ಈ ಒಳ ಮೀಸಲಾತಿಯ ಮಾತು ಹುಟ್ಟಿಕೊಂಡು ಪುರುಷರ ಸೀಟುಗಳು ಸದ್ಯಕ್ಕಾದರೂ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡು ಅವರಿಗೇ ಉಳಿಯುವಲ್ಲಿ ನೆರವಾದಂತಿದೆ. ಹೀಗೆಯೇ ತರ್ಕ ವಿತರ್ಕಗಳನ್ನು ಬೆಳೆಸುತ್ತಾ ಒಟ್ಟಾರೆಯಾಗಿ ಮಹಿಳಾ ಮೀಸಲಾತಿ ಪ್ರಕರಣವನ್ನೇ ಮುಚ್ಚಿಹಾಕಿಬಿಡುವ ಯೋಚನೆಯೂ ಇರಬಹುದು. ಅಂಥಾ ಹುನ್ನಾರ ಮಾತ್ರವಾಗಿರದೆ ನಿಜಕ್ಕೂ ದಲಿತ ಮಹಿಳಾಪರವಾಗಿ ಈ ಚಿಂತನೆ ಇದೆ ಎನ್ನುವುದಾದರೆ ಈವರೆಗೂ ಯಾವ ಪ್ರಕರಣಗಳಲ್ಲೂ ದಲಿತ ಮಹಿಳೆಯನ್ನು, ಅವಳ ಸಮಸ್ಯೆಗಳನ್ನು ವಿಶೇಷವಾಗಿ ಪರಿಗಣಿಸಿದ ಸಂದರ್ಭಗಳು ಎಷ್ಟಿವೆ ಎಂಬ ಪ್ರಶ್ನೆ ಬರುತ್ತದೆ. ಜಾತಿ, ವರ್ಗ ಸಂಬಂಧೀ ಶ್ರೇಣೀಕರಣವನ್ನು ಮೀರಿ ಲಿಂಗ ಸಂಬಂಧೀ ಶ್ರೇಣೀಕರೂ ಹೆಚ್ಚಿನ ಜೀವನವನ್ನು ಸದಾ ಮಟ್ಟ ಹಾಕುತ್ತಲೇ ಇರುತ್ತಾರೆ. ಈವರೆಗೆ ದಲಿತರಿಗೆ ವಿವಿಧ ಕ್ಷೇತ್ರಗಳಲ್ಲಿ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಮಹಿಳಾ ಮೀಸಲಾತಿ ಮಸೂದೆಯ ಪ್ರಕರಣಕ್ಕೆ ಒಡ್ಡುವ ವಿರೋಧದ ತರ್ಕವನ್ನೇ ಹಿಡಿದರೆ ದಲಿತರಿಗೆ ದೊರಕುವ ಮೀಸಲಾತಿಯಲ್ಲೂ ಅಲ್ಲಿನ ದಲಿತ ಮಹಿಳೆಯರಿಗೆ ಒಳ ಮೀಸಲಾತಿಯನ್ನು ಒಪ್ಪಬೇಕು. ಆದರೆ ಹಾಗೆ ದಲಿತ

ಎಚ್. ಎಸ್. ಶ್ರೀಮತಿ

ಹೆಂಗಸರಿಗೆಂದು ವಿಶೇಷ ಸೌಲಭ್ಯವನ್ನು ಒದಗಿಸುವಲ್ಲಿ ದಲಿತ ಪುರುಷರೇನೂ ಮುಂದಾಗಿಲ್ಲ. ದಲಿತ ಮಹಿಳೆಯರ ಬಗೆಗಿನ ಕಾಳಜಿ ಇಲ್ಲಿ ವ್ಯಕ್ತವಾಗಲಿಲ್ಲವೇಕೆ ? ಇಂಥದೇ ಇನ್ನೆಷ್ಟೋ ಸಮಸ್ಯೆಗಳಲ್ಲಿ ಮಹಿಳೆಯರನ್ನು ಸಮಸಮವಾಗಿ ತನ್ನೊಂದಿಗೆ ನಡೆಸಿಕೊಂಡು ಜಾತಿ/ವರ್ಗ ಹೋರಾಟಗಳು ಎಷ್ಟರ ಮಟ್ಟಿಗೆ ಸಾಗುತ್ತಿವೆ ? ಅಲ್ಲಿನ ಪುರುಷರೂ ಕೂಡ ತಾವು ಮೊದಲಿಗೆ ಧಾವಿಸಿ ಮುಂದೆ ಹೋಗುವುದನ್ನಷ್ಟೇ ನೋಡಿಕೊಳ್ಳುತ್ತಿದ್ದಾರೆಯೇ ಹೊರತು, ಹೆಂಗಸರು ಅಲ್ಲೂ ಹಿಂದೆಯೇ ಉಳಿದು ಹೋಗುತ್ತಿದ್ದಾರೆ.

ಈ ಮಾತಿನ ಅರ್ಥ ಮಹಿಳಾ ಮೀಸಲಾತಿಯ ಮಾತಿನಲ್ಲಿ ದಲಿತ ಮಹಿಳೆಯರ ಪ್ರಶ್ನೆ ಸೇರುವುದಿಲ್ಲವೆಂದಲ್ಲ, ಮೇಲು ಜಾತಿ/ವರ್ಗಗಳ ಮಹಿಳೆಯರ ಬದುಕನ್ನೂ ದಲಿತ ಮಹಿಳೆಯರ ಕಷ್ಟ ಕಾರ್ಪಣ್ಯಗಳನ್ನೂ ಒಂದೇ ತಕ್ಕಡಿಯಲ್ಲಿಟ್ಟು ನೋಡಬೇಕೆಂದೇನೂ ಅಲ್ಲ, ದಲಿತ ಮಹಿಳೆಯರ ಹಕ್ಕು ಬಾಧ್ಯತೆಗಳ ಪ್ರಶ್ನೆ ಜಾತಿ/ವರ್ಗ ಹೋರಾಟಗಳೊಂದಿಗೂ ತಳಕು ಹಾಕಿಕೊಂಡದ್ದು. ಈ ಕಷ್ಟ ಕಾರ್ಪಣ್ಯಗಳನ್ನು ಮೀರಿ ಮಹಿಳಾಲೋಕಕ್ಕೇ ವಿಶಿಷ್ಟವಾದ ಸಮಸ್ಯೆಗಳೂ ಇವೆ. ಒಟ್ಟು ಮಹಿಳಾಲೋಕದ ಎಲ್ಲರೆದುರೂ ಇರುವ ಪ್ರಶ್ನೆಗಳಿವು. ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳಲ್ಲಿ 'ಸೋದರಿತ್ವ' ಎಂಬ ಒಂದು ಪರಿಕಲ್ಪನೆಯನ್ನು ಬಳಸಲಾಗುತ್ತದೆ. ಮಹಿಳೆಯರ ಒಟ್ಟು ಸಮಸ್ಯೆಗಳಲ್ಲಿ ಎಲ್ಲ ಮಹಿಳೆಯರೂ ಸೋದರಿಯರೇ ಎಂಬ ಅರ್ಥದಲ್ಲಿ ಈ ಪರಿಕಲ್ಪನೆ ಅಲ್ಲಿ ಬಳಕೆಯಾಗುವಷ್ಟು ರೀತಿಯಲ್ಲಿ ನಮ್ಮ ಸಂಕೀರ್ಣ ಸಮಾಜ ರಚನೆಯ ಸಂದರ್ಭಗಳಲ್ಲಿ ಬಳಸುವುದು ಕಷ್ಟವೇ. ಇದನ್ನೇ ಹಿಡಿದು ಮೇಲುಜಾತಿ/ವರ್ಗಗಳ ಮಹಿಳೆಯರು ಹೇಳಿದ ಇಂಥಾ ನಾಟಕದ ಮಾತುಗಳಿಗೆ ಮರುಳಾದೀರಿ ಎಂಬ ಎಚ್ಚರಿಕೆಯನ್ನು ದಲಿತ ಮಹಿಳೆಯರಿಗೆ ನೀಡುವ, ಆ ಮೂಲಕ ನಮ್ಮನ್ನು ವಿಭಜಿಸುವ ಪುರುಷ ಚಿಂತನೆಗಳ ಬಗ್ಗೆ ಎಚ್ಚರದಿಂದಿರಬೇಕು. ಪ್ರಾಮಾಣಿಕವಾದ ಸ್ತ್ರೀವಾದಿ ಚಿಂತನೆಗಳು ಜಾತಿ/ವರ್ಗಗಳ ಎಲ್ಲ ಪರಿಧಿಗಳನ್ನೂ ದಾಟಿ ನಮ್ಮ ಸಮಾಜದ ಸಂಕೀರ್ಣತೆಗಳನ್ನು ಅರ್ಥ ಮಾಡಿಕೊಂಡು, ಹೆಚ್ಚಿನ ಸೂಕ್ಷ್ಮತೆಯಿಂದ 'ಸೋದರಿತ್ವ'ವನ್ನು ಸಾಧಿಸಬೇಕಿದೆ. ಸಮಾಜದ ವಿವಿಧ ಜಾತಿ/ವರ್ಗಗಳೆಂಬ ಸ್ತರಗಳಲ್ಲಿ ಬಗೆಬಗೆಯ ಶೋಷಣೆ ಅನ್ಯಾಯಗಳಲ್ಲೇ ಬದುಕಬೇಕಾಗಿರುವ ಎಲ್ಲ ಮಹಿಳೆಯರೂ ದಲಿತರೇ. ಸಮಾಜದ ಕಟ್ಟಕಡೆಯ ಅಂಚಿಗೆ ಒತ್ತರಿಸಿಹೋಗಿರುವ ಈ ಮಹಿಳೆಯರು ಇದೀಗ ಹಲ ಕೆಲವು ನೆಲೆಗಳಲ್ಲಿ ಅಷ್ಟಿಷ್ಟು ಧ್ವನಿ ಎತ್ತಿ ತಮ್ಮ ಇರವನ್ನು ಕಂಡುಕೊಳ್ಳಲು ಯತ್ನಿಸುತ್ತಿದ್ದಾರೆ. ಎಲ್ಲೋ ಒಬ್ಬ ಇಂದಿರಾ ಗಾಂಧಿಯನ್ನೋ, ಬೆರಳೆಣಿಕೆಯ ಮಹಿಳಾ ಅಧಿಕಾರಿಗಳನ್ನೋ, ಸವಲತ್ತಿನ ಬದುಕನ್ನು ನಡೆಸುವ ಅದೃಷ್ಟದ ಸಣ್ಣ ಮಹಿಳಾ ಸಮುದಾಯವನ್ನೋ ಬೆರಳು ಮಾಡಿ ತೋರಿಸಿ ಮೇಲುವರ್ಗ/ಜಾತಿಯ ಮಹಿಳೆಯರೆಲ್ಲ ಈಗಾಗಲೇ ಉದ್ಧಾರವಾಗಿ ಹೋಗಿದ್ದಾರೆ ಎಂಬಂತೆ ಮಾತನಾಡಿದರೆ ಅರ್ಥವಿಲ್ಲ. ಹಾಗೆ ಹಲಕೆಲವು ದಲಿತರೂ, ದಲಿತ ಮಹಿಳೆಯರೂ ಮುನ್ನಡೆದಿರಬಹುದು. ಅಷ್ಟಕ್ಕೆ ಅದು ಇಡೀ ಸಮುದಾಯಕ್ಕೆ ಅನ್ವಯಿಸಬಹುದಾದ ಮಾತಾಗಲಾರದು.

ಒಟ್ಟಿನಲ್ಲಿ ಮಹಿಳಾ ಲೋಕದ ಸಮಸ್ಯೆ ಬೃಹದಾಕಾರದ್ದಾಗಿದ್ದು ಈಗೀಗಷ್ಟೇ ಒಂದಿಷ್ಟು ಚಲನೆ ಕಾಣಿಸಿಕೊಳ್ಳತೊಡಗಿರುವಾಗ, ಈ ಪ್ರತ್ಯೇಕತೆಯ ಪ್ರಶ್ನೆ ಅಪಾಯಕಾರಿಯದಾಗಿರಬಹುದು. ಸದ್ಯಕ್ಕೆ ಜಾತಿ/ವರ್ಗ ಹೋರಾಟಗಳು ಮಹಿಳಾ ಹೋರಾಟಗಳಿಗಿಂತ ಒಂದು ಹೆಜ್ಜೆ ಮುಂದಿದ್ದು ಶಕ್ತಿಯುತವಾಗಿವೆ. ಎಷ್ಟೋ ತಾತ್ವಿಕ ಸೈದ್ಧಾಂತಿಕ ನೆಲೆಗಳಲ್ಲಿ ಅವುಗಳ ಅನುಭವಗಳನ್ನು ಮಹಿಳಾ ಹೋರಾಟಗಳಿಗೆ ಬಳಸುವುದು ಸಾಧ್ಯ. ಆದರೆ ನಮ್ಮ ನಮ್ಮಲ್ಲಿ ಪ್ರತ್ಯೇಕತೆಯನ್ನು ಬೆಂಬಲಿಸುವುದು ನಮ್ಮ ಬಲವನ್ನು ಕುಗ್ಗಿಸುವ ಸಂಗತಿಯೇ. ಮಹಿಳಾ ಸಮುದಾಯದ ಪ್ರಶ್ನೆಗಳೊಳಗೇ ಜಾತಿ/ವರ್ಗಗಳ ಸಂಕೀರ್ಣತೆಯ ಪ್ರಶ್ನೆ ಇದೆಯಲ್ಲವೇ ಎಂದರೆ, ಇದೆ. ಆದರೆ ಮನೆಯ ಸದಸ್ಯರಲ್ಲಿ ಭಿನ್ನಾಭಿಪ್ರಾಯಗಳಿರ ಬಹುದಾದರೂ, ಹೊರಗಿನವರ ಧಾಳಿಯ ಎದುರು ನಾವು ಒಗ್ಗಟ್ಟಾಗಿ ನಿಲ್ಲುವುದು ಶ್ರೇಯಸ್ಸಿನ ಮಾತು. ಆದರೆ ಹೊರಗಿನವರು ಯಾರು ಎಂಬ ಪ್ರಶ್ನೆಯನ್ನು ನಮ್ಮ ಮಹಿಳಾ ಹೋರಾಟಗಳು ಗಟ್ಟಿಯಾಗಿ ನಿಂತು ಉತ್ತರಿಸಬೇಕಾದ ಅಗತ್ಯವೂ ಇದೆ.

**ಸದ್ಯಕ್ಕೆ ಸ್ತ್ರೀ ಪುರುಷ ಸಮಾನತೆಯ ಒಂದು ಸಾಧನವಾಗಿ ಒದಗಬಹುದಾದ ಮಹಿಳಾ ಮೀಸಲಾತಿಯನ್ನು ಪಡೆದು ನಾವು ರಾಜಕೀಯವಾಗಿ ಸಶಕ್ತರಾಗಬೇಕು. ಇಲ್ಲಿ ಮಹಿಳೆಯರೆಲ್ಲರೂ ಒಂದೇ. ನಂತರದಲ್ಲಿ ಈ ಸೌಲಭ್ಯ ನಮ್ಮ ನಮ್ಮಲ್ಲಿ ಹೇಗೆ ಹಂಚಿಕೆಯಾಗಬೇಕೆಂಬ ಸಾಮಾಜಿಕ ನ್ಯಾಯದ ಬಗ್ಗೆಯೂ ವಿವೇಚಿಸಲೇಬೇಕು. ಆದರೆ ಈ ಮಧ್ಯೆ ತಲೆ ಹಾಕಿ ತನ್ನ ಬೇಳೆ ಬೇಯಿಸಿಕೊಳ್ಳುವ ಪುರುಷ ಚಿಂತನೆಗೆ ಅವಕಾಶ ಬೇಡ.** ಒಟ್ಟು ಮಹಿಳಾ ಮೀಸಲಾತಿಯಲ್ಲಿ ದಲಿತ ಮಹಿಳೆಗೆ ಪಾಲು ಒದಗಿಬಿಟ್ಟರೆ, ತಮ್ಮ ಪಾಲಿನಲ್ಲಿ ಅವರಿಗೆ ಕೊಡಬೇಕಾದ್ದನ್ನು ತಪ್ಪಿಸಬಹುದು ಎಂದು ತರ್ಕಿಸಿದರೆ ಅದು ಮಹಿಳಾ ಸಮುದಾಯಕ್ಕೆ ಮಾಡುವ ವಂಚನೆ ಯಲ್ಲವೇ ? ಒಟ್ಟು ಮಹಿಳೆಯರಿಗಾಗಿ ಎಂದು ಮೀಸಲಿಟ್ಟ ಭಾಗದೊಳಗೇ ದಲಿತ ಮಹಿಳೆ ಎಂಬ ಜಾತಿಪ್ರಶ್ನೆಯನ್ನೂ ತೂರಿಸಿಬಿಟ್ಟು ಜಾತಿ ಮೀಸಲಾತಿಯಲ್ಲಿ ದಲಿತ ಮಹಿಳೆಯ ಪಾಲನ್ನು ನುಂಗಿ ಹಾಕಲು ಅವಕಾಶವಾಗುವುದು ಬೇಡ. ದಲಿತರ ಕೋಟಾದಲ್ಲಿ ಅಲ್ಲಿನ ಮಹಿಳೆಯರಿಗೆ ನ್ಯಾಯವಾದ ಪಾಲು ಸಿಗಬೇಕು. ಒಟ್ಟು ಮಹಿಳಾ ಮೀಸಲಾತಿಯಲ್ಲಿ ದಲಿತ ಮಹಿಳೆಯೂ ಸೇರಿದಂತೆ, ಎಲ್ಲ ದುರ್ಬಲ ಮಹಿಳೆಯರ ಹಕ್ಕುಗಳೂ ಸಂರಕ್ಷಿತವಾಗಬೇಕು. ಮಹಿಳೆಯರೆಲ್ಲರೂ ಪರಸ್ಪರ ನ್ಯಾಯಯುತವಾದ ಒಂದು ಒಪ್ಪಂದಕ್ಕೆ ಬರುವಲ್ಲಿ 'ಸೋದರಿತ್ವ'ವನ್ನು ಸಾಧಿಸಬೇಕು. 'ಮಹಿಳಾ ಮೀಸಲಾತಿ' ಎಂದಾಕ್ಷಣ 'ದಲಿತ ಮಹಿಳೆ'ಯನ್ನು ಹೊರತುಪಡಿಸಿ ಎಂಬ ಅರ್ಥವೇನಲ್ಲ. ಇಲ್ಲದ ಅರ್ಥವನ್ನು ತುರುಕಿ ಪುರುಷ ಚಿಂತನೆಯ ವಾದ ವಿವಾದಗಳನ್ನೆಬ್ಬಿಸಿ, ಮಹಿಳಾ ಮೀಸಲಾತಿ ಮಸೂದೆಯು ಎಂದೆಂದೂ ಒಂದು ಗತಿ ಕಾಣದಿರಲಿ ಎಂಬ ಪ್ರಯತ್ನವನ್ನು ನಡೆಸುತ್ತಿದೆ ಎಂಬ ಬಗ್ಗೆ ಎಚ್ಚರ ಅಗತ್ಯ.

ಎಚ್. ಎಸ್. ಶ್ರೀಮತಿ
ಮಹಿಳಾ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ -೫೮೩ ೨೭೬

# ಮರುಭೂಮಿ ರಾಜ್ಯದ ಏಕೈಕ ಗಿರಿಧಾಮ - ಮೌಂಟ್ ಅಬು

ಎಚ್ ಎಮ್ ಟಿ ಬಹುಮಾನಿತ ಲೇಖನ




ಸ್ವಾಮಿ ರಾಮಕೃಷ್ಣಾರ್ಪಣಾನಂದ

**ಮ**ರುಭೂಮಿಯ ರಾಜ್ಯವಾದ ರಾಜಾಸ್ಥಾನದ ಜನರಿಗೆ ಓಯಸಿಸ್‌ನಂತಹ ಗಿರಿಧಾಮವೆಂದರೆ ಆ ರಾಜ್ಯದ ದಕ್ಷಿಣ ಪಶ್ಚಿಮಕ್ಕಿರುವ (ಅಂದರೆ ನೈರುತ್ಯ) ಮೌಂಟ್ ಅಬು. ರಾಜಾಸ್ಥಾನವನ್ನು ಇಬ್ಭಾಗವಾಗಿಸುವ ಅರಾವಳಿ ಪರ್ವತ ಶ್ರೇಣಿಯ ವ್ಯಾಪ್ತಿಯಲ್ಲಿ ಬರುವ ಈ ಪ್ರದೇಶ ಅದರಿಂದ ಬೇರಾಗಿ ಒಂದು ಕಣಿವೆಯನ್ನು ಸೃಷ್ಟಿಸಿದೆ. ಅಬು ಪರ್ವತ ಶ್ರೇಣಿಯು ೩೦ ಕಿ.ಮೀ. ಉದ್ದ ಮತ್ತು ೧೨ ಕಿ. ಮೀ. ಅಗಲವನ್ನು ಹೊಂದಿದ್ದರೂ ಸಮತಟ್ಟಾದ ಭೂ ಪ್ರದೇಶದ (ಅಂದರೆ ಕಣಿವೆಯ) ಪರಿಮಿತಿ ಕೇವಲ ೧೬ ಕಿ.ಮೀ. ಉದ್ದ ಹಾಗೂ ೫ ಕಿ.ಮೀ. ಅಗಲವನ್ನು ಹೊಂದಿದೆ. ಪರ್ವತದ ಇಳಿಜಾರು ಹಾಗೂ ಕಣಿವೆಯ ಪ್ರದೇಶವೆಲ್ಲಾ ದಟ್ಟವಾದ ಅರಣ್ಯದಿಂದ ಆವೃತವಾಗಿದೆ. ಇಲ್ಲಿನ ವಿಶೇಷ ಗಿಡಮರಗಳೆಂದರೆ ಬಿದಿರು. ಈ ಕಾನನದಲ್ಲಿ ಅನೇಕ ಜಾತಿಯ ಹೂ ಗಿಡಗಳನ್ನು, ಮೃಗಗಳನ್ನು ಹಾಗೂ ಪಕ್ಷಿಗಳನ್ನು ಕಾಣಬಹುದಾಗಿದೆ. ಇದರ ಪ್ರಖ್ಯಾತಿಗೆ ಅಲ್ಲಿರುವ ದಿಲ್ವಾರ ಜೈನ ಮಂದಿರ ಮತ್ತು ಪ್ರಜಾಪಿತ ಬ್ರಹ್ಮಕುಮಾರಿ ಸಮಾಜದ ಕೇಂದ್ರ ಕಚೇರಿಯ ಕೊಡುಗೆಯೂ ಅಪಾರವಾಗಿದೆ.

ಮೌಂಟ್ ಅಬುವಿನಲ್ಲಿ ಸ್ಯಾನಿಟೋರಿಯಂ ಒಂದನ್ನು ಸ್ಥಾಪಿಸಲು ಬ್ರಿಟಿಷರು ಇದನ್ನು ೧೮೪೫ರಲ್ಲಿ ಶಿರೋಶಿ ಮಹಾರಾಜ ಶಿವ್‌ಸಿಂಗ್‌ನಿಂದ ಭೋಗ್ಯಕ್ಕೆ ಪಡೆದಿದ್ದರು. ನಂತರ ೧೯೧೭ರಲ್ಲಿ ಇದನ್ನು ರಜಪೂತಾನದ ಅವರ ಪ್ರತಿನಿಧಿಯ ವಾಸಕ್ಕಾಗಿ ವರ್ಷಕ್ಕೆ ೨೬೦೦೦.೦೦ ರೂ.ಗಳಿಗೆ ಶಾಶ್ವತವಾಗಿ ಮಹಾರಾಜ ಕೇಸರಿಸಿಂಗ್‌ನಿಂದ ಭೋಗ್ಯಕ್ಕೆ ಪಡೆದಿದ್ದರು. ಸ್ವಾತಂತ್ರ್ಯಾನಂತರ ಇದನ್ನು ಮಹಾರಾಷ್ಟ್ರದ ಬನಸ್ಕಾಂತ ಜಿಲ್ಲೆಗೆ ಸೇರಿಸಲಾಯಿತು. ನಂತರ ರಾಜಾಸ್ಥಾನದವರು ಕೇಂದ್ರ ಸರಕಾರದೊಡನೆ ನಡೆಸಿದ ಹೋರಾಟದಿಂದಾಗಿ ಮತ್ತೆ ರಾಜಾಸ್ಥಾನದ ವ್ಯಾಪ್ತಿಗೆ ಒಳಪಟ್ಟಿತು. ಅಬು ಸೃಷ್ಟಿಗೆ ಸಂಬಂಧಪಟ್ಟಂತೆ ಪುರಾಣದಲ್ಲಿ ಕತೆಯೊಂದಿದೆ. ಅದು ವಸಿಷ್ಠರ ವಾಸಸ್ಥಾನವಾಗಿತ್ತಂತೆ. ದೇವಪಶು ನಂದಿನಿಯ ಹಿನ್ನೆಲೆಯಲ್ಲಿ ಇದಕ್ಕೆ ನಂದಿವರ್ಧನವೆಂಬ ಹೆಸರಿತ್ತು. ಪರಶುರಾಮನು ಕ್ಷತ್ರಿಯರನ್ನು ಧ್ವಂಸಗೊಳಿಸಿದ ತರುವಾಯದಲ್ಲಿ ವಸಿಷ್ಠರು ಪುನಃ ಕ್ಷತ್ರಿಯ ಕುಲವನ್ನು ಪುನರುತ್ಥಾನಗೊಳಿಸಿ ಚೌಹಾನ್, ಪಾರ್‌ಮರ್, ಪರಿಹಾರ್, ಸೋಲಂಕಿ ಎಂಬ ನಾಲ್ಕು ಕ್ಷತ್ರಿಯ ವಂಶಗಳನ್ನು ಸೃಷ್ಟಿಸಿದರಂತೆ. ಈ ಕ್ಷತ್ರಿಯರೇ ಮುಂದೆ ಅಬುವನ್ನು ಆಳಿದರು.

ಅಬು ೧೩ನೇ ಶತಮಾನದವರೆಗೂ ವಿವಿಧ ರಾಜರ ಆಳ್ವಿಕೆಗೆ ಒಳಪಟ್ಟಿತ್ತು. ಆದರೆ ೧೩೦೨ ರಿಂದ ೧೩೧೧ರವರೆಗೆ ನಡೆದ ಯುದ್ಧದಲ್ಲಿ ಚವ್ಹಾನರು ಪಾರ್‌ಮರರನ್ನು ಸೋಲಿಸಿದರು. ಇವರ ಆಳ್ವಿಕೆಯಲ್ಲಿ ಅಬು ಶಿಲ್ಪಕಲೆಯಲ್ಲಿ ಅದ್ಭುತ ಕಲಾಕೃತಿಗಳನ್ನು ಕಂಡಿತು. ಅವುಗಳಲ್ಲಿ ಕನಸಿನ ಲೋಕದ ದಿಲ್ವಾರ ದೇಗುಲಗಳು ಪ್ರಮುಖವಾದವು. ಈ ಗಿರಿಧಾಮದ ಬಗ್ಗೆ ಸಾಕಷ್ಟು ತಿಳಿದಿದ್ದ ನಾನು ಅದರ ಬಗೆಗಿನ ಅದ್ಭುತ ಕನಸುಗಳನ್ನು ಹೊತ್ತು ೧೯೯೯ರ ನವೆಂಬರ್ ತಿಂಗಳಲ್ಲಿ ಹೋದಾಗ ಆದದ್ದು ಮಾತ್ರ ಕಹಿ ಅನುಭವಗಳೇ. ದಿಲ್ವಾರ ಜೈನ ದೇವಾಲಯಗಳನ್ನು ಹೊರತುಪಡಿಸಿದರೆ ಮೌಂಟ್ ಅಬುವಿನಲ್ಲಿ ನಮ್ಮ ನಂದಿಬೆಟ್ಟ, ಊಟಿ, ಕೊಡೈಕೆನಾಲ್‌ಗಳಲ್ಲಿ ಕಾಣದಿರುವಂತಹ ಯಾವ ವಿಶೇಷವೂ ಕಂಡುಬರಲಿಲ್ಲ.

ಮೌಂಟ್‌ಅಬು ಪ್ರವಾಸಕ್ಕೆ ಬೇಸಿಗೆ ಅಥವಾ ಅಕ್ಟೋಬರ್ ಮತ್ತು ನವೆಂಬರ್ ಪ್ರಶಸ್ತ ಕಾಲ. ಇಲ್ಲಿಗೆ ಜೈಪುರ್‌ದಿಂದ, ಜೋಧ್‌ಪುರ್‌ದಿಂದ ಅಥವಾ ಅಹಮದಾಬಾದ್ ಕಡೆಯಿಂದಲೂ ಹೋಗಬಹುದು. ಅಬು ರೋಡ್‌ವರೆಗೆ ರೈಲು ಸಂಪರ್ಕವೂ ಇದೆ. ಅಬು ರೋಡ್‌ನಿಂದ ಮಾತ್ರ ಪ್ರತ್ಯೇಕ ಬಸ್‌ನಲ್ಲೇ ಸುಮಾರು ೨೮ ಕಿ.ಮೀ. ದೂರವನ್ನು ಕ್ರಮಿಸಬೇಕು.

ನಾನು ನನ್ನ ಮಿತ್ರ, ಜೋಧ್‌ಪುರದಿಂದ ರಾತ್ರಿ ಬಸ್‌ನಲ್ಲಿ ಪ್ರಯಾಣ ಕೈಗೊಂಡೆವು. ದೀಪಾವಳಿಯ ದಿನವಾದ್ದರಿಂದ ಪ್ರಯಾಣದಲ್ಲಿ ನಾವು ಹಾದು ಹೋಗುತ್ತಿದ್ದ ಪ್ರತಿಯೊಂದು ಊರು ಮಧ್ಯರಾತ್ರಿಯಾದರೂ ವಿದ್ಯುತ್ ದೀಪಗಳಿಂದ ಜಗಮಗಿಸುತ್ತಾ ಸಂಭ್ರಮ, ಸಡಗರಗಳನ್ನು ವ್ಯಕ್ತಪಡಿಸುತ್ತಿದ್ದವು. ಭೂಮಿ, ಬಸ್ಸು ನಮ್ಮ ಹೃದಯಗಳೆಲ್ಲಾ ಅದುರುವಂತೆ ಆಟಂಬಾಂಬ್ ಪಟಾಕಿಗಳು, ಬಾಣಬಿರುಸುಗಳು ದಾರಿಯುದ್ದಕ್ಕೂ ಸಿಡಿಯುತ್ತಿದ್ದವು. ಯುವಕರ ಹುಮ್ಮಸ್ಸು ಎಷ್ಟಿತ್ತೆಂದರೆ, ನಮ್ಮ ಬಸ್ಸಿನ ಚಾಲಕನ ಮುಂದಿದ್ದ ಗಾಜಿಗೆ ರೊಯ್ಯನೆ ಕಲ್ಲು ತೂರಿ, ಪಳ್ಳನೆ ಪುಡಿ ಪುಡಿ ಮಾಡಿ ಪಲಾಯನ ಮಾಡಿದರು ! ಇದು ಅವರ ದೀಪಾವಳಿ ಮೋಜು ! ರಾತ್ರಿ ಮೂರರ ವೇಳೆಗೆ ಅಬು ರೋಡ್ ಬಸ್ ನಿಲ್ದಾಣವನ್ನು ತಲುಪಿದೆವು. ಅಬುವಿಗೆ ಹೋಗುವ ಪ್ರಥಮ ಬಸ್ ೫.೩೦ಕ್ಕೆ ಇದ್ದುದರಿಂದ ಅಲ್ಲೇ ಬೆಂಕಿಯಲ್ಲಿ ಮೈ ಬಿಸಿ ಮಾಡಿಕೊಳ್ಳುತ್ತಿದ್ದವರೊಡನೆ ಕುಳಿತು ಚಳಿಯಿಂದ ಮರಗಟ್ಟಿ ಹೋಗಿದ್ದ ಮೈ ಕೈಗಳನ್ನು ಕಾಯಿಸಿಕೊಂಡು ಸ್ವಲ್ಪ ಮಜ ತೆಗೆದುಕೊಂಡೆವು. ಜೀಪಿನವರು (ಇಲ್ಲಿ ಜೀಪುಗಳನ್ನು ಟ್ಯಾಕ್ಸಿ ಎನ್ನುತ್ತಾರೆ) ೨೮ ಕಿ. ಮೀ.ನ ಮೌಂಟ್ ಅಬುವಿಗೆ ಇಬ್ಬರಿಗೆ ಒಂದು ಸಾವಿರವನ್ನು ಕೇಳಿ ಕಡೆಗೆ ಆರುನೂರರವರೆಗೂ ಬಂದಾಗ ಇಲ್ಲಿನ ಬ್ಲೇಡಿನ ಬಿಸಿಯ ಮುನ್ಸೂಚನೆ ಸಿಕ್ಕಿತು !

ಮೌಂಟ್ ಅಬು ಬಸ್ ಬಂತು. ನೂಕುನುಗ್ಗಲಿನಲ್ಲಿ ನುಗ್ಗಿ ಹೇಗೋ ಸೀಟು ಮಾಡಿಕೊಂಡೆವು. ೫.೩೫ಕ್ಕೆ ಹೊರಟ ಬಸ್ ಗಿರಿನಗರ ಇನ್ನೇನು ಒಂದೆರಡು ಕಿ.ಮೀ. ದೂರವೆನ್ನುವಾಗ ಅಬು ಜಿಲ್ಲಾ ಪಂಚಾಯಿತಿಯ ಚೆಕ್ ಪೋಸ್ಟ್ ಬಳಿ ನಿಂತಿತು. ಜಿಲ್ಲಾ ಪಂಚಾಯಿತಿಯವರು ಅಲ್ಲಿ ಪ್ರತಿಯೊಬ್ಬ ಪ್ರಯಾಣಿಕರಿಂದಲೂ ತಲಾ ಐದು ರೂಪಾಯಿಗಳನ್ನು ಅಬುವಿನ ಪ್ರಗತಿ ಶುಲ್ಕವಾಗಿ ವಸೂಲಿ ಮಾಡಿದರು. ಆದರೆ, ನಗರವನ್ನು ಪ್ರವೇಶಿಸುತ್ತಿದ್ದಂತೆ ನಮ್ಮ ಕಣ್ಣಿಗೆ ಯಾವುದೇ ಪ್ರಗತಿದಾಯಕ ಕುರುಹೂ ಕಂಡುಬರಲಿಲ್ಲ. ಭಾರತದಲ್ಲಿ ಎಲ್ಲೇ ನೋಡಿದರೂ ಕೊಳಕಿಗೇನೂ ಕೊರತೆಯಿಲ್ಲ. ಅದರಲ್ಲೂ ರಾಜಾಸ್ಥಾನದಲ್ಲಿ ಸಾಮಾನ್ಯವಾಗಿ ಎಲ್ಲೆಲ್ಲೂ ಕೊಳಕೆ. ಅಬುವಿನಲ್ಲೂ ನಾವು ಇದಕ್ಕೆ ಭಿನ್ನವಾದ ದೃಶ್ಯಗಳನ್ನೇನೂ ಕಾಣಲಿಲ್ಲ !

ಮೌಂಟ್ ಅಬು ಅತ್ತ ದೊಡ್ಡ ಪಟ್ಟಣವೂ ಅಲ್ಲದ, ಇತ್ತ ಸಣ್ಣ ಊರೂ ಅಲ್ಲದ ಕೇವಲ ೨೫ ರಿಂದ ೩೦ ಸಾವಿರ ಜನಸಂಖ್ಯೆಯನ್ನು ಹೊಂದಿರುವ ಒಂದು ಪ್ರವಾಸಿ ಗಿರಿಧಾಮ. ಆದರೆ ಅದು ಖ್ಯಾತಿಗೆ ತಕ್ಕ ಊರಲ್ಲ. ಏಕೆಂದರೆ ಎಲ್ಲಾ ವರ್ಗದ ಪ್ರವಾಸಿಗರಿಗೆ ಬೇಕಾಗುವ ವ್ಯವಸ್ಥೆಗಳಾಗಲಿ, ಮೂಲಭೂತ ಸೌಲಭ್ಯಗಳಾಗಲಿ ಅಲ್ಲಿ ಇಲ್ಲವೇ ಇಲ್ಲ. ಬಸ್ ನಿಲ್ದಾಣದ ಪಕ್ಕದಲ್ಲಿ ನಕ್ಕಿ ಲೇಕ್‌ವರೆಗೂ ಹಾದು ಹೋಗಿರುವ ಸುಮಾರು ಒಂದು ಕಿ.ಮೀ. ದೂರದ ಏಕೈಕ ರಸ್ತೆಯೇ ಇದರ ಜೀವನಾಡಿ. ಪ್ರವಾಸಿಗರಿಂದಲೇ ತುಂಬಿ ತುಳುಕುವ ಈ ನಗರದಲ್ಲಿ ಬಸ್ ನಿಲ್ದಾಣ ಪಾಳುಕೊಂಪೆಯಂತಿದೆ. ಸುಣ್ಣ ಬಣ್ಣವನ್ನೇ ಕಾಣದ ಕಟ್ಟಡ, ತಾರನ್ನೇ ನೋಡದ ನೆಲ. ಪ್ರಯಾಣಿಕರು ಕುಳಿತುಕೊಳ್ಳಲು ಇರುವ ಮೂರ್ನಾಲ್ಕು ಕಲ್ಲು ಬೆಂಚುಗಳೂ ಸದಾ ಧೂಳು ಮತ್ತು ಪಾರಿವಾಳದ ಹಿಕ್ಕೆಯಿಂದ ಅಲಂಕೃತವಾಗಿರುತ್ತವೆ. ಕುಡಿಯುವ ನೀರಿನ ವ್ಯವಸ್ಥೆಯಾಗಲಿ ಒಂದು ಉತ್ತಮ ಶೌಚಾಲಯವಾಗಲಿ ಎಲ್ಲೂ ಕಂಡುಬರುವುದಿಲ್ಲ.



*ನಕ್ಕಿ ಲೇಕ್‌ನ ಒಂದು ನೋಟ*

ನಮ್ಮ ಬಸ್ಸಿನಲ್ಲಿದ್ದ ಪ್ರವಾಸಿಗರನ್ನು ಹೊರತುಪಡಿಸಿದರೆ ಬೇರೆ ಯಾರೂ ಅಲ್ಲಿಗೆ ಬಂದಿರಲಿಲ್ಲವಾದರೂ ನಮಗೆ ನಮ್ಮ ಆರ್ಥಿಕ ಸಾಮರ್ಥ್ಯಕ್ಕೆ ತಕ್ಕುದಾದ ಒಂದು ರೂಮು ಸಿಗಲಿಲ್ಲ. ಕನಿಷ್ಠ ಸೌಲಭ್ಯದ ಸಿಂಗಲ್ ಬೆಡ್‌ರೂಮಿನ ಕನಿಷ್ಠ ಬಾಡಿಗೆ ದಿನ ಒಂದಕ್ಕೆ ೫೦೦ ರೂಪಾಯಿಗಳು ! ಡಬಲ್ ಬೆಡ್‌ರೂಮಿನ ಬಾಡಿಗೆ ೧೦೦೦ ರೂಪಾಯಿಗಳು ! ಪ್ರವಾಸಿಗರ ಸಂಖ್ಯೆ ಅಧಿಕವಾಗುತ್ತಿದ್ದಂತೆ ಬಾಡಿಗೆಯೂ ಹೆಚ್ಚಾಗುತ್ತದಂತೆ ! ಹೋಗಲಿ ರಾಜಾಸ್ತಾನ್ ಪ್ರವಾಸೋದ್ಯಮ ಇಲಾಖೆಯ ವಸತಿ ಗೃಹಗಳಲ್ಲಾದರೂ ಬಾಡಿಗೆ ಕಡಿಮೆ ಇದೆಯೆ ? ಇಲ್ಲ, ರೂಮಿನ ಕನಿಷ್ಠ ಬಾಡಿಗೆ ಒಂದು ಸಾವಿರ ! ಆದರೆ ಪ್ರವಾಸೋದ್ಯಮ ಪ್ರಚಾರ ಪುಸ್ತಕದಲ್ಲಿ ಕನಿಷ್ಠ ಬಾಡಿಗೆಯನ್ನು ೧೨೫ ರೂ. ಗಳೆಂದು ಅಚ್ಚು ಹಾಕಿಸಲಾಗಿದೆ. ಈ ಬಗ್ಗೆ ವಿಚಾರಿಸಲಾಗಿ ''ಸೀಝುನ್ ಇಲ್ಲದಿರುವಾಗ ಅಷ್ಟೇ ಇರುತ್ತದೆ. ಆದರೆ ಸೀಝುನ್‌ನಲ್ಲಿ ಮಾತ್ರ ಹೆಚ್ಚು ಮಾಡುತ್ತೇವೆ'' ಎಂದು ತಮ್ಮ ಹಗಲು ದರೋಡೆಯನ್ನು ಸಮರ್ಥಿಸಿಕೊಂಡರು. ಅಲ್ಲಿನ ಗರಿಷ್ಠ ಬಾಡಿಗೆ ಎಂದರೆ ನಾಲ್ಕು ಸಾವಿರ. ಸರ್ಕಾರದ ಇಲಾಖೆಯ ವಸತಿ ಗೃಹದ ಕತೆಯೇ ಹೀಗಾದರೆ ಇನ್ನು ಖಾಸಗಿಯವರ ಬಾಡಿಗೆಯೆಷ್ಟಿರಬೇಡವೆಂಬುದನ್ನು ಓದುಗರೇ ಊಹಿಸಿಕೊಳ್ಳಬೇಕು. ಧರ್ಮ ಶಾಲೆಯಲ್ಲೂ ಕನಿಷ್ಠ ಬಾಡಿಗೆ ೩೦೦ ರೂ.ಗಳು. ಇನ್ನು ಊಟ, ಉಪಹಾರಗಳು ಕೂಡ ಅಷ್ಟೇ ದುಬಾರಿ. ಎರಡು ಇಡ್ಲಿಯ ಬೆಲೆ ಹದಿನೈದು ರೂಪಾಯಿಗಳು. ಕಾಫಿ, ಟೀಗೆ ಐದು ರೂಪಾಯಿಗಳು. ಊಟದ ಬೆಲೆ ಐವತ್ತು (ಇದು ಕನಿಷ್ಠ) ! ಅಲ್ಲಿ ನಾವಿದ್ದ ಒಂದೆರಡು ದಿನವೂ ಬಿಸ್ಕೆಟು, ಕಾಫಿ, ಟೀನಲ್ಲೆ ಕಾಲ ಕಳೆದೆವು. ಹೋಗಲಿ ಹವಾಗುಣದಲ್ಲಿಯಾದರೂ ಅಂತಹ ವಿಶೇಷತೆಯೇನಾದರೂ ಇದೆಯೇ ? ಊಟಿಗೆ ಹೋಲಿಸಿದಲ್ಲಿ ಅದೂ ಇಲ್ಲ. ಹೀಗಿದ್ದೂ ಪ್ರವಾಸಿಗರು ಅಬುವಿಗೆ ಏಕೆ ಮುಗಿದುಬೀಳುತ್ತಾರೋ ಅರ್ಥವಾಗಲಿಲ್ಲ. ಆದರೆ ಇಷ್ಟು ಮಾತ್ರ ನಿಜ, ಮರುಭೂಮಿ ರಾಜ್ಯದ ಶ್ರೀಮಂತ ಜನರಿಗೆ ಮಧುಚಂದ್ರಕ್ಕೆ ಗಿರಿಧಾಮ ವೆಂದಿರುವುದು ಮೌಂಟ್ ಅಬು ಒಂದೇ. ಹೀಗಾಗಿ ಪ್ರವಾಸಿಗರಲ್ಲಿ ಶೇ. ೯೦ರಷ್ಟು ಜನ ರಾಜಾಸ್ತಾನೀಯರೇ. ಒಟ್ಟಾರೆ ಹೇಳುವುದಾದರೆ ಮೌಂಟ್ ಅಬು ಖಂಡಿತ ಸಾಮಾನ್ಯ ಜನರ ಪ್ರವಾಸಿ ತಾಣವಲ್ಲ.

ಅಬುವಿನಲ್ಲಿ ನೋಡಲು ಯೋಗ್ಯವಾದ ಪ್ರವಾಸಿ ತಾಣಗಳೆಂದರೆ ನಕ್ಕಿ ಲೇಕ್, ಟೋಡ್ ರಾಕ್, ಸನ್‌ಸೆಟ್ ಪಾಯಿಂಟ್, ಹನಿಮೂನ್ ಪಾಯಿಂಟ್, ಅರ್ಬುದ ದೇವಿ ದೇವಾಲಯ, ಅಚಲ್ ಮಹದೇವ್ ದೇವಾಲಯ, ಓಂ ಶಾಂತಿ ಭವನ್, ಗುರು ಶಿಖರ್ ಮತ್ತು ದಿಲ್ವಾರ ದೇವಾಲಯಗಳು. ಈ ಎಲ್ಲಾ ತಾಣಗಳೂ ಕೇವಲ ಐದಾರು ಕಿ.ಮೀ.ಗಳ ವ್ಯಾಪ್ತಿಯಲ್ಲಿದ್ದು, ರಾಜಾಸ್ತಾನ್ ಸಾರಿಗೆ ಸಂಸ್ಥೆ ಹಾಗೂ ಸ್ಥಳೀಯ ಪ್ರವಾಸೋದ್ಯಮದಾರರು ಪ್ರವಾಸಗಳನ್ನು ವ್ಯವಸ್ಥೆ ಮಾಡುತ್ತಾರೆ. ಇದರ ಶುಲ್ಕ ಕೇವಲ ತಲಾ ೪೫ ರೂ.ಗಳು.

ನಕ್ಕಿ ಲೇಕ್ : ಬಸ್ ನಿಲ್ದಾಣದಿಂದ ಕೇವಲ ಒಂದು ಕಿ.ಮೀ. ದೂರದಲ್ಲಿರುವ ಈ ಪ್ರಾಕೃತಿಕ ಸರೋವರಕ್ಕೆ ನಡೆದೇ ಹೋಗಬಹುದು. ಅರ್ಧ ಕಿ.ಮೀ. ಉದ್ದ, ಕಾಲು ಕಿ.ಮೀ. ಅಗಲವಿರುವ ಈ ಸುಂದರ ಸರೋವರದ ಹಿಂದೆ ಇನ್ನೊಂದು ಪೌರಾಣಿಕ ಐತಿಹ್ಯವಿದೆ. ಅದು ಅಬುವಿನ ಯುವರಾಣಿ ಕುನ್ವರಿಯನ್ನು ಮದುವೆಯಾಗಲು ಒಬ್ಬ ಸಾಧು ಒಂದೇ ರಾತ್ರಿಯಲ್ಲಿ ಈ ಸರೋವರವನ್ನು ನಿರ್ಮಾಣ ಮಾಡಬೇಕೆಂದಿತ್ತೆಂದು ಹೇಳುತ್ತದೆ. ಅದೂ ಕೇವಲ ಉಗುರುಗಳಿಂದ ! ಆದರೆ ಭಾವೀ ಅತ್ತೆ ಕೋಳಿಯಂತೆ ಕೂಗಿ ರಾತ್ರಿಯನ್ನು ಕುಗ್ಗಿಸಿಬಿಟ್ಟಳು, ಮದುವೆ ಕೂಡಿಬರಲಿಲ್ಲ. ಕುನ್ವರಿ ಮತ್ತು ಬಲಂ ಎಂಬ ಪ್ರೇಮಿಗಳಿಗಾಗಿ ಒಂದು ದೇವಾಲಯವನ್ನು ದಿಲ್ವಾರ ಹಳ್ಳಿಯಿಂದ ಸ್ವಲ್ಪ ದೂರದಲ್ಲಿ ದಕ್ಷಿಣಕ್ಕೆ ವೃಕ್ಷಗಳ ನಡುವಿನ ಪ್ರಾಕೃತಿಕ ಸೌಂದರ್ಯದ ಪ್ರಶಾಂತ ಪರಿಸರದಲ್ಲಿ ನಿರ್ಮಿಸಿದ್ದಾರೆ. ಶತ ಶತಮಾನಗಳಿಂದ ಪ್ರೀತಿ, ಪ್ರೇಮದ ಸಂಕೇತವಾಗಿ ಈ ಪುರಾತನ ದೇವಾಲಯ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.

ಬಲಂ ಸಾಧು ತನ್ನ ಉಗುರಿನಿಂದ (ನಖ್) ನಿರ್ಮಿಸಿದ ಕೊಳವೇ ನಕ್ ತಾಲ್. ಇದು ಕಾಲಾನುಕ್ರಮದಲ್ಲಿ ನಕ್ಕಿ ಲೇಕ್ ಎಂದು ರೂಪಾಂತರಗೊಂಡು ಪ್ರಸಿದ್ಧಿ ಪಡೆಯಿತು. ಸುತ್ತಲೂ ಸಸ್ಯ ಶ್ಯಾಮಲೆಯನ್ನಪ್ಪಿದ ಬೆಟ್ಟಗುಡ್ಡಗಳಿಂದ ಆವೃತವಾಗಿರುವ ಈ ಸರೋವರ ಒಂದು ದೋಣಿ ವಿಹಾರ ತಾಣವಾಗಿ ರೂಪಗೊಂಡಿದೆ. ಹೀಗಾಗಿ ತನ್ನ ಸ್ವಚ್ಛತೆ, ಪರಿಶುದ್ಧತೆ, ಪಾವಿತ್ರ್ಯಗಳನ್ನೆಲ್ಲಾ ಕಳೆದುಕೊಂಡು ಪಾಚಿಗಟ್ಟುವಷ್ಟು ಕಲುಷಿತಗೊಂಡಿದೆ. ಆದರೂ ತನ್ನ ಸೌಂದರ್ಯ ಮತ್ತು ಆಕರ್ಷಣೆಗಳನ್ನು ಉಳಿಸಿಕೊಂಡಿದೆ. ಈ ಸ್ಥಳಕ್ಕೆ ರಂಗೇರುವುದು ಮಾತ್ರ ಸಂಜೆ ಮತ್ತು ನಂತರವೇ. ಪ್ರೇಕ್ಷಣೀಯ ತಾಣಗಳ ವೀಕ್ಷಣೆಗೆ ಹೋಗಿದ್ದವರೆಲ್ಲಾ ಸಂಜೆಯಾಗುತ್ತಿದ್ದಂತೆ ಇಲ್ಲಿಗೆ ಜಮಾಯಿಸಿಬಿಡುತ್ತಾರೆ. ಸರೋವರದ ಆಸುಪಾಸಿನ ಪರಿಸರವಂತೂ ಯಕ್ಷರ, ಕಿನ್ನರರ, ಲೋಕವಾಗಿ ಪರಿವರ್ತನೆಗೊಳ್ಳುತ್ತದೆ. ಸರೋವರದ ನಡುವಿನ ಶಿಲಾ ಬಂಡೆಗಳ ಮೇಲೆ ೭೦-೮೦ ಅಡಿವರೆಗೂ ಚಿಮ್ಮುವ ಬಣ್ಣದ ಚಿಲುಮೆಗಳು ಹಾಗೂ ವಿದ್ಯುತ್ ದೀಪಗಳು ಸರೋವರದ ಸೌಂದರ್ಯವನ್ನು ಇಮ್ಮಡಿಸುತ್ತವೆ. ಈ ಸರೋವರದಲ್ಲಿ ಗಾಂಧೀಜಿಯವರ ಚಿತಾಭಸ್ಮವನ್ನು ವಿಸರ್ಜಿಸಿ, ಅವರ ಸ್ಮರಣಾರ್ಥವಾಗಿ ಪಕ್ಕದಲ್ಲೇ ಉದ್ಯಾನವನ ಒಂದನ್ನು ನಿರ್ಮಿಸಲಾಗಿದೆ.

ಸರೋವರದ ಸಮೀಪದಲ್ಲೇ ಪುರಾತನ ರಘುನಾಥಜಿ ಮತ್ತು ದುಲೇಶ್ವರ ಮಹದೇವ್ ದೇವಾಲಯಗಳಿವೆ. ಸರೋವರದ ದಕ್ಷಿಣಕ್ಕೆ ಬೆಟ್ಟದ ಮೇಲೆ ಕಪ್ಪೆ ಆಕಾರದ ಬೃಹತ್ ಬಂಡೆಯಿದ್ದು ಅದನ್ನು 'ಟೋಡ್ ರಾಕ್' ಎಂದು ಕರೆಯಲಾಗುತ್ತದೆ. ಇದೇ ರೀತಿಯ ಅನೇಕ ಹೋಲಿಕೆಯ ಶಿಲೆಗಳನ್ನು ನೋಡಬಹುದು. ಟೋಡ್ ರಾಕ್‌ನಿಂದ ಕಣಿವೆಯ ಹಾಗೂ ಸರೋವರದ ವಿಹಂಗಮ ದೃಶ್ಯ ನಯನ ಮನೋಹರ. ಸರೋವರದ ಬಲ ಮೂಲೆಯಲ್ಲಿ ಸ್ವಾಮಿ ವಿವೇಕಾನಂದರ ಪ್ರತಿಮೆಯನ್ನು ಪ್ರತಿಷ್ಠಾಪನೆ ಮಾಡಿರುವ ಒಂದು ಉದ್ಯಾನವನವಿದ್ದು, ಅದು ಕಸದ ರಾಶಿಯಾಗಿ ತನ್ನ ಸ್ವರೂಪವನ್ನೇ ವಿರೂಪ ಮಾಡಿಕೊಂಡಿದೆ.

**ಬ್ರಹ್ಮ ಕುಮಾರಿ ಸಮಾಜ**

ಭಾರತದಲ್ಲೇ ಅಲ್ಲದೆ ವಿಶ್ವದ ಹಲವು ದೇಶಗಳಲ್ಲಿ ಅಸಂಖ್ಯ ಶಾಖೆಗಳನ್ನು



*ಅರ್ಬುದ ದೇವಿ ದೇವಾಲಯವಿರುವ ಪರ್ವತ*



*ಮುಂದಿನ ಮಂಟಪದ ಮೇಲ್ಛಾವಣಿಯ ಅದ್ಭುತ ನೋಟಗಳು*

ಹೊಂದಿರುವ ಪ್ರಜಾಪಿತ ಬ್ರಹ್ಮಕುಮಾರಿ ಸಮಾಜದ ಕೇಂದ್ರ ಸ್ಥಳವಾದ ಮೌಂಟ್ ಅಬುವಿನ ನಗರ ಪ್ರದೇಶಕ್ಕೆ ಹೊಂದಿಕೊಂಡಂತೆ ಓಂ ಶಾಂತಿ ಭವನವಿದೆ. ತಂಡತಂಡವಾಗಿ ಬರುವ ಪ್ರವಾಸಿಗರನ್ನುದ್ದೇಶಿಸಿ ಬ್ರಹ್ಮಕುಮಾರಿ ಸಮಾಜದ ಕಿರುಪರಿಚಯವನ್ನು ಅಲ್ಲಿ ಮಾಡಿಕೊಡಲಾಗುತ್ತದೆ. ಶಾಂತಿಯ ಘನ ಸ್ವರೂಪದ ಸಂಕೇತದಂತಿರುವ ಈ ಭವ್ಯ ಭವನ ನೀಲಾಗಸದ ಹಿನ್ನೆಲೆಯಲ್ಲಿ ಶಾಂತಿದೂತನಂತೆ ಸುಂದರವಾಗಿ ಮತ್ತು ಗಂಭೀರವಾಗಿ ನಿಂತಿದೆ. ಒಮ್ಮೆಗೇ ಸುಮಾರು ಮೂರ್ನಾಲ್ಕು ಸಾವಿರ ಜನರು ಕೂರಬಹುದಾದಷ್ಟು ವಿಶಾಲವಾಗಿರುವ ಈ ಭವನದ ಮೇಲ್ಛಾವಣಿಗೆ ಸುತ್ತಲಿನ ಗೋಡೆಯಲ್ಲದೆ ಮಧ್ಯೆ ಯಾವುದೇ ಆಧಾರಸ್ತಂಭವಿಲ್ಲದಿರುವುದು ಹಾಗೂ ಇಂತಹ ಒಂದು ಕಟ್ಟಡ ದೇಶದಲ್ಲೇ ಮೂರನೆಯದಾಗಿ ಏಷ್ಯಾದಲ್ಲೇ ಐದನೆಯದಾಗಿರುವುದು ಮತ್ತು ತಂಪು ಹವೆಯ, ಸ್ವಚ್ಛತೆಯ ಪ್ರಶಾಂತ ಪರಿಸರ ಇದರ ವಿಶೇಷಗಳು.

ಊರ ಹೊರಗೆ ಸುಮಾರು ೩-೪ ಕಿ.ಮೀ. ದೂರದಲ್ಲಿ ಸುಂದರವಾದ ಶಾಂತಿ ವನ ಇದೆ. ಇಲ್ಲಿ ಅನೇಕ ಜಾತಿಯ ಪುಷ್ಪಗಳನ್ನು ಮರಗಿಡಗಳನ್ನು ಹುಲ್ಲನ್ನು ಅತ್ಯಾಕರ್ಷಕವಾಗಿ ಬೆಳೆಸಲಾಗಿದೆ. ಈ ಉದ್ಯಾನವನವನ್ನು ಒಂದು ಸುತ್ತು ಹಾಕಿ ಬರುವಷ್ಟರಲ್ಲಿ ಬಿಸಿಲಿನ ತಾಪ ಕಳೆದು ಆನಂದ ಮೂಡದಿರದು.

**ಅನದ್ರ ಪಾಯಿಂಟ್, ಹನಿಮೂನ್ ಪಾಯಿಂಟ್** ನಕ್ಕಿ ಲೇಕ್‌ನ ಉತ್ತರ - ಪಶ್ಚಿಮಕ್ಕೆ (ವಾಯವ್ಯ) ಅಬುವಿಗೆ ಪುರಾತನ ದ್ವಾರವಾಗಿದ್ದ ಅನದ್ರ (ಹಳ್ಳಿಯ ಹೆಸರು) ೪೦೦೦ ಅಡಿ ಎತ್ತರದಲ್ಲಿದೆ. ಇಲ್ಲಿರುವ ಪ್ರಾಕೃತಿಕ ನಿರ್ಮಿತ ಸ್ತ್ರೀ ಪುರುಷ ಮಾದರಿ ಶಿಲೆಗಳಿಂದಾಗಿ ಹನಿಮೂನ್ ಪಾಯಿಂಟ್ ಎಂದು ಕರೆಯಲಾಗಿದೆ. ನವ ವಿವಾಹಿತರು ಏಕಾಂತದಲ್ಲಿ ಸುಂದರವಾಗಿ ಕಳೆಯಲು ಹೇಳಿ ಮಾಡಿಸಿದ ಸ್ಥಳ ಇದಾಗಿದೆ. ಇಲ್ಲಿಂದ ಸೂರ್ಯ ಮುಳುಗುವ ರಮಣೀಯ ದೃಶ್ಯವನ್ನು ನೋಡಬಹುದು.

**ಅರ್ಬುದ ದೇವಿ ದೇವಾಲಯ**

ನಗರದ ಉತ್ತರಕ್ಕೆ ೪೨೬೧ ಅಡಿ ಎತ್ತರದಲ್ಲಿ ಹಸಿರು ಕಾನನದ ನಡುವೆ ಬಿಳಿಯ ಬಣ್ಣದ ಈ ಪುಟ್ಟ ಗುಹಾಂತರ ದೇವಾಲಯವಿದೆ. ಅಬುವಿನ ರಕ್ಷಣಾ ದೇವತೆಯಾದ ಅರ್ಬುದ ದೇವಿ ಇಲ್ಲಿದ್ದಾಳೆ. ಇವಳಿಗೆ ಅಧರ ದೇವಿ ಎಂಬ ಹೆಸರೂ ಇದೆ.

**ಅಚಲೇಶ್ವರ ಮಹದೇವ್ ದೇವಾಲಯ**

ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆಯುಳ್ಳ ಈ ದೇವಾಲಯಕ್ಕೆ ಸಂಬಂಧಪಟ್ಟ ಕತೆಗಳು ವಿಸ್ಮಯಕಾರಿಯಾಗಿವೆ. ಅಷ್ಟೇ ಅಲ್ಲ, ವಿಶ್ವದಲ್ಲಿ ಪುರುಷ ಮತ್ತು ಸ್ತ್ರೀ ಶಕ್ತಿಯ ಐಕ್ಯತೆಯ ಸಂಕೇತವಾಗಿರುವ ಲಿಂಗಕ್ಕೆ ಬದಲಾಗಿ ಪುರುಷ ಸಂಕೇತವೇ ಇಲ್ಲದೆ ಕೇವಲ ಸ್ತ್ರೀ ಸಂಕೇತವನ್ನಷ್ಟೇ ಹೊಂದಿದೆ. ಈ ಪೊಳ್ಳು ಕುಳಿಯೊಳಗೆ ಶಿವನ ಕಾಲ್ಬೆರಳಿನ ಮುದ್ರೆಯಿರುವುದರಿಂದ ಕಾಲ್ಬೆರಳಿನ ಶಿವ ದೇವಾಲಯವೆಂಬ ಹೆಸರೂ ಇದಕ್ಕಿದೆ. ಈ ದೇಗುಲದ ಮುಂದೆ ಪಾರ್ವತಿ ದೇವಾಲಯ ಹಾಗೂ ಎತ್ತರದ ನಂದಿಯ ಕಂಚಿನ ವಿಗ್ರಹವಿದೆ. ಈ ವಿಗ್ರಹದೊಳಗೆ ನಿಧಿಯನ್ನು ಬಚ್ಚಿಡಲಾಗಿದೆಯೆಂದು ಭಾವಿಸಿದ ಒಬ್ಬ ಮೂರ್ಖದೊರೆ ಆಕ್ರಮಣ ಮಾಡಿ ಅದನ್ನು ಸೀಳಲು ಪ್ರಯತ್ನಿಸಿದನಂತೆ. ಆದರದು ಸಾಧ್ಯವಾಗಲಿಲ್ಲ. ಈಗಲೂ ಅದರ ಗುರುತುಗಳನ್ನು ಆ ವಿಗ್ರಹದ ಮೇಲೆ ಕಾಣಬಹುದಾಗಿದೆ ಎನ್ನುತ್ತಾರೆ !

ಈ ದೇವಾಲಯದ ದಕ್ಷಿಣಕ್ಕಿರುವ ಒಂದು ಕಾಲುಹಾದಿಯು ಪುರಾತನ ಅಚಲ್‌ಘರ್ ಕೋಟೆಗೆ ಕೊಂಡೊಯ್ಯುತ್ತದೆ. ೯೦೦ನೇ ಇಸವಿಯಲ್ಲಿ ನಿರ್ಮಿಸಲಾಗಿರುವ ಈ ಕೋಟೆಯನ್ನು ಪಾರ್‌ಮರ್ ದೊರೆಗಳು ಕಟ್ಟಿಸಿದ್ದರು. ಅದನ್ನು ೧೪೫೨ರಲ್ಲಿ ಮೇವಾರ್‌ನ ರಾಣಾಕುಂಬಾ ಜೀರ್ಣೋದ್ಧಾರ ಮಾಡಿಸಿದನಂತೆ.

**ಗುರು ಶಿಖರ**

ರಾಜಾಸ್ತಾನವನ್ನು ಎರಡು ಭಾಗಗಳಾಗಿ ವಿಭಜಿಸಿರುವ ಅರಾವಳಿ ಪರ್ವತ ಶ್ರೇಣಿಯಲ್ಲೇ ಎತ್ತರದ ಶಿಖರವೊಂದು ಅಬು ನಗರದಿಂದ ೧೫ ಕಿ.ಮೀ. ದೂರದಲ್ಲಿದೆ. ಉತ್ತರದ ಹಿಮಾಲಯ ಮತ್ತು ದಕ್ಷಿಣದ ನೀಲಗಿರಿಗಳ ನಡುವೆ ಇದೇ ಅತಿ ಎತ್ತರದ್ದು ಎನ್ನುತ್ತಾರೆ. ಸಮುದ್ರಮಟ್ಟದಿಂದ ೫೬೫೩ ಅಡಿಗಳೆತ್ತರದಲ್ಲಿರುವ ಈ ಶಿಖರದ ಮೇಲೆ ಗುರು ದತ್ತಾತ್ರೇಯ ದೇಗುಲವಿರುವ ಹಿನ್ನೆಲೆಯಲ್ಲಿ ಇದಕ್ಕೆ ಗುರು ಶಿಖರವೆಂಬ ಹೆಸರು ಬಂದಿದೆ. ಈ ಶಿಖರದ ಮೇಲೆ ಬೀಸುವ ತಣ್ಣನೆ ಸುಳಿಗಾಳಿ ಹಾಗೂ ಅಲ್ಲಿಂದ ಕಾಣುವ ನಿಸರ್ಗದ ರಮಣೀಯ ದೃಶ್ಯಗಳು ಕಣ್ಣು ಮತ್ತು ಮೈ ಮನಗಳಿಗೆ ಮುದ ನೀಡುತ್ತವೆ. ದೇವಾಲಯದ ಗರ್ಭಗುಡಿಯಲ್ಲಿ ೧೪೧೧ರಷ್ಟು ಪುರಾತನವಾದ ಬೃಹತ್ ಕಂಚಿನ ಗಂಟೆಯಿದೆ.

**ಸೂರ್ಯಾಸ್ತಮ ಸ್ಥಳ**

ನಕ್ಕಿ ಲೇಕ್‌ನಿಂದ ನಾಲ್ಕೈದು ಕಿ.ಮೀ. ದೂರದ ಎತ್ತರದಲ್ಲಿ ದಟ್ಟವಾದ ಕಾನನದ ನಡುವಿನ ಬೆಟ್ಟದ ಅಂಚಿನಲ್ಲಿರುವ ಈ ಸ್ಥಳಕ್ಕೆ ಸಂಜೆಯಾಗುತ್ತಿದ್ದಂತೆ ಸೂರ್ಯಾಸ್ತಮವನ್ನು ವೀಕ್ಷಿಸಲು ಪ್ರವಾಸಿಗರ ಪ್ರವಾಹವೇ ಹರಿದು ಬರುತ್ತದೆ. ಎಲ್ಲೆಡೆಯಲ್ಲೂ ಅಸ್ತಮಿಸುವ ಸೂರ್ಯನಂತೆ ಅಂತಹ ವಿಶೇಷತೆಯೇನೂ ಇಲ್ಲದ ಇಲ್ಲಿನ ಸೂರ್ಯಾಸ್ತಮ ನೋಡಲು ಜನ ಮುಗಿಬೀಳುವುದನ್ನು ನೋಡಿದರೆ ಜನ ಮರುಳೋ ಜಾತ್ರೆ ಮರುಳೋ ಎಂಬ ಗಾದೆ ನೆನಪಿಗೆ ಬಾರದಿರದು. ಇದನ್ನು ನೋಡಲು ಸುಮಾರು ೧ ಕಿ.ಮೀ. ದೂರವನ್ನು ಕಾಲ್ನಡಿಗೆಯಲ್ಲಿ ನಡೆಯಲೇಬೇಕು. ನಡೆಯಲಾಗದವರು, ನಮ್ಮಲ್ಲಿ ಕಸವನ್ನು ಸಾಗಿಸುವಂತಹ ಏಕವ್ಯಕ್ತಿಯ ನಾಲ್ಕು ಚಕ್ರದ ತಳ್ಳು ಗಾಡಿಯಲ್ಲಿ ಕುಳಿತು ಬರಬಹುದು. ರಾಜಾಸ್ತಾನಿಯರಿಗೆ ಇದರಲ್ಲಿ ಕುಳಿತುಕೊಳ್ಳುವುದೂ ಒಂದು ಮೋಜಿನ ಸಂಗತಿ !

**ದಿಲ್ವಾರ ದೇವಾಲಯಗಳು**

ಅಬುವಿನಲ್ಲಿ ಪ್ರತಿಯೊಬ್ಬ ಪ್ರವಾಸಿಯೂ ನೋಡಲೇಬೇಕಾದಂತಹ ಸ್ಥಳವೆಂದರೆ ವಿಶ್ವಖ್ಯಾತಿಯ ಪುರಾತನವಾದ ದಿಲ್ವಾರ ಜೈನ ಮಂದಿರಗಳು. ಐದು ವಿವಿಧ ದೇವಾಲಯಗಳಿರುವ ಈ ಸಮುಚ್ಚಯದಲ್ಲಿರುವುವು ಕೇವಲ ದೇವಾಲಯಗಳಷ್ಟೇ ಅಲ್ಲ, ಬೇಲೂರಿನಂತಹ ಶಿಲ್ಪಕಲೆಯ ಬಲೆ. ಆದರೆ ಇಲ್ಲಿನ ಶಿಲ್ಪಕಲೆಗಳನ್ನೆಲ್ಲಾ ಅಮೃತಶಿಲೆಯಲ್ಲಿ ಅತ್ಯದ್ಭುತವಾಗಿ ಕಂಡರಿಸಲಾಗಿದೆ.

ಆಗ್ರಾದ ತಾಜ್‌ಮಹಲನ್ನು ಹೊರತುಪಡಿಸಿದರೆ ವಿಶ್ವದ ಬೇರೆಲ್ಲೂ ಇಂತಹ ಅಮೃತಶಿಲ್ಪದ ಕಲೆ ಕಂಡು



*ಪಾರ್ಶ್ವ ನೋಟ ಮತ್ತು ಮಹಾವೀರ ಗುಡಿ*

ಬರುವುದಿಲ್ಲವೆಂದು ಶಿಲ್ಪಕಲಾ ತಜ್ಞರು ಭಾವಿಸುತ್ತಾರೆ. ಆದ್ದರಿಂದಲೇ ಇದನ್ನು 'ಎ ಡ್ರೀಂ ಇನ್ ಮಾರ್ಬಲ್' ಎಂದು ಕರೆಯಲಾಗಿದೆ. ನಗರದಿಂದ ಉತ್ತರಕ್ಕೆ ೩ ಕಿ.ಮೀ. ದೂರದ ದಿಲ್ವಾರ ಎಂಬ ಹಳ್ಳಿಯಲ್ಲಿರುವ ಈ ದೇವಾಲಯ ಹೊರನೋಟಕ್ಕೆ ಸಾಮಾನ್ಯ ಕಟ್ಟಡದಂತಿದೆ. ಆದರೆ, ಒಳಗೆ ಪ್ರವೇಶಿಸುತ್ತಿದ್ದಂತೆ ಒಂದು ಅದ್ಭುತ ಲೋಕವೇ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಈ ಸಮುಚ್ಚಯದಲ್ಲಿ ವಿಮಲ್ ವಸಶಿ, ಲೂನ್ ವಸಶಿ, ಋಷಭದೇವ್‌ಜಿ, ಪಾರ್ಶ್ವನಾಥಜಿ ಮತ್ತು ಮಹಾವೀರ್ ಸ್ವಾಮೀಜಿ ಎಂಬ ಐದು ಪ್ರತ್ಯೇಕ ದೇವಾಲಯಗಳಿವೆ. ಇವುಗಳಲ್ಲಿ ಮೊದಲೆರಡು ಮಾತ್ರ ವಿಶೇಷ ಖ್ಯಾತಿಯನ್ನು ಪಡೆದಿವೆ.

೧೩೦೧ರ ವಿಮಲ್ ವಸಶಿ ಮಂದಿರವನ್ನು ಗುಜರಾತಿನ ಸೋಲಂಕಿ ರಾಜ್ಯದ ಭೀಮ್ ದೇವನ ಮಂತ್ರಿ ವಿಮಲ್ ಷಾ ಎಂಬುವನು ಕಟ್ಟಿಸಿದನಂತೆ. ಈ ದೇವಾಲಯದ ಮೂರ್ತಿ ದೇವತೆ ಜೈನ ತೀರ್ಥಂಕರ ಭಗವಾನ್ ಆದಿನಾಥರದು. ೧೫೦೦ ಜನ ಶಿಲ್ಪಿಗಳು ಮತ್ತು ೧೨೦೦ ಜನ ಕೆಲಸಗಾರರು ಇದಕ್ಕೆ ಜೀವ ತುಂಬಲು ೧೪ ವರ್ಷಗಳ ಕಾಲ ಶ್ರಮಿಸಿದರಂತೆ. ಈ ದೇವಾಲಯದ ಮುಂದೆ ೪೮ ಅಮೃತ ಶಿಲಾ ಕಂಬಗಳನ್ನಾಧರಿಸಿದ ಸಭಾಂಗಣವಿದೆ. ಪ್ರತಿಯೊಂದು ಕಂಬದಲ್ಲೂ ತೋರಣಗಳ ಅತ್ಯಂತ ಸೂಕ್ಷ್ಮ ಹಾಗೂ ಸುಂದರ ಕೆತ್ತನೆಗಳಿವೆ. ಅಂತೆಯೇ ಮೇಲ್ಛಾವಣಿಯಲ್ಲಿ ಸಹ ಈ ಎಲ್ಲಾ ಶಿಲ್ಪಕಲೆಗಳ ಕೌಶಲ್ಯಕ್ಕೆ ಹಾಗೂ ಪರಿಶ್ರಮ, ತಾಳ್ಮೆ, ಏಕಾಗ್ರತೆಗಳಿಗೆ ದ್ಯೋತಕವಾಗಿವೆ. ಗರ್ಭಗುಡಿಯಲ್ಲಿರುವ ಕಂಚಿನ ಬೃಹತ್ ಆದಿನಾಥ ಮೂರ್ತಿಯು ಭವ್ಯವಾಗಿದೆ. ಈ ಮೂರ್ತಿಯ ಕೊರಳು ಮತ್ತು ಕಣ್ಣನ್ನು ಅತ್ಯಂತ ಅಮೂಲ್ಯವಾದ ಮುತ್ತುರತ್ನಗಳಿಂದ ಅಲಂಕರಿಸಲಾಗಿದೆ.

ಲೂನ್ ವಸಶಿ ದೇವಾಲಯವನ್ನು ಜೈನರ ೨೨ನೇ ತೀರ್ಥಂಕರ ನೇಮಿನಾಥನಿಗೆ ಸಮರ್ಪಿಸಲಾಗಿದೆ. ಇದನ್ನು ೧೨೩೧ರಲ್ಲಿ ಗುಜರಾತಿನ ರಾಜ ವೀರ್ ಧವನನ ಆಸ್ಥಾನದ ಮಂತ್ರಿ ಸಹೋದರರಾದ ವಸ್ತು ಪಾಲ್ ಮತ್ತು ತೇಜ್‌ಪಾಲ್ ತಮ್ಮ ಮೃತ ಸಹೋದರ ಲೂನ್‌ವಸೀ ಸ್ಮರಣಾರ್ಥವಾಗಿ ಕಟ್ಟಿಸಿದರಂತೆ. ಈ ದೇವಾಲಯವನ್ನು ಸೋಲಂಕಿ ಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯದಲ್ಲೂ ಅಮೃತ ಶಿಲೆಗಳಲ್ಲಿ ಬಿಡಿಸಲಾಗಿರುವ ಅದ್ಭುತವಾದ ಕಲಾಕೃತಿಗಳು ನೋಡುಗರನ್ನು ಆಕರ್ಷಿಸುತ್ತವೆ.

೧೪ನೇ ಶತಮಾನದಲ್ಲಿ ನಿರ್ಮಿಸಲಾದ ವೃಷಭದೇವ್ ದೇವಾಲಯದಲ್ಲಿ ೪.೨ ಕ್ವಿಂಟಾಲ್ ತೂಗುವ ವೃಷಭಜಿಯ ಬೃಹತ್ ಕಂಚಿನ ಪ್ರತಿಮೆಯಿದೆ. ಚತುರ್ಮುಖದ ಪಾರ್ಶ್ವನಾಥಜಿ ಮೂರ್ತಿಯು ಪಾರ್ಶ್ವನಾಥಜಿ ದೇಗುಲದ ವಿಶೇಷ. ಇದರ ಸಮೀಪದಲ್ಲಿ ಈ ಎಲ್ಲಾ ದೇಗುಲಗಳಲ್ಲೇ ಚಿಕ್ಕದಾದ ಜೈನರ ಕೊನೆ ತೀರ್ಥಂಕರನಾದ ಮಹಾವೀರ ಸ್ವಾಮೀಜಿಯ ದೇವಾಲಯವಿದೆ.

ಈ ಎಲ್ಲಾ ದೇವಾಲಯಗಳು ಅಬು ಪ್ರವಾಸವನ್ನು ಸಾರ್ಥಕಗೊಳಿಸುವುದರಲ್ಲಿ ಸಂಶಯವಿಲ್ಲ. ಇವುಗಳನ್ನು ನೋಡಲಾದರೂ ಒಮ್ಮೆ ಅಬುವಿಗೆ ಪ್ರವಾಸ ಕೈಗೊಳ್ಳಬೇಕು.

ಸ್ವಾಮಿ ರಾಮಕೃಷ್ಣಾರ್ಪಣಾನಂದ
೩೬೭೧, ಶ್ರೀ ಕಂಠ ಮಂಟಪ ಬ್ಲಾಕ್
ನಂಜನಗೂಡು - ೫೭೧ ೩೦೧

## ಸೇಡಿನ ಫಲ

ನನ್ನ ಗೆಳೆಯನ ಮೇಲೆ ಬಂದ ಮುನಿಸನು ಕಂಡು
ಚೆಂದದಿಂದಲೆ ಅಂದೆ ''ಸುಮ್ಮನಿರು'' ಎಂದು
ಮಾಯವಾಗಿಯೆ ಹೋಯ್ತು ಕೋಪವಂದು
ನನ್ನ ವೈರಿಯ ಮೇಲೆ ಬಂದ ಮುನಿಸಿಗೆ ನಾನು
ಕೋಪದಿಂದಲೆ ನುಡಿದೆ ''ಚೆಂಡಾಡು'' ಎಂದು
ಮನದೊಳಗೆ ಬೆಳೆಯಿತು ಅರಿವಿಲ್ಲದಂತೆ

ಹಗೆತನದ ಬೀಜ ಸಸಿಯಾಗಿ ಒಡೆಯಿತು
ಮರವಾಗಿ ಬೆಳೆಯಿತು ಒಳೊಗೊಳಗೆ ಅಂದು
ಭಯವೆಂಬ ಕಣ್ಣೀರ, ನಗುವೆಂಬ ಎಳೆಬಿಸಿಲ
ನೀಡುತ್ತ ಬೆಳೆಸಿದೆನು ರಾತ್ರಿ ಹಗಲೆನ್ನದಲೆ
ವಂಚನೆಯ ತಂತ್ರಗಳ ನಡುನಡುವೆ ತುರುಕುತ್ತ
ಮರವಾಗಿ ಬೆಳೆಸಿದೆನು ಕೋಪದಾ ಗಿಡವನ್ನು

ಮರ ಬೆಳೆದು ಹೂವಾಯ್ತು ಹೂವರಳಿ ಹಣ್ಣಾಯ್ತು
ನನ್ನ ಅರಿ ನೋಡಿದನು ತಳತಳಿಪ ಹಣ್ಣನ್ನು
ಹಿಂದೆ ಮುಂದೆನ್ನದಲೆ ನನ್ನ ಹಣ್ಣೆಂದರಿಯುತ್ತ
ಕಳಿತ ಹಣ್ಣನು, ಕದ್ದು ತಿಂದು ಮುಗಿಸಿದನವನು
ಕತ್ತಲಾವರಣವಂದು ಅವನ ಕಣ್ಣನು ಮುಚ್ಚಿ
ನನ್ನ ಆವರಣದಲ್ಲಿ ಅವನ ಸೆಳೆದಿತ್ತು

ಬೆಳಗಿನಾ ಬೆಳಕಲ್ಲಿ ಸಂತಸದಿ ನೋಡಿದೆನು
ಸೆಟೆದು ಬಿದ್ದ ವೈರಿಯನು ಮರದಡಿಯ ಬುಡದಲ್ಲಿ

ಮೂಲ : ವಿಲಿಯಂ ಬ್ಲೇಕ್
ಕನ್ನಡಕ್ಕೆ: ವಿ. ಗಣೇಶ
ಇಂಗ್ಲಿಷ್ ಉಪನ್ಯಾಸಕರು, ಸರ್ಕಾರಿ ಕಿರಿಯ ಕಾಲೇಜ್
ಸಾಗರ, ಜಿ. ಶಿವಮೊಗ್ಗ

## ಸಾದರ ಸ್ವೀಕಾರ

**ಶೋಧ** (ಕಿರು ಕಾದಂಬರಿ)
*ಜೋಗಹಳ್ಳಿ ಗುರುಮೂರ್ತಿ*
**ಪುಟ :** ೮೨ **ಬೆಲೆ : ರೂ.** ೨೫
**ಜೋಗನಹಳ್ಳಿ ಗುರುಮೂರ್ತಿ**, ಬೆಟ್ಟದಪುರ ಹೋಬಳಿ
ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ.

**ಕನ್ನಡ ಚಳವಳಿಗಾರ ಬಿ. ರಾಮಮೂರ್ತಿ**
*ಡಾ|| ಸಿ. ಆರ್. ಗೋವಿಂದರಾಜ್*
**ಪುಟ :** ೩೨ **ಬೆಲೆ : ರೂ.** ೧೦
ಪ್ರಸಾರಾಂಗ, **ಕನ್ನಡ ವಿಶ್ವವಿದ್ಯಾನಿಲಯ**
ಹಂಪಿ, ವಿದ್ಯಾರಣ್ಯ.

**ನೋವು ನಲಿವು** (ತುಕ್ಯಾನ ಅನುಭವಗಳು)
*ಪಿ. ವಿಜಯಕುಮಾರ*
**ಪುಟ :** ೧೬೦ **ಬೆಲೆ : ರೂ.** ೪೦
**ಕನ್ನಡ ಸಾಹಿತ್ಯ ಮಂಟಪ**, ಬೆಳಗಾವಿ.

**ಬಣ್ಣದ ಹಬ್ಬ** (ಮಕ್ಕಳ ನಾಟಕ)
*ಬಂದಗದ್ದೆ ರಾಧಾಕೃಷ್ಣ*
**ಪುಟ :** ೨೦ **ಬೆಲೆ : ರೂ.** ೧೫
**ಪುಸ್ತಕ ಹೊಂಬಾಳೆ**, ಕೆಳದಿ - ೫೭೭ ೪೦೧ ಶಿವಮೊಗ್ಗ.

**ಗೃಹವಿಜ್ಞಾನ** (ಕೈಪಿಡಿ)
*ಬಿ. ಎಂ. ಕೋಮಲ*
**ಪುಟ :** ೪೦ **ಬೆಲೆ : ರೂ.** ೧೦
**ದಿವ್ಯಚಂದ್ರ ಪ್ರಕಾಶನ**, ಕೆ. ಎಚ್. ಬಿ. ಕಾಲೋನಿ,
೬ನೇ ಮುಖ್ಯರಸ್ತೆ, ೮ನೇ ಅಡ್ಡರಸ್ತೆ, ೨ನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಏಕಾಂತದ ಮಳೆ** (ಕವನ ಸಂಕಲನ)
*ಎಂ. ಆರ್. ಭಗವತಿ*
**ಪುಟ :** ೬೮ **ಬೆಲೆ : ರೂ.** ೩೫
**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜು
ಕುವೆಂಪು ನಗರ, ಬೆಂಗಳೂರು - ೫೬೦ ೦೨೯

**ಮಾಯಿ ಮತ್ತು ಮಹಾಂತ** (ಕಥಾ ಸಂಕಲನ)
*ಶಿವಾನಂದ ಹೊಳೆಪ್ಪನವರ*
**ಪುಟ :** ೯೮ **ಬೆಲೆ : ರೂ.** ೨೦
**ಸಮತಾ ಪ್ರಕಾಶನ**, ಮುಧೋಳ,
ಬಾಗಲಕೋಟ (ಜಿಲ್ಲಾ).

**ಪಶ್ಚಿಮದ ಪತ್ರಗಳು**
*ವಿ. ಸಿ. ಮಾಲಗತ್ತಿ*
**ಪುಟ :** ೮೦ **ಬೆಲೆ : ರೂ.** ೩೦
ವಿ. ಸಿ. ಮಾಲಗತ್ತಿ, ಮಾಲಗತ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ೧ನೇ ಮೈನ್, ೨ನೇ ಕ್ರಾಸ್, ಸದಾಶಿವನಗರ
ಬೆಳಗಾವಿ - ೫೯೦ ೦೦೧

**ಅಗುಳಿಗೆದ್ದ ಅಲೆ**
*ಜವಳಗಿ ಸೈ ಗುಲಬರ್ಗಾ*
**ಪುಟ :** ೬೪ **ಬೆಲೆ : ರೂ.** ೨೫
**ಕವಿಕುಲ ಪ್ರಕಾಶನ**, ೬೨, ಲಾವಣಿ ನಾಗರಾಜ್ ರಸ್ತೆ
ಮಸೀದಿ ಹಿಂಭಾಗ, ವಿಜಯಾನಂದ ನಗರ, ನಂದಿನಿ
ಲೇ ಔಟ್, ಬೆಂಗಳೂರು - ೫೬೦ ೦೯೬

# ಯೋಗ ಪ್ರವೇಶ - ೧೫

ಜಿ. ರಾಮಕೃಷ್ಣ

ಆರು ನಿಮಿಷಗಳನ್ನು ಮೀರದಂತೆ ಸರ್ವಾಂಗಾಸನವನ್ನು ಯಥಾಶಕ್ತಿ ಹೇಗೆ ಮಾಡುವುದೆಂಬುದನ್ನು ಈಗಾಗಲೇ ತಿಳಿದಿದ್ದೇವೆ. ಅದು ಥೈರಾಯಿಡ್ ಗ್ರಂಥಿಗಳಿಗೆ ಉಪಯುಕ್ತವಾದ ವ್ಯಾಯಾಮವೆಂಬುದನ್ನೂ ಸೂಚಿಸಲಾಯಿತು. ಅದೇ ಗ್ರಂಥಿಗಳಿಗೆ ಇನ್ನೊಂದು ರೀತಿಯಲ್ಲಿ ವ್ಯಾಯಮವನ್ನೊದಗಿಸುವುದು ಮತ್ಸ್ಯಾಸನ. ಆದ್ದರಿಂದ ಸರ್ವಾಂಗಾಸನದ ನಂತರವೇ ಇದನ್ನು ಮಾಡುವುದು ಉಚಿತ ಮತ್ತು ಅದೇ ಹೆಚ್ಚು ರೂಢಿಯಲ್ಲಿದೆ. ಈ ಆಸನದಲ್ಲಿದ್ದರೆ ನೀರಿನಲ್ಲಿ ಮುಳುಗದೆ ತೇಲುತ್ತಿರಬಹುದೆಂದು ಹೇಳಲಾಗಿದೆ. ಸ್ವಾನುಭವದಿಂದ ಹೇಳುವುದಾದರೆ ಇದು ಪ್ರಸ್ತುತ ಲೇಖಕನಿಗೆ ಸಾಧ್ಯವಾಗಿಲ್ಲ. ಆಸನವನ್ನು ಯಥಾವತ್ತಾಗಿ ಮಾಡಿಲ್ಲವೆಂದು ಇದರ ಸೂಚನೆಯಲ್ಲ. ಸರ್ವಾಂಗಾಸನದಲ್ಲಿ ಬೆನ್ನುಹುರಿಯು ನೇರವಾಗಿದ್ದರೆ, ಮತ್ಸ್ಯಾಸನದಲ್ಲಿ ಬಿಲ್ಲಿನಂತೆ ಬಗ್ಗಿರುತ್ತದೆ. ಥೈರಾಯಿಡ್ ಗ್ರಂಥಿಗಳ ಮೇಲಿನ ಒತ್ತಡದ ವಿಧಾನದಲ್ಲಿಯೂ ವ್ಯತ್ಯಾಸವಿರುತ್ತದೆ.

ಘೇರಂಡ ಸಂಹಿತೆಯಲ್ಲಿ ಈ ಆಸನವನ್ನು ವಿವರಿಸಿರುವ ಬಗೆ ಹೀಗಿದೆ :

*ಮುಕ್ತಪದ್ಮಾಸನಂ ಕೃತ್ವಾ ಉತ್ತಾನಶಯನಂ ಚರೇತ್ ।*
*ಕೂರ್ಪರಾಭ್ಯಾಂ ಶಿರೋವೇಷ್ಟ್ಯ ರೋಗಘ್ನಂ ಮಾತ್ಸ್ಯಮಾಸನಮ್ ॥ (೨.೨೧)*

ಮೊದಲು ಪದ್ಮಾಸನದಲ್ಲಿ ಕೂಡುವುದು. ಅದರ ಕ್ರಮ ತಿಳಿದಿದೆಯಲ್ಲವೆ ? ಎರಡೂ ಕಾಲುಗಳನ್ನು ಚಾಚಿ ಕೂಡುವುದು. ಬಲಗಾಲನ್ನು ಮಡಿಚಿ ಎಡತೊಡೆಯ ಮೇಲಿರಿಸುವುದು. ಹಿಮ್ಮಡಿಯು ಕಿಬ್ಬೊಟ್ಟೆಯನ್ನು ಒತ್ತುವಂತೆ ಹಾಗೂ ಮೇಲಕ್ಕೆ ತಿರುಗುವಂತೆ ಇರುತ್ತದೆ. ಇನ್ನೊಂದು ಕಾಲನ್ನು ಅದೇ ರೀತಿ ಮಡಿಚಿ ಇರಿಸುವುದು (ಚಿತ್ರ ನೋಡಿ). ಮೊಣಕೈಗಳ ಸಹಾಯದಿಂದ ನಿಧಾನವಾಗಿ ಮಲಗಿ, ಕ್ರಮೇಣ ತಲೆಯ ಮಧ್ಯಭಾಗವು ನೆಲದ ಮೇಲಿರುವಂತೆ ಕತ್ತನ್ನು ಹಿಂದಕ್ಕೆ ಬಗ್ಗಿಸುವುದು. ಬೇಕಾದರೆ ಮೊಣಕೈ ಮತ್ತು ಅಂಗೈಗಳ ನೆರವು ಪಡೆದುಕೊಳ್ಳಬಹುದು. ತಲೆಯನ್ನು ಹಿಂದಕ್ಕೆ ಬಗ್ಗಿಸುತ್ತಿದ್ದಂತೆ ಎದೆಯ ಭಾಗವೂ ಬಗ್ಗುತ್ತದೆ. ಪೃಷ್ಠ, ಮೊಣಕೈಗಳು ಹಾಗೂ ಬಗ್ಗಿದ ತಲೆ - ಇವೇ ಶರೀರಕ್ಕೆ ಆಧಾರ. ಆಮೇಲೆ ಆಯಾಭಾಗದ ಕೈಗಳಿಂದ ಕಾಲಿನ ಹೆಬ್ಬೆರಳುಗಳನ್ನು ಹಿಡಿಯಿರಿ. ಇಲ್ಲವೆ, ಕೈಗಳನ್ನು ತಲೆಯ ಸುತ್ತ ಕಟ್ಟಿ ಹಿಡಿಯಬಹುದು. ಯಥಾಪ್ರಕಾರ, ಎಲ್ಲ ಚಲನೆಗಳಲ್ಲೂ ನಿಧಾನ ಅಗತ್ಯ ಮತ್ತು ಉಸಿರುಕಟ್ಟಿ ಮಾಂಸಖಂಡಗಳನ್ನು ಬಿಗಿಗೊಳಿಸುವಂತಿರಬಾರದು. ಸರ್ವಾಂಗಾಸನವನ್ನು ಎಷ್ಟು ಕಾಲ ಮಾಡುತ್ತೇವೋ ಅದರ ಮೂರನೆ ಒಂದು ಭಾಗದಷ್ಟು ಸಮಯ ಮಾತ್ರ ಮತ್ಸ್ಯಾಸನಕ್ಕೆ ಮೀಸಲು (ಚಿತ್ರ ನೋಡಿ). ಸರ್ವಾಂಗಾಸನಕ್ಕೆ ಪೂರಕವಾದ ಆಸನ ಇದೆಂಬುದನ್ನು ಮರೆಯದಿರೋಣ. ಯಥಾಸ್ಥಿತಿಗೆ ಹಿಂದಿರುಗಲು ಹೆಬ್ಬೆರಳುಗಳನ್ನು ಬಿಟ್ಟು ಕೈ ಸಹಾಯದಿಂದ ತಲೆಯನ್ನು ನೆಟ್ಟಗೆ ಮಾಡುವುದು, ಮೊಣಕೈಗಳ ಆಸರೆ ಪಡೆದು ಕುಳಿತುಕೊಳ್ಳುವುದು, ಆಮೇಲೆ ಕಾಲುಗಳನ್ನು ನೀಡಿಕೊಳ್ಳುವುದು ಸುಲಭವಾದ ವಿಧಾನ. ಈಜು ಬರುವವರಾದರೆ ನೀರಿನಲ್ಲಿ ಈ ಆಸನವನ್ನು ಮಾಡಿ ಸ್ಥಿರವಾಗಿರಲು ಯತ್ನಿಸಿ. ಮೀನಿನಂತೆ ತೇಲಿದರೂ ತೇಲಬಹುದು ! ಮುಳುಗುವಂತಾದರೆ ಕೈಗಳನ್ನು ಸ್ವತಂತ್ರಗೊಳಿಸಿಕೊಂಡು ಪ್ರಾಣ ಉಳಿಸಿಕೊಳ್ಳುವುದು ಕಷ್ಟವೇನಲ್ಲ. ಗಾಬರಿಗೇನೂ ಕಾರಣವಿಲ್ಲ.



*ಪದ್ಮಾಸನದ ವಿಧಾನ*



*ಹಲಾಸನದ ಒಂದು ಹಂತ*

ಪಾರಂಪರಿಕವಾಗಿ ಅಭ್ಯಾಸದಲ್ಲಿರುವ ಇನ್ನೊಂದು ಉತ್ಕೃಷ್ಟ ಆಸನವೆಂದರೆ ಹಲಾಸನ (ಹಲ=ನೇಗಿಲು). ಪ್ರಾಚೀನ ಗ್ರಂಥಗಳಲ್ಲಿ ಇದರ ಉಲ್ಲೇಖವಿಲ್ಲವಾದರೂ ಯೋಗಾಭ್ಯಾಸದಲ್ಲಿ ಇದಕ್ಕೆ ಬಹಳ ಪ್ರಾಶಸ್ತ್ಯವಿದೆ. ಇಲ್ಲಿ ಕೊಟ್ಟಿರುವ ಎರಡು ಚಿತ್ರಗಳನ್ನು ಗಮನಿಸಿದರೆ ಶರೀರದ ಯಾವ ಯಾವ ಭಾಗಗಳ ಮೇಲೆ ನವಿರಾದ ಒತ್ತಡ ಉಂಟಾಗುತ್ತದೆಂಬುದನ್ನು ಸುಲಭವಾಗಿ ತಿಳಿಯಬಹುದು. ಪ್ರಯೋಗಾಲಯಗಳಲ್ಲಿ ಪರಿಣತರು ನಡೆಸಿರುವ ಅನೇಕ ಪ್ರಯೋಗಗಳಿಂದ ಈ ಆಸನವು ಶರೀರಸ್ವಾಸ್ಥ್ಯಕ್ಕೆ ಗಣನೀಯ ಕಾಣಿಕೆ ನೀಡುತ್ತದೆಂದು ಸ್ಥಿರಪಟ್ಟಿದೆ. ಬೆನ್ನುಹುರಿಯನ್ನು ಬಗ್ಗಿಸುವುದರ ಜೊತೆಗೆ ಜಠರದ ಸನಿಹದಲ್ಲಿರುವ ಮೇದೋಜೀರಕ ಗ್ರಂಥಿಯನ್ನು ಈ ಆಸನವು ಕ್ರಿಯಾಶೀಲವಾಗಿಸುತ್ತಿದೆ. ಜಠರದ ಮಾಂಸ ಖಂಡಗಳಿಗೆ ಸಹ ಇದು ಉತ್ತಮವಾದ ವ್ಯಾಯಾಮವನ್ನು ನೀಡುತ್ತದೆ. ಆದ್ದರಿಂದಲೇ ಮಲಬದ್ಧತೆ ಇರುವವರಿಗೆ ಇದು ಅನುಕೂಲಕರವಾದ ಆಸನ. (ಬೌದ್ಧಿಕ ಮಲಬದ್ಧತೆ ಇರುವವರಿಗೆ ಇದು ಪೂರ್ಣ ಪ್ರಮಾಣದಲ್ಲಿ ಮದ್ದಾಗದಿರಬಹುದು ! ಅಂಥವರಿಗೆ ಆರೋಗ್ಯಪೂರ್ಣ ವೈಚಾರಿಕತೆಯೊಂದೇ ಮದ್ದು). - ಮಲಬದ್ಧತೆಯು ಜಠರದ ಮಾಂಸಖಂಡಗಳ ನಿಷ್ಕ್ರಿಯತೆ ಅಥವಾ ವಿಚಲನೆಯಿಂದ ಉಂಟಾಗಿದ್ದಾಗ ಮಾತ್ರ ಇದು ಸ್ವಲ್ಪ ಮಟ್ಟಿನ ಮದ್ದು; ಕರುಳಿನ ಸಮಸ್ಯೆಯಿಂದ ಅದು ಕಂಡುಬಂದಿದ್ದರೆ ಇದರಿಂದ ಅಷ್ಟೇನೂ ಪ್ರಯೋಜನವಾಗದು. ಸಕ್ಕರೆ ಕಾಯಿಲೆಯ (ಮಧುಮೇಹ=ಸಿಹಿಮೂತ್ರ) ಕೆಲವು ಪ್ರಕಾರಗಳಲ್ಲಿ ಹಲಾಸನದಿಂದ ಸ್ವಾಗತಾರ್ಹ ಪರಿಣಾಮಗಳು ಸಿದ್ಧಿಸುವುದೆಂದು ಸಹ ಪ್ರಯೋಗಾತ್ಮಕವಾಗಿ ತಿಳಿದುಬಂದಿದೆ. ಪಿತ್ತಜನಕಾಂಗ ಮತ್ತು ಗುಲ್ಮಗಳೇನಾದರೂ ದೊಡ್ಡದಾಗಿದ್ದರೆ ಪ್ರಾರಂಭಿಕ ಹಂತದಲ್ಲಿ ಅದನ್ನು ಚಿಕ್ಕದಾಗಿಸಿ ಮೊದಲ ಸ್ವರೂಪದಲ್ಲಿರುವಂತೆ ಮಾಡಲು ಈ ಆಸನವು ಸಹಕಾರಿಯೆಂದು ಸ್ವಾಮಿ ಕುವಲಯಾನಂದರು ದಾಖಲಿಸಿದ್ದಾರೆ. ಬೆನ್ನುಹುರಿಯು ಗಡುಸಾಗಿದ್ದರೆ ಅಥವಾ ಬೆನ್ನೆಲುಬಿನ ಒಂದು ಖಂಡ (ಇದನ್ನು ಕಶೇರುಕಾಸ್ಥಿ ಎನ್ನುತ್ತಾರೆ)ದಲ್ಲಿ ಪೆಡಸು ಉಂಟಾಗಿದ್ದರೆ ಈ ಆಸನವನ್ನು ಸರ್ವಥಾ ಮಾಡಹೋಗಬಾರದು. ಆಸನದ ಅನುಭವ ಉಂಟಾದಾಗ



*ಮತ್ಸ್ಯಾಸನ*



*ಹಲಾಸನದ - ಪೂರ್ಣಾವಸ್ಥೆಯಲ್ಲಿ (ಕೈಗಳನ್ನು ತಲೆಯ ಹಿಂದೆ ಕಟ್ಟಿಕೊಳ್ಳುವುದರಿಂದ ಹೆಚ್ಚು ಸುಲಭವಾಗುತ್ತದೆಂಬುದನ್ನು ಗಮನಿಸಿ)*

*(೬೬ನೇ ಪುಟದಲ್ಲಿ ಮುಂದುವರೆದಿದೆ)*

# ಅಸ್ಪೃಶ್ಯತೆ

ನಾನು ಒಂದು ಸಲ ಬೆಳಗಾವಿಯಲ್ಲಿಯ ಶಿಕ್ಷಣ ಇಲಾಖೆಯಲ್ಲಿ ಗ್ಯಾಜಿಟೆಡ್ ಅಸಿಸ್ಟೆಂಟ್ ಅವರ ಕೋಣೆಗೆ ಹೋಗಿದ್ದೆ. ಸುತ್ತಲೂ ಕಣ್ಣು ಹಾಯಿಸಿದಾಗ ಮೊದಲಿದ್ದ ಗಾಂಧಿ, ನೆಹರುರವರ ಭಾವಚಿತ್ರಗಳು ಮಾಯವಾಗಿ ಕೇವಲ ಡಾ॥ ಅಂಬೇಡಕರರ ಭಾವಚಿತ್ರ ನೋಡಿ ಆಶ್ಚರ್ಯಚಕಿತನಾದೆ. ಹೀಗೇಕೆ ಎಂದು ವಿಚಾರಿಸಿದಾಗ ಗ್ಯಾಜಿಟೆಡ್ ಅಸಿಸ್ಟೆಂಟ್ ಅಧಿಕಾರಿಗಳು ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದರು. ಕೇವಲ ಸವರ್ಣೀಯರಲ್ಲಿ ಅಷ್ಟೇ ಅಲ್ಲ, ಅವರ್ಣೀಯರಲ್ಲೂ ವಿಶಾಲ ದೃಷ್ಟಿ ಬೆಳೆದುಬರಬೇಕು. ಹಿಂದುಳಿದವರಲ್ಲಿ ಕಾಯ್ದಿಟ್ಟ ಸ್ಥಳಗಳ ದುರುಪಯೋಗವಾಗಕೂಡದು. ಹಿಂದುಳಿದವರಲ್ಲಿ ಯೋಗ್ಯತೆ ತಾಳ್ಮೆಯಿಂದ ತಾಳಿಬರಬೇಕು. ಅವರು ಅವಸರ ಮಾಡಿದರೆ ಆಡಳಿತ ಶಿಥಿಲವಾಗುವ, ಕೆಡುವ ಸಂಭವ ಜಾಸ್ತಿ. ಅವಕಾಶ ನೀಡಿದರೆ ಅವರಲ್ಲಿಯೂ ಸಮರ್ಥರು ಮೇಲೆ ಬರುವುದರಲ್ಲಿ ಸಂಶಯವಿಲ್ಲ.

ಗಾಂಧಿಯವರೂ ಅಸ್ಪೃಶ್ಯತೆ ನಿವಾರಿಸಲು ಸುಧಾರಣೆಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡದ್ದುಂಟು. ಅದು ಭಾರತೀಯ ಸಂಸ್ಕೃತಿಗೆ ಅಂಟಿಕೊಂಡಿರುವ ಒಂದು ಕಲಂಕವೆಂದು ಅವರು ಸಾರಿದರು. ನಾನು ಆಗಿನ್ನೂ ಚಿಕ್ಕ ವಿದ್ಯಾರ್ಥಿ. ಗಾಂಧೀಜಿ ಹುಕ್ಕೇರಿಗೆ ಬರುವವರಿದ್ದರು. ಅವರನ್ನು ನೋಡಲು ನಮ್ಮ ತಂದೆಯವರ ಕೂಡ ಹುಕ್ಕೇರಿಗೆ ಹೋಗಿದ್ದೆ. ಆಗ ಗಾಂಧೀಜಿಯವರ ಪಾದಗಳ ಮೇಲೆ ನಮ್ಮೂರಾದ ಬೆಲ್ಲದ ಬಾಗೇವಾಡಿಯ ಹರಿಜನನೊಬ್ಬ ಕಾರಂಜಿಯ ನೀರು ಹಾಕಿದ. ಹೀಗೆ ಗಾಂಧೀಜಿ ಹರಿಜನರ ಕೂಡ ಒಂದಾಗಿ ನಡೆದುಕೊಳ್ಳುತ್ತಿದ್ದರು. ಅವರ ವೇಷ ಭೂಷಣ ತೀರ ಸರಳ. ಅವರ ವಾಸ ಭಂಗೀ ಕಾಲನಿಯಲ್ಲಿ. ಅವರು ಹೋದಲ್ಲೆಲ್ಲ ಅಸ್ಪೃಶ್ಯತೆಯ ನಿವಾರಣೆಗಾಗಿ ಹಣ ಸಂಗ್ರಹಿಸುತ್ತಿದ್ದರು. ಅವರ ವಿಶಾಲ ಮಾನವೀಯ ದೃಷ್ಟಿ ಪ್ರಶಂಸನೀಯ. ಗಾಂಧೀಜಿಯ ನೀತಿ ಹಿಂದುಳಿದವರ ಕೂಡ ಒಂದಾಗಿ ಆಚರಿಸುವುದು, ಅವರ್ಣೀಯರ - ಸವರ್ಣೀಯರ ದೃಷ್ಟಿಯನ್ನು ಬದಲಿಸುವುದು. ಕಾನೂನಿಗಿಂತ ಇದು ಹೆಚ್ಚು ಫಲಕಾರಿ. ಇನ್ನೊಮ್ಮೆ ನಾನು ಹುಟ್ಟಿಬಂದರೆ ಹರಿಜನನಾಗಿ ಹುಟ್ಟಿಬರಬೇಕೆಂದು ಬಯಸಿದರು. ದೃಷ್ಟಿಯಿದ್ದಂತೆ ಸೃಷ್ಟಿ. ಕೇವಲ ಕಾನೂನಿನಿಂದ ಅಸ್ಪೃಶ್ಯತೆ ಹೋಗಲಾರದು. ದೃಷ್ಟಿಯಲ್ಲಿ ಕ್ರಾಂತಿಕಾರಿ ಪರಿವರ್ತನೆಯಾಗಬೇಕು.

ಭಾರತದ ಸಂವಿಧಾನ ಅಸ್ಪೃಶ್ಯತೆಯನ್ನು ಕಾನೂನಿನ ದೃಷ್ಟಿಯಲ್ಲಿ ಅಪರಾಧವೆಂದು ಪರಿಗಣಿಸಿದೆ. ಸ್ವಾತಂತ್ರ್ಯ ದೊರೆತು ೫೦ ವರುಷಗಳಿಗಿಂತ ಹೆಚ್ಚು ಕಾಲ ಗತಿಸಿಹೋಗಿದೆ. ಅಸ್ಪೃಶ್ಯತೆ ಹೋಗಿದೆ ಏನು ? ಗ್ರಾಮಗಳ ಕುಡಿಯುವ ನೀರಿನ ಬಾವಿಯ ಮುಂದೆಕೆರೆಗಳ ಮುಂದೆ ಬೇಕಾದವರು ನೀರು ತೆಗೆದುಕೊಳ್ಳಬಹುದೆಂದು ಹಲಿಗೆ ನಿಲ್ಲಿಸಿದರೂ ಏನೂ ಉಪಯೋಗವಾಗಿಲ್ಲ. ದಲಿತರ ಮೇಲೆ ಸವರ್ಣೀಯರ ಹಲ್ಲೆ ನಿಂತಿಲ್ಲ. ಗ್ರಾಮಗಳಲ್ಲಿ ಹೊರಗೇರಿಗಳು ಹೋಗುವತನಕ ಅಸ್ಪೃಶ್ಯತೆ ಪೂರ್ಣ ಹೋಗಲಾರದು. ಚಾತುರ್ವರ್ಣ್ಯದ ಕಹಿ ಫಲ ಅಸ್ಪೃಶ್ಯತೆ. ಜಾತೀಯತೆ ಹೋಗುವುದಿಲ್ಲ ಎಂಬ ನಂಬಿಕೆಯನ್ನು ಮಾನಸಿಕವಾಗಿ ಅಲ್ಲಗಳೆಯಲೇಬೇಕು. ಒಬ್ಬನು ಯಾವುದೇ ಧರ್ಮಕ್ಕೆ ಸೇರಲು ಅವನಲ್ಲಿ ಶೀಲ, ಬುದ್ಧಿ, ಸಾಮರ್ಥ್ಯವಿದ್ದರೆ ಅವನನ್ನು ಎಲ್ಲರೂ ಮನ್ನಿಸಲೇಬೇಕು. ಈ ದೃಷ್ಟಿಯಿಂದ ಧರ್ಮನಿರಪೇಕ್ಷತೆ ಅವಶ್ಯ. ಪಾಶ್ಚಾತ್ಯ ದೇಶಗಳಲ್ಲಿ ವರ್ಗಗಳಿದ್ದರೆ, ನಮ್ಮ ದೇಶದ ವೈಶಿಷ್ಟ್ಯ ಜಾತೀಯತೆ. ಶಿಕ್ಷಣದ ಮೂಲಕ ಪ್ರಜೆಗಳಲ್ಲಿ ವೈಚಾರಿಕತೆ, ವಿವೇಕ ಬರಿಸಬೇಕು. ಅವರಲ್ಲಿ ಜಾಗೃತಿ ಉಂಟಾಗಬೇಕು. ಈ ದಿಶೆಯಲ್ಲಿ ವೈಜ್ಞಾನಿಕ ಮನೋಭಾವ ನಮಗೆ ನೆರವು ನೀಡುತ್ತದೆ. ಎಲ್ಲರ ಜೀವನಮಟ್ಟ ಉನ್ನತವಾದರೆ ಅಂತರಜಾತೀಯ ವಿವಾಹಗಳು ಹೆಚ್ಚಾಗುತ್ತವೆ. ವೈಜ್ಞಾನಿಕ ಶೋಧ, ತಾಂತ್ರಿಕ ಪ್ರಗತಿ, ಔದ್ಯೋಗಿಕರಣ, ನಿಜವಾದ ಧರ್ಮದ ಅರಿವು, ಸಮಾಜವಾದ, ಸಮತಾವಾದಗಳಿಂದ ಜಾತೀಯತೆಯ ತೀವ್ರತೆ ಕಡಿಮೆಯಾಗಹತ್ತಿದೆ. ಆದರೆ ಕಡಿಮೆಯಾಗುವ ವೇಗ ಹೆಚ್ಚಾದರೆ ಒಳಿತು. ಜಾತಿಯ ಆಧಾರದ ಮೇಲೆ ಕಾಯ್ದಿಡುವ ಪದ್ಧತಿ ಆದಷ್ಟು ಬೇಗ ಹೋದಷ್ಟೂ ಅನುಕೂಲ. ಹಿಂದುಳಿದ ಮುಖಂಡರೇ ಈ ವಿಚಾರಗಳನ್ನು ಹರಡಬೇಕು. ಹಿಂದುಳಿದವರೇ ಈ ಬೇಡಿಕೆಯನ್ನು ಸಮಾಜ - ಸರಕಾರಗಳ ಮುಂದೆ ಇಡುವಂತಾಗಬೇಕು. ಸಮಾನತೆ ಎಂಬುದು ನಮ್ಮ ಸಂಸ್ಕೃತಿಯಲ್ಲಿಯೇ ಇಳಿದುಬರಬೇಕು. ಅದು ರಾಷ್ಟ್ರೀಯ ಜೀವನ ವಿಧಾನವಾಗಬೇಕು. ಮನದಲ್ಲಿದ್ದರೆ ಮಾರ್ಗವುಂಟು. ಮನಸ್ಸು ಮಾಡಿದರೆ ಅಸ್ಪೃಶ್ಯತೆ, ಜಾತೀಯತೆ ಅಳಿದುಹೋಗುವುವು.

**ಎಂ. ಆಯ್. ಕಣಗಲಿ**
ನಿವೃತ್ತ ಪ್ರಾಂಶುಪಾಲರು, ಶ್ರೀ ರೇವಣ ಸಿದ್ಧ ನಿಲಯ, ಬಸವ ನಗರ, ಗೋಕಾಕ - ೫೯೧ ೩೦೭

---

*(೬೫ನೇ ಪುಟದಿಂದ ) ಯೋಗ ಪ್ರವೇಶ.....*

ತೊಡೆಗಳಲ್ಲಿ ಎಷ್ಟು ಸೌಖ್ಯ ತೋರುತ್ತದೆಂಬುದನ್ನು ಹಾಗೂ ಮಾನಸಿಕವಾಗಿ ಎಂತಹ ಗೆಲುವು ಮೂಡುತ್ತದೆಂಬುದನ್ನು ಸ್ವಂತವಾಗಿ ಗ್ರಹಿಸಬಹುದು. ಬೆನ್ನುಹುರಿಯ ಸ್ಥಿತಿಸ್ಥಾಪಕತ್ವವನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಈ ಆಸನದಿಂದ ಸಾಧ್ಯವಿದೆ. ಹಲಾಸನದ ಸಂಪೂರ್ಣ ಪ್ರಯೋಜನ ಪಡೆಯಲು ಅದನ್ನು ಮಾಡಿದ ನಂತರ ಭುಜಂಗಾಸನವನ್ನು ಮಾಡುವುದು ಸೂಕ್ತವೆಂದು ಹೇಳುತ್ತಾರೆ. (ಅದನ್ನು ಮುಂದಿನ ಭಾಗದಲ್ಲಿ ಹೇಳಲಾಗುತ್ತದೆ).

ಇದನ್ನು ಮಾಡುವ ವಿಧಾನ ಸರಳವಾಗಿದೆ. ಬೆನ್ನ ಮೇಲೆ ಮಲಗಿ ಸರ್ವಾಂಗಾಸನದಲ್ಲಿ ಮಾಡುವಂತೆ ಕಾಲುಗಳನ್ನು ನಿಧಾನವಾಗಿ ೩೦ಡಿಗ್ರಿ, ೬೦ಡಿಗ್ರಿ, ೯೦ ಡಿಗ್ರಿಗಳಿಗೇರಿಸಿ. ಅಲ್ಲಿಗೆ ಅರ್ಧ-ಹಲಾಸನ ಆಯಿತೆನ್ನಬಹುದು. ಶರೀರದ ಮುಂಡ ಭಾಗವನ್ನು ನೆಲದ ಮೇಲೆಯೇ ಇರುವಂತೆ ಮಾಡಿ ಕಾಲುಗಳನ್ನು ಮಾತ್ರ ಹಿಂದಕ್ಕೆ (ಅಂದರೆ ತಲೆಯ ಕಡೆಗೆ) ಬಗ್ಗಿಸಿ. ಕ್ರಮೇಣ ಪೃಷ್ಠಭಾಗ ಹಾಗೂ ಬೆನ್ನಿನ ಕೆಳಗಿನ ಭಾಗಗಳನ್ನು ಹಿಂದಕ್ಕೆ ಬಗ್ಗಿಸಿ. ಹಾಗೆ ಶರೀರವನ್ನು ತಳ್ಳುವಾಗ ಮಾರ್ದವತೆ ಇರಬೇಕು, ಥಟ್ಟನೆ ಜಗ್ಗುವಂತಿರಬಾರದು. ಮುಂದುವರಿದು, 'ಕಾಲ್ಬೆರಳುಗಳು ನೆಲವನ್ನು ಮುಟ್ಟುವತನಕ ಹೀಗೆ ಶರೀರವನ್ನು ಬಗ್ಗಿಸಬೇಕು (ಚಿತ್ರ ನೋಡಿ). ಪೃಷ್ಠ ಮತ್ತು ತೊಡೆಗಳ ಒತ್ತಡವೆಲ್ಲಾ ಮುಂಡದ ಮಧ್ಯಭಾಗದ ಮೇಲಿರುತ್ತದೆ. ಕೈಗಳು ಚಾಚಿಕೊಂಡೇ ಇರುತ್ತವೆ. ಈಗ ಕಾಲ್ಬೆರಳುಗಳನ್ನು ನಿಧಾನವಾಗಿ ಹಿಂದಕ್ಕೆ ಸರಿಸುತ್ತಾ ಹೋಗಿ. ಈಗ ಒತ್ತಡವು ಮುಂಡದ ಮೇಲ್ಭಾಗಕ್ಕೆ ಬಂದಿರುತ್ತದೆ. ಕಾಲ್ಬೆರಳುಗಳು ಇನ್ನೂ ಹಿಂದಕ್ಕೆ ಹೋಗಲು ಸಾಧ್ಯವಿದೆಯೆ ? ಪ್ರಯತ್ನಿಸಿ ನೋಡಿ. ಸ್ವಲ್ಪಮಟ್ಟಿಗೆ ಸಾಧ್ಯ. ಈಗ ಕಡೆಯ ಹಂತವನ್ನು ಮುಟ್ಟಿದ್ದೀರಿ. ಈವರೆಗೆ ಕೈಗಳು ನಿಶ್ಚೇಷ್ಟವಾಗಿದ್ದುವು. ಈಗ ಕೈಗಳನ್ನು ತಲೆಯ ಹಿಂದಕ್ಕೆ ತಂದು ಬೆರಳುಗಳನ್ನು ಕೂಡಿಸಿ. ಆಗ ಬಹುಶಃ ಕಾಲ್ಬೆರಳುಗಳು ಇನ್ನೂ ಸ್ವಲ್ಪ ಹಿಂದಕ್ಕೆ ಹೋದಾವು. ಈಗ ಒತ್ತಡವು ಗಂಟಲ ಬಳಿಗೇ ಬಂದಿರುತ್ತದೆ. ಜಾಲಂಧರ ಬಂಧ ಅಪ್ರಯತ್ನ ಪೂರ್ವಕವಾಗಿ ಉಂಟಾಗಿರುತ್ತದೆ. (ಅಂದರೆ, ಗಲ್ಲವು ಎದೆಯನ್ನು ಒತ್ತುತ್ತಿರುತ್ತದೆ. ಸರ್ವಾಂಗಾಸನದಲ್ಲೂ ಇದೇ ಆಗುತ್ತದೆಯಾದರೂ ಅದರ ವಿಧಾನ ಬೇರೆ). ಆಸನದ ಪೂರ್ಣಾವಸ್ಥೆ ಇದೇ. ಯಥಾಸ್ಥಿತಿಗೆ ಮರಳುವಾಗ ಮತ್ತೆ ಎಲ್ಲ ಕ್ರಿಯೆಗಳನ್ನೂ ನಿಧಾನವಾಗಿಯೇ ಸಾಗುವಂತೆ ಮಾಡಬೇಕು. (ಮೊದಲು ಕೈಗಳು ಪಕ್ಕಕ್ಕೆ, ಆಮೇಲೆ ಕಾಲ್ಬೆರಳುಗಳು ಮುಂದಕ್ಕೆ, ಇತ್ಯಾದಿ).

ಮೊದಲ ದಿನದ ಅಭ್ಯಾಸದಲ್ಲೇ ಇದೆಲ್ಲಾ ಆಗಿಬಿಡಬೇಕೆಂಬ ಉತ್ಸಾಹ ಬೇಡ. ತೊಡೆಗಳು ಸಹಕಾರ ನೀಡಲಾರವು. ಒಂದೊಂದು ದಿನವೂ ಒಂದೊಂದು ಹಂತವನ್ನು ಸಾಕಷ್ಟು ಪ್ರಮಾಣದಲ್ಲಿ ಸಿದ್ಧಿಸಿಕೊಂಡರೆ ಮುಂದಿನ ಹಂತಕ್ಕೆ ಸುಲಭವಾಗಿ ಹೋಗಬಹುದು. ಹೀಗೆ ಮಾಡುತ್ತಾ ಹೋದರೆ ಎರಡು ವಾರದೊಳಗಾಗಿ ಹಲಾಸನವನ್ನು ಲಕ್ಷಣವಾಗಿ ಮಾಡಬಹುದು, ಹಸನ್ಮುಖಿಗಳಾಗಬಹುದು. ಇಡೀ ಆಸನಕ್ಕೆ ಮೂರು - ನಾಲ್ಕು ನಿಮಿಷಗಳು ಸಾಕಾಗಬಹುದು. ಉಸಿರಾಟದಲ್ಲಿ ತೊಂದರೆಯಾಗದಿರುವಂತೆ ಆಸನದ ಹಂತಗಳನ್ನು ಕ್ರಮಿಸುತ್ತಾ ಮುಂದೆ ಸಾಗಿದರೆ ಆಸನದ ಪೂರ್ಣಾವಸ್ಥೆಯಲ್ಲಿ ನಾಲ್ಕು ನಿಮಿಷಗಳ ಕಾಲ ಸುಖವಾಗಿರಬಹುದು. ಒಂದೇ ಏಟಿಗೆ ಸಿದ್ಧಿಸಿಕೊಳ್ಳಬೇಕೆಂದು ಹಟ ಮಾಡಿ ಮುನ್ನುಗ್ಗಿದರೆ ಶರೀರದ ಯಾವುದಾದರೂ ಅಂಗಕ್ಕೆ ಜಖಂ ಆಗಬಹುದು. ಆಸನ ಮಾಡುವಾಗ ಹೀಗೆ ಜಖಂ ಆದರೆ ಆಸನವನ್ನು ಮಾಡಿದ ವಿಧಾನ ಸರ್ವಥಾ ಸರಿಯಲ್ಲವೆಂದು ಧಾರಾಳವಾಗಿ ಹೇಳಬಹುದು.

ೲೲೲ

RNI Regn. No. KARKAN/1999/614 REGD. CPMG / KA / BG – 7 / 2000 Licenced to post without prepayment. Licence No. WPP(CO)-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna